

# ಚಿತ್ರಕಲಾವಿದ ವಿ.ಬಿ.ಹಿರೇಗೌಡರ
## ಬದುಕು ಮತ್ತು ಕಲಾಕೃತಿಗಳು

ಒಂದು ಅಧ್ಯಯನ

ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ

ಸಂಶೋಧಕರು
ರವೀಂದ್ರ ಎಸ್.ಕಮ್ಮಾರ

ಮಾರ್ಗದರ್ಶಕರು
ಡಾ.ಎಸ್.ಸಿ.ಪಾಟೀಲ
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು





ಲಲಿತಕಲಾ ನಿಕಾಯ
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ
೨೦೦೮

# ಚಿತ್ರಕಲಾವಿದ ವಿ.ಬಿ.ಹಿರೇಗೌಡರ

## ಬದುಕು ಮತ್ತು ಕಲಾಕೃತಿಗಳು

ಒಂದು ಅಧ್ಯಯನ

ಪಿಹೆಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರಪಡಿಸಿದ ಮಹಾಪ್ರಬಂಧ

......................................

ಸಂಶೋಧಕರು
**ರವೀಂದ್ರ ಎಸ್.ಕಮ್ಮಾರ**



ಮಾರ್ಗದರ್ಶಕರು
**ಡಾ.ಎಸ್.ಸಿ.ಪಾಟೀಲ**
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು



**ಲಲಿತಕಲಾ ನಿಕಾಯ**
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ
೨೦೦೮

# ಪ್ರಮಾಣ ಪತ್ರ

**ಚಿತ್ರಕಲಾವಿದ ಎ.ಬಿ.ಹಿರೇಗೌಡರ, ಬದುಕು ಮತ್ತು ಕಲಾಕೃತಿಗಳು : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಡಾ.ಎಸ್.ಸಿ.ಪಾಟೀಲ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಪಿಹೆಚ್.ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

(ರವೀಂದ್ರ ಎಸ್.ಕಮ್ಮಾರ)
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ದಿನಾಂಕ : ೧೨ ಸೆಪ್ಟಂಬರ್ ೨೦೦೮
ಸ್ಥಳ : ವಿದ್ಯಾರಣ್ಯ

# ಪ್ರಮಾಣ ಪತ್ರ

**ರವೀಂದ್ರ ಎಸ್. ಕಮ್ಮಾರ** ಇವರು ಬರೆದು ಸಾದರಪಡಿಸಿದ **ಚಿತ್ರಕಲಾವಿದ ವಿ.ಬಿ.ಹಿರೇಗೌಡರ, ಬದುಕು ಮತ್ತು ಕಲಾಕೃತಿಗಳು : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಮಹಾಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು ಅವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯದ ಲಲಿತಕಲಾ ನಿಕಾಯದ ದೃಶ್ಯಕಲಾ ವಿಭಾಗಕ್ಕೆ ಪಿಹೆಚ್.ಡಿ. ಪದವಿಗಾಗಿ ಈ ಮಹಾಪ್ರಬಂಧವನ್ನು ಸಿದ್ಧಪಡಿಸಿದ್ದಾರೆ.

ಪ್ರಸ್ತುತ ಮಹಾಪ್ರಬಂಧ ಇಡಿಯಾಗಿ, ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

(ಡಾ.ಎಸ್.ಸಿ.ಪಾಟೀಲ)
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ದೃಶ್ಯಕಲಾ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ

ದಿನಾಂಕ : ೧೨ ಸೆಪ್ಟಂಬರ್ ೨೦೦೮
ಸ್ಥಳ : ವಿದ್ಯಾರಣ್ಯ

**ಚಿತ್ರಕಲಾವಿದ ಎ.ಬಿ.ಹಿರೇಗೌಡರ**
**ಬದುಕು ಮತ್ತು ಕಲಾಕೃತಿಗಳು**
ಒಂದು ಅಧ್ಯಯನ

........................

## ಪರಿವಿಡಿ



ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವೈಧಾನಿಕತೆ ಮತ್ತು ವ್ಯಾಪ್ತಿ

ಕನ್ನಡನಾಡು ಚಿತ್ರಕಲೆಯ ತವರು. ಬಾದಾಮಿ, ಲೇಪಾಕ್ಷಿ , ಹಂಪಿ, ಸೀಬಿ, ಶ್ರೀರಂಗಪಟ್ಟಣ, ಶ್ರವಣಬೆಳಗೊಳ ಮುಂತಾದ ಕಡೆಗಳಲ್ಲಿನ ಲೋಕಪ್ರಸಿದ್ಧ ಭಿತ್ತಿಚಿತ್ರಗಳ ಖ್ಯಾತಿ ಈ ಮಣ್ಣಿನ ಕಲಾವಿದರದು. ಇಂಥ ಒಂದು ಭವ್ಯ ಪರಂಪರೆ ಇಂದಿಗೂ ನಮ್ಮ ನಾಡಿನಲ್ಲಿ ಉಳಿದು ಬಂದಿರುವುದು ಅಭಿಮಾನದ ವಿಷಯವಾಗಿದೆ. ಹೀಗೆ ನಮ್ಮ ಕಲಾವಿದರು ಕಲೆಯ ನಾನಾ ಪ್ರಕಾರಗಳಲ್ಲಿ ಅತ್ಯುತ್ತಮ ಕೌಶಲ್ಯ ಮೆರೆದ ನಿದರ್ಶನಗಳು ನಮ್ಮಲ್ಲಿ ಹೇರಳವಾಗಿವೆ.

ಭಾರತೀಯ ಪರಂಪರೆ ಹಾಗೂ ಪಾಶ್ಚಾತ್ಯ ತಂತ್ರಗಳ ಅತ್ಯುತ್ತಮ ಸಮನ್ವಯವನ್ನು ಚಿತ್ರಕೃತಿಗಳಲ್ಲಿ ಸಾಧಿಸಿದ ಕಲಾವಿದರನೇಕರು ನಮ್ಮಲ್ಲಿ ಆಗಿ ಹೋಗಿದ್ದಾರೆ. ಪೌರಾಣಿಕ, ಐತಿಹಾಸಿಕ ಹಾಗೂ ಸಾಮಾಜಿಕ ಚಿತ್ರಗಳಲ್ಲಿ ಅನನ್ಯ ಕಲಾಸಿದ್ಧಿ ಪಡೆದ, ಸಂಪ್ರದಾಯನಿಷ್ಠ ಕಲಾವಿದರಿಗೆ ಸ್ಫೂರ್ತಿಯಾಗಿ, ಕಲಾವಿದ ಚಿತ್ರಕಲೆಯಿಂದ ಹೇಗೆ ಜೀವಿಸಿ, ವಿರಾಜಿಸಬಹುದೆಂಬುದನ್ನು ತೋರಿಸಿ, ಸುಖದ ಬಾಳನ್ನು ಕಂಡ ಹಿರಿಯ ಕಲಾವಿದರಿದ್ದಾರೆ. ಹಾಗೆಯೇ ರಾಜಾಶ್ರಯದಲ್ಲಿ ಕಲಾಕೃಷಿಗೈದ ಅತ್ಯುತ್ತಮ ಕಲಾವಿದರು, ಅಲಂಕಾರಕಲೆ, ಸೂಕ್ಷ್ಮಕಲೆಗಳಲ್ಲಿ ಖ್ಯಾತಿವೆತ್ತ ಮತ್ತು ಆಧುನಿಕ ಕಲೆಯಲ್ಲಿ ಪ್ರಯೋಗ ನಡೆಸಿದ ಹಾಗೂ ನಡೆಸುತ್ತಿರುವ ಈ ಕಲಾವಿದರ ಅಮೂಲ್ಯ ರಚನೆಗಳು ನಮ್ಮ ನಾಡಿಗೆ ಕೀರ್ತಿಯನ್ನು ತಂದುಕೊಟ್ಟಿರುವುದಲ್ಲದೆ, ಚಿತ್ರಕಲಾ ಕ್ಷೇತ್ರದಲ್ಲಿ ಇವರ ಸಾಧನೆಗಳು ಶಾಶ್ವತವಾಗಿ ನಿಂತಿರುವುದು ಹೆಮ್ಮೆಯ ಸಂಗತಿಯಾಗಿದೆ.

ಕಲಾವಿದರು ತಮ್ಮ ವ್ಯಾಪ್ತಿಯಲ್ಲಿ ಅನೇಕ ರೀತಿಯ ಸಾಧನೆ ಮಾಡಿ ಈ ಕನ್ನಡ ನೆಲದ ಸೌರಭವನ್ನು ನಾಡಿನೆಲ್ಲೆಡೆ ಪಸರಿಸಿದ್ದಾರೆ. ಈ ಕಲಾವಿದರ ಅಮೂಲ್ಯ ಕೊಡುಗೆಗಳು ಇಂದಿನ ಯುವ ಪೀಳಿಗೆಗೂ ಕೊಂಡಿಯಾಗಿ ಹೊಸ ಚೈತನ್ಯ ನೀಡುತ್ತಾ ಬಂದಿವೆ.

ಪ್ರಸ್ತುತ ಸ್ಥಿತಿಯಲ್ಲಿ ಕಲೆ-ಕಲಾವಿದರ ಕುರಿತಾದ ವಿವರ ಮತ್ತು ಅವರ ಭಾವನಾತ್ಮಕ ತುಡಿತಗಳನ್ನು ಹಾಗೂ ಪ್ರಕಟಿತ ವಿಮರ್ಶೆಗಳನ್ನು ಇಂದು ನಾವು ದಾಖಲಿಸುವ ಕಾರ್ಯ ಮಾಡಬೇಕಾಗಿದೆ. ನಾಡಿನ ಉದ್ದಗಲಕ್ಕೂ ನಮ್ಮ ಕಲಾವಿದರ ಕಲಾ ಸಾಧನೆ, ಕಲಾಜೀವನ, ಕ್ಷೇತ್ರಸೇವೆ ಇವು ನಮ್ಮ ಗಮನಕ್ಕೆ ಎಷ್ಟೋ ಸಲ ಬಾರದೇ ಮಸುಕಾಗಿ ಹೋಗಿವೆ. ಆದರೆ ಅವು ನಿರಂತರವಾಗಿ ಮುಂದಿನ ಜನಾಂಗಕ್ಕೂ ಪರಿಚಯವಾಗಬೇಕಾದರೆ ಅವರುಗಳ ಅಧ್ಯಯನ ಕ್ರಮವನ್ನು ಹಾಗೂ ಅವರ ರಚನಾ ಕೈಂಕರ್ಯವನ್ನು ಕಾರ್ಯರೂಪಕ್ಕೆ ತರುವುದು ಇಂದು ತೀರಾ ಅವಶ್ಯಕವಾಗಿದೆ.

ಹೀಗೆ ಚಿತ್ರಕಲಾ ಕ್ಷೇತ್ರದಲ್ಲಿ ಅತ್ಯಂತ ಉನ್ನತ ಮಟ್ಟದ ಸಾಧನೆಗೈದ ಹಿರಿಯ ಕಲಾವಿದ ವಿ.ಬಿ.ಹಿರೇಗೌಡರ ಅವರ ಜೀವನ, ಸಾಧನೆಯ ಹಾದಿ, ಚಿತ್ರಕಲಾ ಕ್ಷೇತ್ರಕ್ಕೆ ನೀಡಿದ ಕೊಡುಗೆಯನ್ನು ಅಧ್ಯಯನದ ಮೂಲಕ ದಾಖಲೀಕರಣ ಮಾಡುವ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ವಿ.ಬಿ.ಹಿರೇಗೌಡರ (ವಿರುಪಾಕ್ಷಗೌಡ ಬಸವಗೌಡ ಹಿರೇಗೌಡರ) ಹೆಸರು ಇಂದು ಕರ್ನಾಟಕದ ದೃಶ್ಯಕಲಾ ಪುಟಗಳಲ್ಲಿ ಉಲ್ಲೇಖನಾರ್ಹವೆನಿಸಿದೆ. ಇವರು ಗೌರವಾನ್ವಿತ ರೈತಕುಟುಂಬದಲ್ಲಿ ಜನಿಸಿದರೂ ಬಾಲ್ಯದಿಂದಲೇ ಕಲಾವಿದರಾಗಿ ಹೊರಹೊಮ್ಮುವ ಆಸೆ ಮನದಾಳದಲ್ಲಿ ಹುಟ್ಟಿದ್ದರಿಂದ ಮಾಧ್ಯಮಿಕ ಶಿಕ್ಷಣದ ನಂತರ ಅವರ ಉಚ್ಚ ಶಿಕ್ಷಣ ಕಲೆಯ ಕಡೆಗೆ ತಿರುಗಿತು. ಇವರು ೧೯೬೭ರಲ್ಲಿ ಹಿರಿಯ ಕಲಾಗುರುಗಳಾದ ಡಿ.ವಿ.ಹಾಲಭಾವಿ ಹಾಗೂ ಡಾ.ಎಮ್.ವಿ.ಮಿಣಜಗಿ ಇವರಲ್ಲಿ ಕಲಾಧ್ಯಯನ ಮಾಡಿ ರಾಜ್ಯಕ್ಕೆ ಪ್ರಥಮ ಸ್ಥಾನ ಪಡೆದರು. ಮುಂದೆ ೧೯೬೭ರಲ್ಲಿ ಆರ್ಟ ಮಾಸ್ಟರ ಪದವಿ ಪಡೆದರು.

೧೯೬೭ರಲ್ಲಿ ದಾವಣಗೆರೆ ಸರಕಾರಿ ಚಿತ್ರಕಲೆ ಮತ್ತು ಕರಕುಶಲ ಶಾಲೆಗೆ ಉಪನ್ಯಾಸಕರಾಗಿ ನೇಮಕಗೊಂಡು ನಂತರ ೧೯೭೫ರಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಅದೇ ಶಾಲೆಯ ಪ್ರಾಚಾರ್ಯರಾಗಿ ನೇಮಕಗೊಂಡ ಹಿರೇಗೌಡರು ೨೦೦೩ ಮಾರ್ಚ ೩೧ರವರೆಗೆ ಅವಿರತ ಸೇವೆ ಸಲ್ಲಿಸಿ, ಅಂದೇ ನಿವೃತ್ತರಾದರು. ಸುಮಾರು ೨೮ವರ್ಷಗಳ ಸುದೀರ್ಘ ಅವಧಿಗೆ ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿದ ಹಿರೇಗೌಡರಿಗೆ ಸಂದ ಪ್ರಶಸ್ತಿಗಳು, ಗೌರವಗಳು ಹಲವು. ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿಯಿಂದ ಹಿಡಿದು ರಾಷ್ಟ್ರ ಮಟ್ಟದ ಗೌರವಾನ್ವಿತ ಪ್ರಶಸ್ತಿಯಾದ "ಜ್ಯುವೆಲ್ ಆಫ್ ಇಂಡಿಯಾ" ಹಾಗೂ "ಇಂದಿರಾಗಾಂಧಿ ಎಕ್ಸಲೆನ್ಸ್ ಪ್ರಶಸ್ತಿ" ಇವರ ಪ್ರತಿಭೆಗೆ ದಕ್ಕಿದೆ. ಇವೆಲ್ಲಕ್ಕೂ ಮಿಗಿಲಾಗಿ ಇವರು ಕಲಾಕ್ಷೇತ್ರಕ್ಕೆ ನೀಡಿದ ಕೊಡುಗೆಯೆಂದರೆ ಸುಮಾರು ೧೦,೦೦೦ಕ್ಕೂ ಮಿಕ್ಕಿ ರೇಖಾಚಿತ್ರಗಳು, ೨೦೦೦ಜಲವರ್ಣಚಿತ್ರಗಳು ಮತ್ತು ೧೦೦೦ದಷ್ಟು ತೈಲವರ್ಣ, ಅಕ್ರಿಲಿಕ್, ಮಿಶ್ರ ಮಾಧ್ಯಮದ ಕಲಾಕೃತಿಗಳನ್ನು ರಚನಾ ಶ್ರಮ ನಾಡಿನ ದೃಶ್ಯಕಲಾ ಪ್ರಪಂಚಕ್ಕೆ ನಿದರ್ಶನವಾಗಿವೆ. ಕಲಾಶಿಕ್ಷಣ ತಜ್ಞರಾಗಿ, ಆಡಳಿತಗಾರರಾಗಿ ಸಮರ್ಥವಾಗಿ ಕಾರ್ಯನಿರ್ವಹಿಸಿರುವ ಹಿರೇಗೌಡರು ಎರಡು ಅವಧಿಗೆ ಕರ್ನಾಟಕ ಲಲಿತಕಲಾ ಅಕಾಡೆಮಿಯ

ಸದಸ್ಯರಾಗಿ, ರಾಜ್ಯದ ಐದು ವಿಶ್ವವಿದ್ಯಾಲಯಗಳ ದೃಶ್ಯಕಲಾ ಅಧ್ಯಯನ ಮಂಡಳಿಯ ಸದಸ್ಯರಾಗಿ, ಕುವೆಂಪು ವಿಶ್ವವಿದ್ಯಾನಿಲಯದ ಶಿಕ್ಷಣ ಮಂಡಳಿ ಹಾಗೂ ಸೆನೆಟ್ ಸದಸ್ಯರಾಗಿ ಸೇವೆ ಸಲ್ಲಿಸಿರುವ ಇವರು ಇತರ ಸಾಂಘಿಕ, ಸಾಂಸ್ಕೃತಿಕ, ಸಾಹಿತ್ಯಿಕ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಿದ್ದಾರೆ.

ಹೀಗೆ ಕರ್ನಾಟಕದ ಚಿತ್ರಕಲಾಕ್ಷೇತ್ರಕ್ಕೆ ತಮ್ಮದೇ ಆದ ವಿಶಿಷ್ಟ ಕೊಡುಗೆಯನ್ನು ನೀಡಿರುವ ಇಂದಿನ ಹಿರಿಯ ತಲೆಮಾರಿನ ಕಲಾವಿದರಲ್ಲಿ ಗಮನಾರ್ಹವಾಗಿ ಗುರುತಿಸಿಕೊಂಡಿರುವ ಹಿರೇಗೌಡರ ಕುರಿತು ಇದುವರೆಗೆ ಯಾವುದೇ ಬಗೆಯ ಅಧ್ಯಯನಗಳು ಆಗದೇ ಇರುವ ಹಿನ್ನೆಲೆಯಲ್ಲಿ ಪ್ರಸ್ತುತ **ಚಿತ್ರಕಲಾವಿದ ವಿ.ಬಿ.ಹಿರೇಗೌಡರ: ಬದುಕು ಮತ್ತು ಕಲಾಕೃತಿಗಳು : ಒಂದು ಅಧ್ಯಯನ** ಎಂಬ ವಿಷಯದ ಕುರಿತು ಅಧ್ಯಯನವನ್ನು ಮಾಡುವ ಉದ್ದೇಶವನ್ನು ಹೊಂದಲಾಗಿದೆ.

**ಅಧ್ಯಯನದ ಉದ್ದೇಶ**

ಕಲಾವಿದ ವಿ.ಬಿ.ಹಿರೇಗೌಡರ ಅಧ್ಯಯನವೆಂದರೆ ಅವರ ಒಟ್ಟು ಬದುಕಿನ ಸಮಕಾಲೀನ ಕಲೆ ಹಾಗೂ ಕಲಾವಿದರ ಅಧ್ಯಯನವೆಂದೇ ಅರ್ಥ. ಹೀಗಾಗಿ ಹಿರೇಗೌಡರ ಅಧ್ಯಯನದೊಂದಿಗೆ ಸಮಕಾಲೀನ ಕಲೆ, ಕಲಾಶಿಕ್ಷಣ, ಕಲಾವಿದರ ಮಹತ್ವದ ವಿವರಗಳನ್ನು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ವಿ.ಬಿ.ಹಿರೇಗೌಡರ ರೇಖಾಚಿತ್ರಗಳು, ವರ್ಣಚಿತ್ರಗಳು ಸಂಭ್ರಮಾತ್ಮಕ ನೆಲೆಯಲ್ಲಿ ರೂಪುಗೊಂಡಿವೆ. ಹೀಗಾಗಿ ಆ ಚಿತ್ರಗಳು ಒಂದು ಬಗೆಯಲ್ಲಿ ರಮಣೀಯ ಅನುಭವವನ್ನು ವೀಕ್ಷಕನಿಗೆ ಕೊಡುತ್ತವೆ. ಇವರು ಆಧುನಿಕ ಶೈಲಿಯಲ್ಲಿ ಸಮಾಜಮುಖಿಯಾದ ಚಿತ್ರಗಳನ್ನು ರಚಿಸುವುದರ ಮೂಲಕ ಸಮಾಜಕ್ಕೆ ಸ್ಪಂದಿಸುತ್ತಾರೆ. ಹಾಗೆಯೇ ಅಮೇರಿಕದ ವರ್ಲ್ಡ್‌ಟ್ರೇಡ್ ಸೆಂಟರ್ ದುರಂತ, ಗುಜರಾತಿನ ಭೂಕಂಪ ಮತ್ತು ಇತ್ತೀಚಿನ ಕೋಮುದಳ್ಳುರಿ, ಸುನಾಮಿ, ಏಡ್ಸ್ ಇನ್ನೂ ಮುಂತಾದ ರಾಷ್ಟ್ರೀಯ ದುರಂತಗಳು ಹಾಗೂ ಭೌತಿಕ ವಿಸ್ಮಯಗಳಾದ ಗೀತಸಂಗೀತ, ಸೂರ್ಯಗ್ರಹಣದಂತಹ ಕಾಲಬದ್ಧ ಘಟನೆಗಳನ್ನು ಹೃದಯಸ್ಪರ್ಶಿಯಾಗಿ ನವ್ಯಶೈಲಿಯಲ್ಲಿ ವರ್ಣಚಿತ್ರ ಮತ್ತು ರೇಖಾಚಿತ್ರಗಳಲ್ಲಿ ತಮ್ಮ ಸಾಂದರ್ಭಿಕ ತುಡಿತಗಳನ್ನು ಪ್ರಕಟಿಸಿದ್ದಾರೆ.

ಹಿರೇಗೌಡರ ಕಲಾಕೃತಿಗಳು ಯುವ ಕಲಾವಿದರಿಗೆ ಸ್ಫೂರ್ತಿಯನ್ನು ನೀಡುವ ಸತ್ವವನ್ನು ಹೊಂದಿವೆ. ಆ ಸತ್ವಗಳಲ್ಲಿ ಸಂಯೋಜನಾ ವಿನ್ಯಾಸ, ವರ್ಣಛಾಯೆ, ತಂತ್ರಪ್ರಯೋಗ, ಕಲಾಕೌಶಲ್ಯ ಇನ್ನೂ ಮುಂತಾದ ರಚನಾತಂತ್ರಗಳು ಭಿನ್ನತೆಯ ನೆಲೆಯಲ್ಲಿ ಪ್ರಕಟಗೊಂಡಿವೆ. ಇವರ ಸಾವಿರಾರು ಕಲಾಕೃತಿಗಳು ವೈವಿಧ್ಯಮಯವಾಗಿದ್ದು, ಅವುಗಳ ವಸ್ತು–ವಿಷಯ, ಮಾಧ್ಯಮದ ಹಾಗೂ ತಂತ್ರಗಳ ಕುರಿತು, ವರ್ಣವಿನ್ಯಾಸ, ರೇಖಾವಿನ್ಯಾಸಗಳ ಸ್ವರೂಪದ ಹಿನ್ನೆಲೆಯಲ್ಲಿ ವಿಶೇಷವಾದ ಅಧ್ಯಯನ ಮಾಡುವ ಉದ್ದೇಶವು ಇಲ್ಲಿದೆ. ಹಿರೇಗೌಡರು ತಮ್ಮ ಕಲಾಶಾಲೆಯ ಪರಿಧಿಯ ಮೂಲಕ ನೂರಾರು ಕಲಾವಿದರನ್ನು ನಾಡಿಗೆ ನೀಡಿದ್ದಾರೆ. ಅವರ ಈ ಕಲಾ ಚಟುವಟಿಕೆಯ ಕೊಡುಗೆಯನ್ನು ಗುರುತಿಸುವುದು ಕೂಡ ಈ ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

ವಿ.ಬಿ.ಹಿರೇಗೌಡರ ಅವರ ಕಲಾಕೃತಿಗಳ ಮೇಲಾದ ಪ್ರಭಾವ, ಪ್ರೇರಣೆ ಮತ್ತು ಇವರ ಕಲಾಕೃತಿಗಳು ಬೇರೆ ಕಲಾವಿದರಿಗೆ ನೀಡಿದ ಸ್ಫೂರ್ತಿ, ಪ್ರೇರಣೆಗಳನ್ನು ಗುರುತಿಸುವ ದೆಸೆಯಲ್ಲಿಯೂ ಈ ಅಧ್ಯಯನದಲ್ಲಿ ಗಮನಹರಿಸಲಾಗುವುದು. ಇವರು ಒಬ್ಬ ಕಲಾಶಿಕ್ಷಕರಾಗಿ ಉಳಿಯದೇ ಕಲಾಶಿಕ್ಷಣದ ಚಿಂತಕರಾಗಿ, ತಜ್ಞರಾಗಿ ಮಾಡಿದ ವಿವಿಧ ಕಾರ್ಯಚಟುವಟಿಕೆಗಳನ್ನು ಗಮನಿಸುವುದು ಈ ಅಧ್ಯಯನದ ಮುಖ್ಯ ಉದ್ದೇಶಗಳಲ್ಲೊಂದು.

ಕಲಾಕ್ಷೇತ್ರಕ್ಕೆ ಹಿರೇಗೌಡರ ಇವರ ಸಾಧನೆಯ ವಿವಿಧ ರೀತಿಯ ಕೊಡುಗೆಗಳನ್ನು, ಕಲಾವಿದರಾಗಿ ಅವರ ಸ್ಥಾನಮಾನಗಳನ್ನು, ಬೆಳವಣಿಗೆಯ ವಿವಿಧ ಹಂತಗಳನ್ನು ಒಂದೆಡೆಗೆ ದಾಖಲಿಸುವ ಮಹತ್ವದ ಕಾರ್ಯವನ್ನು ಈ ಅಧ್ಯಯನದಲ್ಲಿ ಮಾಡಲಾಗುವುದು. ಇವರ ಕಲಾಕೃತಿಗಳ ಪ್ರಮುಖ ಧೋರಣೆಗಳನ್ನು ಗುರುತಿಸುವ ಮತ್ತು ಅವರ ಕಲಾಕೃತಿಗಳು ಸಮಾಜದ ಮೇಲೆ ಮೂಡಿಸಿದ ಪರಿಣಾಮದ ಸೂಕ್ಷ್ಮ ಒಳನೋಟಗಳನ್ನು ಗುರುತಿಸುವ ಪ್ರಯತ್ನವನ್ನು ಸಹ ಇಲ್ಲಿ ಮಾಡಲಾಗುವುದು. ಈ ಹಿನ್ನೆಲೆಯಲ್ಲಿ ಸಮಕಾಲೀನ ಕಲಾಸಂದರ್ಭದಲ್ಲಿ ಹಿರೇಗೌಡರ ಜೀವನ–ಸಾಧನೆ–ಸಿದ್ಧಿ ಕೊಡುಗೆಗಳನ್ನು ಕುರಿತು ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

**ಚಿತ್ರಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳು**

ಕರ್ನಾಟಕದ ಸಂದರ್ಭದಲ್ಲಿ ಚಿತ್ರಕಲಾ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನಾ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದಾಗಿದೆ. ಏಕೆಂದರೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆಗಳ ಕುರಿತಾದ ಅಧ್ಯಯನಕ್ಕೆ ಅವಕಾಶ ದೊರಕಿದ್ದು ತೀರ ಇತ್ತೀಚೆಗಷ್ಟೆ. ೧೯೯೦ರ ದಶಕದಲ್ಲಿ ಈ ಅಧ್ಯಯನಗಳು ತೀವ್ರಗೊಂಡು ಈಗಷ್ಟೇ ತನ್ನ ಶೈಶವಾವಸ್ಥೆಯನ್ನು ಕಳೆದು ಯೌವ್ವನಕ್ಕೆ ಕಾಲಿಡುತ್ತಿವೆ. ೧೯೮೦ರ ದಶಕದಿಂದ ಕರ್ನಾಟಕದಲ್ಲಿ ನಡೆದ ದೃಶ್ಯಕಲಾ ಅಧ್ಯಯನಗಳ ಸ್ಥೂಲವಾದ ವಿವರವನ್ನು ಈ ಕೆಳಗೆ ಸಮೀಕ್ಷಿಸಿ ಕೊಡಲಾಗಿದೆ.

**ಪಿಹೆಚ್.ಡಿ.ಮಹಾಪ್ರಬಂಧಗಳು**

೧೯೮೦ರ ದಶಕದಿಂದ ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಮೊದಲಬಾರಿಗೆ ವಿಶ್ವವಿದ್ಯಾಲಯ ಮಟ್ಟದಲ್ಲಿ ಚಿತ್ರಕಲೆ ಕುರಿತು ಸಂಶೋಧನಾತ್ಮಕ ಅಧ್ಯಯನ ಪ್ರಾರಂಭಗೊಂಡಿರುವುದು ಕಂಡುಬರುತ್ತದೆ. ಡಾ.ಎಸ್.ಸಿ.ಪಾಟೀಲರು ೧೯೮೩ರಲ್ಲಿ ಕರ್ನಾಟಕ ವಿ.ವಿ.ಯ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ ಮಂಡಿಸಿದ **ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ : ಒಂದು ಅಧ್ಯಯನ**[1] ಎಂಬ ಸಂಶೋಧನ ಕಿರು ಪ್ರಬಂಧವು ಈ ಕ್ಷೇತ್ರದ ಪ್ರಥಮ ಅಧ್ಯಯನದ ಕಾರ್ಯವೆಂದು ದಾಖಲಾಗಿದೆ. ೧೯೮೭ರಲ್ಲಿ ಡಾ.ಬಿ.ಕೆ.ಹಿರೇಮಠರವರು **ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ**[2] ಎಂಬ ಪಿಹೆಚ್.ಡಿ. ಮಹಾಪ್ರಬಂಧದಲ್ಲಿ ಹಸ್ತಪ್ರತಿ ಚಿತ್ರಕಲೆ ಕುರಿತಂತೆ ಕೆಲವು ಅಧ್ಯಾಯಗಳನ್ನು ಮೀಸಲಾಗಿಟ್ಟು ಅಧ್ಯಯನ

೦೧. ಡಾ. ಎಸ್.ಸಿ.ಪಾಟೀಲ : ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ, ಕರ್ನಾಟಕ ವಿ.ವಿ.,೧೯೮೩
೦೨. ಡಾ. ಬಿ.ಕೆ.ಹಿರೇಮಠ : ಕನ್ನಡ ಹಸ್ತಪ್ರತಿಗಳು, ಪಿಹೆಚ್.ಡಿ.ಮ.ಪ್ರ. ಕರ್ನಾಟಕ ವಿ.ವಿ.,೧೯೮೭

ಮಾಡಿದ್ದಾರೆ. ಇದರ ನಂತರ ೧೯೯೧ರಲ್ಲಿ ಕರ್ನಾಟಕದಲ್ಲಿ ಜನಪದ ಚಿತ್ರಕಲೆಯನ್ನೇ ಸಂಶೋಧನೆಯ ಮುಖ್ಯ ವಿಷಯವನ್ನಾಗಿಟ್ಟಕೊಂಡು ಕರ್ನಾಟಕ ವಿ.ವಿ.ಗೆ ಮಂಡಿಸಿದ ಪಿಹೆಚ್.ಡಿ. ಮಹಾಪ್ರಬಂಧ **ಕರ್ನಾಟಕದ ಜನಪದ ಚಿತ್ರಕಲೆ**[೩] ಈ ಮಹಾಪ್ರಬಂಧವನ್ನು ಡಾ.ಎಸ್.ಸಿ.ಪಾಟೀಲರು ಸಿದ್ಧಪಡಿಸಿದ್ದು ದೃಶ್ಯಕಲಾ ಕ್ಷೇತ್ರದ ಮೊದಲ ಅಧ್ಯಯನ ಎಂಬ ಅಗ್ಗಳಿಕೆಗೆ ಪಾತ್ರವಾಗಿದೆ. ನಂತರದ ದಿನಗಳಲ್ಲಿ ೧೯೯೫ರಲ್ಲಿ ಡಾ. ಅ.ಲ.ನರಸಿಂಹನ್ ಅವರು  ಬೆಂಗಳೂರು ವಿ.ವಿ.ಗೆ ಮಂಡಿಸಿದ ಪಿಎಚ್.ಡಿ. ಮಹಾಪ್ರಬಂಧ **ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು,**[೪] ೧೯೯೭ರಲ್ಲಿ ಡಾ.ಸಂಪದಾ ಭಟ್ ಅವರ **ಹಿಂದೂಸ್ತಾನಿ ಸಂಗೀತ ಹಾಗೂ ರಾಗಮಾಲ ಚಿತ್ರಗಳು,**[೫] ಬೆಂಗಳೂರು ವಿಶ್ವವಿದ್ಯಾಲಯಕ್ಕೆ, ೧೯೯೭ರಲ್ಲಿ ಡಾ.ಪುಷ್ಪಾ ದ್ರಾವಿಡ ಇವರು ಮಂಡಿಸಿದ **ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ ಜೀವನ ಮತ್ತು ಕಲಾಕೃತಿಗಳು.**[೬] ೨೦೦೧ ರಲ್ಲಿ ಡಾ.ಯಾದಪ್ಪ ಪರದೇಶಿಯವರ **ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಒಂದು ಅಧ್ಯಯನ,**[೭] ೨೦೦೨ರಲ್ಲಿ ಡಾ.ಶಿವಾನಂದ ಬಂಟನೂರು ಇವರ **ಕರ್ನಾಟಕದ ಜನಪದ ಶಿಲ್ಪಕಲೆ, ಒಂದು ಅಧ್ಯಯನ,**[೮] ೨೦೦೨ರಲ್ಲಿ ಡಾ.ಗಿರೀಶ ಅವರ **ಬುಡಕಟ್ಟು ಚಿತ್ರಕಲೆ,**[೯] ೨೦೦೨ರಲ್ಲಿ ಡಾ.ಲಕ್ಷ್ಮೀದೇವಿಗವಾಯಿಯವರ ಕಲಾವಿದ **ಎಂ.ಎ.ಚೆಟ್ಟಿಯವರ ಜೀವನ, ಕಲಾಕೃತಿಗಳು-ಒಂದು ಅಧ್ಯಯನ,**[೧೦] ೨೦೦೨ರಲ್ಲಿ ಶರಣಪ್ಪ ಕೋಲ್ಕಾರ ಅವರ **ಕೊಪ್ಪಳ-ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ,**[೧೧] ೨೦೦೨ರಲ್ಲಿ ಡಾ.ಸೌಮ್ಯ ಅವರ **ಯಂತ್ರಾ ದಿ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರೆನ್ಸ್ ಟು ಕಾಂಟೆಂಪರರಿ ತಾಂತ್ರಿಕ ಆರ್ಟಿಸ್ಟ್,**[೧೨] ೨೦೦೨ರಲ್ಲಿ ಡಾ.ಪ್ರಮೀಳಾ ಲೋಚನ ಅವರ **ಮೈಂಡ್ ಮ್ಯೂಜಿಕ್ ಅಂಡ್ ಕಲರ್ ಎಕ್ಸಪೋಜಿಸ್ ಅಂಡ್ ಡೆವೆಲಪ್‌ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪರರಿ ಪೇಂಟಿಂಗ್,**[೧೩] ೨೦೦೩ರಲ್ಲಿ ಡಾ.ವೀಣಾ

---

೦೩. ಡಾ. ಎಸ್.ಸಿ. ಪಾಟೀಲ : ಕರ್ನಾಟಕ ಜನಪದ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿ.ವಿ., ೧೯೯೧

೦೪. ಡಾ. ಅ.ಲ. ನರಸಿಂಹನ್ : ಕರ್ನಾಟಕ ಚಿತ್ರಕಲೆಯಲ್ಲಿ ಸಾಂಸ್ಕತಿಕ ಅಂಶಗಳು, ಪಿಎಚ್.ಡಿ. ಮಹಾಪ್ರಬಂಧ, ಬೆಂಗಳೂರು ವಿ.ವಿ., ೧೯೯೮.

೦೫. ಡಾ. ಸಂಪದಾಭಟ್ : ಹಿಂದೂಸ್ತಾನಿ ಸಂಗೀತ ಮತ್ತು ರಾಗಮಾಲಾ ಚಿತ್ರಗಳು, ಪಿ.ಎಚ್.ಡಿ. ಮಹಾಪ್ರಬಂಧ, ಕನ್ನಡ ವಿ.ವಿ., ೧೯೯೮

೦೬. ಡಾ. ಪುಷ್ಪಾದ್ರಾವಿಡ : ಅನಿವಾಸಿ ಭಾರತೀಯ ಕಲಾವಿದ ದಿ ನಿಕೋಲಸ್ ರೋರಿಕ್ ಜೀವನ ಮತ್ತು ಕಲಾಕೃತಿಗಳು, ಪಿಎಚ್.ಡಿ. ಮಹಾಪಬಂಧ, ಬೆಂಗಳೂರು ವಿ.ವಿ., ೧೯೯೭

೦೭. ಡಾ. ಯಾದಪ್ಪ ಪರ್ದೇಶಿ : ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿ.ವಿ., ೨೦೦೧.

೦೮. ಡಾ. ಶಿವಾನಂದ ಬಂಟನೂರು : ಉತ್ತರ ಕರ್ನಾಟಕ ಜನಪದ ಶಿಲ್ಪಕಲೆ ಒಂದು ಅಧ್ಯಯನ, ಪಿಎಚ್.ಡಿ. ಮಹಾಪಬಂಧ,೨೦೦೨.

೦೯. ಡಾ.ಗಿರೀಶ : ಬುಡಕಟ್ಟು ಚಿತ್ರಕಲೆ,ಪಿಹೆಚ್.ಡಿ., ಮ.ಪ್ರ., ಕನ್ನಡ ವಿ.ವಿ.೨೦೦೨

೧೦. ಡಾ. ಲಕ್ಷೀದೇವಿ ಗವಾಯಿ : ಕಲಾವಿದ ಎಂ.ವಿ. ಚೆಟ್ಟಿಯವರ ಜೀವನ ಮತ್ತು ಕಲಾಕೃತಿಗಳು ಒಂದು ಅಧ್ಯಯನ ಪಿಎಚ್.ಡಿ. ಮಹಾಪಬಂಧ, ಕನ್ನಡ ವಿವಿ., ೨೦೦೨.

೧೧. ಡಾ. ಶರಣಪ್ಪ ಕೊಲ್ಕರ್ : ಕೊಪ್ಪಳ ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿ.ವಿ., ೨೦೦೨

೧೨. ಡಾ. ಸೌಮ್ಯ : ಯಂತ್ರ ದಿ ವಿಶ್ಯುವಲ್ ಆಪ್ ಶಂಕರಾಸ್ ಫಿಲಾಸಫಿ ರೆಫರೆನ್ಸ್ ಟು ಕಾಂಟೆಂಪರರಿ ತಾಂತ್ರಿಕ್ ಅರ್ಟಿಸ್ಟ್,  ಪಿಎಚ್.ಡಿ. ಮಹಾಪಬಂಧ, ಬೆಂಗಳೂರು ವಿ.ವಿ., ೨೦೦೨.

೧೩. ಡಾ. ಪಮೀಳಾ ಲೋಚನ್ : ಮೈಂಡ್, ಮ್ಯೂಸಿಕ್ ಅಂಡ್ ಕಲರ್ ಎಕ್ಸ್‌ಪೋಸೆಸ್ ಅಂಡ್ ಡೆವಲಪ್‌ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪರರಿ ಪೇಂಟಿಂಗ್ ,ಪಿಎಚ್.ಡಿ. ಮಹಾಪ್ರಬಂಧ, ಬೆಂಗಳೂರು ವಿ.ವಿ., ೨೦೦೨.

ಶೇಖರ್ ಮಂಡಿಸಿದ **ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦-೧೮೨೦),**[೧೪] ೨೦೦೩ರಲ್ಲಿ ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ ಅವರ **ಕಲಾವಿದ ಆರ್.ಎಮ್.ಹಡಪದ, ಒಂದು ಅಧ್ಯಯನ,**[೧೫] ೨೦೦೩ರಲ್ಲಿ ಡಾ.ಎಸ್.ಸಿ.ಪಾಟೀಲರು ಕರ್ನಾಟಕ ವಿ.ವಿ.ಗೆ ಮಂಡಿಸಿದ **ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯುಕೇಶನ್ ಎಟ್ ಸ್ಕೂಲ್ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೆಷಲ್ ರೆಫೆರೆನ್ಸ್ ಟು ಡ್ರಾಯಿಂಗ ಆಂಡ್ ಪೇಂಟಿಂಗ್,**[೧೬] ೨೦೦೪ರಲ್ಲಿ ಡಾ.ವಿ.ಎವ್.ಬಾಗಾಯತ್ ಅವರ **ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಒಂದು ಅಧ್ಯಯನ(೧೪೦೦-೧೮೦೦),**[೧೭] ೨೦೦೪ರಲ್ಲಿ ಡಾ.ಶಿವಕುಮಾರ ಜಿ.ಓ. ಅವರ **ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು,**[೧೮] ೨೦೦೪ರಲ್ಲಿ ಡಾ. ಪಿ. ಗೌರೀಶ, ಅವರ **ಮೈಸೂರು ಜಿಲ್ಲೆಯ ಜನಪದ ಚಿತ್ರಕಲೆ,**[೧೯] ೨೦೦೫ರಲ್ಲಿ ಡಾ.ಶಶಿಕಲಾ ಹೂಗಾರ ಅವರ **ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ,**[೨೦] ೨೦೦೫ರಲ್ಲಿ ಡಾ.ಶಿವಪ್ರಕಾಶ ತುಕ್ಕಣ್ಣವರ ಅವರ **ಕರ್ನಾಟಕ ರಥ ಶಿಲ್ಪಕಲೆ,** [೨೧] ೨೦೦೫ರಲ್ಲಿ ಡಾ.ಎಚ್.ಎನ್.ಚಿತ್ರಗಾರ ಅವರ **ಕರ್ನಾಟಕ ಹಸ್ತಪ್ರತಿ ಚಿತ್ರಕಲೆ,** [೨೨] ೨೦೦೫ರಲ್ಲಿ ಡಾ. ಎಸ್. ವಿ. ವೆಂಕಟೇಶಯ್ಯ ಅವರ **ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು ಒಂದು ಅಧ್ಯಯನ,** [೨೩] ೨೦೦೬ರಲ್ಲಿ ಡಾ. ವಿಶ್ವೇಶ್ವರಿ ತಿವಾರಿ ಅವರ **ರಂಗೋಲಿ ಕಲೆ,**[೨೪] ೨೦೦೭ರಲ್ಲಿ ಡಾ. ಮಲ್ಲಿಕಾರ್ಜುನ ಬಾಗೋಡಿ ಇವರ **ಸುರಪುರ ಶೈಲಿಯ ಚಿತ್ರಕಲೆ ಒಂದು ಅಧ್ಯಯನ**[೨೫] ಮತ್ತು ಡಾ. ಗೀತಾಂಜಲಿ ಬಿ.ಆರ್. ಅವರ **ಐತಿಹಾಸಿಕ ದೀಪಸ್ತಂಭಗಳು,**[೨೬] ೨೦೦೭ರಲ್ಲಿ ಡಾ.ರಾಠೋಡ್ ಅವರ **ಅನ್ವಯಿಕ ಕಲೆ, ಹಿಂದಿನಿಂದ ಇಂದಿನವರೆಗೆ**[೨೭],

---

೧೪. ಡಾ. ವೀಣಾಶೇಖರ್ : ಎಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦ ೧೮೨೦), ಪಿಎಚ್.ಡಿ. ಮಹಾಪಬಂಧ, ಬೆಂಗಳೂರು ವಿ.ವಿ., ೨೦೦೩.

೧೫. ಡಾ. ಸಿದ್ಧಲಿಂಗಸ್ವಾಮಿ ಹಿರೇಮಠ : ಕಲಾವಿದ ಆರ್.ಎಂ.ಹಡಪದ ಒಂದು ಅಧ್ಯಯನ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿ.ವಿ., ೨೦೦೩.

೧೬. ಡಾ. ಎಸ್.ಸಿ. ಪಾಟೀಲ : ಎ ಕಿಟಿಕಲ್ ಅನ್ಯಾಲಿಸಿಸ್ ಆಫ್ ಆರ್ಟ್ ಎಜುಕೇಶನ್ ಎಟ್ ಸ್ಕೂಲ್ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ಸ್ಪೆಷಲ್ ರೆಫೆರೆನ್ಸ್ ಟು ಡ್ರಾಯಿಂಗ್ ಎಂಡ್ ಪೇಂಟಿಂಗ್, ಪಿಎಚ್.ಡಿ. ಮಹಾಪ್ರಬಂಧ, ಕರ್ನಾಟಕ ವಿ.ವಿ., ಧಾರವಾಡ, ೨೦೦೨.

೧೭. ಡಾ. ಎಂ.ವಿ. ಬಾಗಾಯತ್ : ಕರ್ನಾಟಕದ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿ.ವಿ., ೨೦೦೪

೧೮. ಡಾ. ಜಿ. ಶಿವಕುಮಾರ್ : ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳು ವಿವಿಧ ಆಯಾಮಗಳು, ಪಿಎಚ್.ಡಿ. ಮಹಾಪಬಂಧ, ಗುಲ್ಬರ್ಗಾ ವಿ.ವಿ ೨೦೦೪

೧೯. ಡಾ. ಪಿ. ಗೌರೀಶ : ಮೈಸೂರು ಜಿಲ್ಲೆಯ ಜನಪದ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಮೈಸೂರು ವಿ.ವಿ., ೨೦೦೪

೨೦. ಡಾ. ಶಶಿಕಲಾ ಹೂಗಾರ್ : ತೂಗಲು ಗೊಂಬೆ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿ.ವಿ., ಹಂಪಿ ೨೦೦೪

೨೧. ಡಾ. ಶಿವಪ್ರಕಾಶ್ ಎಲ್ : ತುಕ್ಕಣ್ಣವರ, ರಥಶಿಲ್ಪಕಲೆ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿ.ವಿ., ಹಂಪಿ ೨೦೦೪

೨೨. ಡಾ.ಎಚ್.ಎನ್.ಚಿತ್ರಗಾರ, ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಪಿಎಚ್.ಡಿ. ಮಹಾಪ್ರಬಂಧ, ಕನ್ನಡ ವಿ.ವಿ., ಹಂಪಿ ೨೦೦೫

೨೩. ಡಾ. ಎಸ್. ವಿ. ವೆಂಕಟೇಶಯ್ಯ : ಅಜಂತಾ ಗುಹೆಯ ವರ್ಣಚಿತ್ರಗಳಲ್ಲಿ ವಾಸ್ತು ಅಂಶಗಳು ಒಂದು ಅದ್ಯಯನ, ಪಿಎಚ್.ಡಿ. ಮಹಾಪಬಂಧ, ಕನ್ನಡ ವಿ.ವಿ., ಹಂಪಿ ೨೦೦೫

೨೪. ಡಾ. ವಿಶ್ವೇಶ್ವರಿ ತಿವಾರಿ : ರಂಗೋಲಿ ಕಲೆ, ಪಿಎಚ್.ಡಿ. ಮಹಾಪಬಂಧ, ಗುಲ್ಬರ್ಗಾ ವಿ.ವಿ. ೨೦೦೬

೨೫. ಡಾ. ಮಲಿಕಾರ್ಜುನ .ಸಿ. ಬಾಗೋಡಿ : ಸುರಮರ ಶೈಲಿಯ ಚಿತ್ರಕಲೆ ಒಂದು ಅಧ್ಯಯನ, ಪಿಎಚ್.ಡಿ. ಮಹಾಪಬಂಧ, ಗುಲ್ಬರ್ಗಾ ವಿ.ವಿ. ೨೦೦೭

೨೬. ಡಾ. ಗೀತಾಂಜಲಿ ಬಿ. ಆರ್ : ಐತಿಹಾಸಿಕ ದೀಪಸ್ತಂಭಗಳು, ಪಿಎಚ್.ಡಿ. ಮಹಾಪಬಂಧ, ಕನ್ನಡ ವಿ.ವಿ., ೨೦೦೭

೨೭. ಡಾ. ರಾಠೋಡ್ : ಅನ್ವಯಿಕ ಕಲೆ: ಹಿಂದಿನಿಂದ ಇಂದಿನವರೆಗೆ, ಪಿಎಚ್.ಡಿ. ಮಹಾಪ್ರಬಂಧ, ಮೈಸೂರು ವಿ.ವಿ., ೨೦೦೭

೨೦೦೮ರಲ್ಲಿ ಮೋಹನ್ ಪಂಚಾಳ ಅವರ **ಕಲಾವಿದ ಎಸ್.ಎಮ್.ಪಂಡಿತ, ಬದುಕು ಮತ್ತು ಕಲೆ,**[೨೮] ೨೦೦೮ರಲ್ಲಿ ವಿಶ್ವನಾಥ ಎ.ಎಸ್. ಅವರ **ಕರಾವಳಿ ಕರ್ನಾಟಕದ ಯಕ್ಷಗಾನ ಮುಖವರ್ಣಿಕೆ ಹಾಗೂ ವೇಷಭೂಷಣಗಳು**[೨೯] ಇವು ದೃಶ್ಯಕಲೆಗಳ ಕುರಿತು ಬಂದ ಪಿಹೆಚ್.ಡಿ. ಮಹಾಪ್ರಬಂಧಗಳು.

**ಡಿ.ಲಿಟ್. ಮಹಾಪ್ರಬಂಧಗಳು**

೨೦೦೫ರಲ್ಲಿ ಡಾ. ಆನಂದ ಪೂಜಾರ ಅವರ **ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ**[೩೦], ೨೦೦೫ರಲ್ಲಿ ಡಾ.ಡಿ.ಎ.ಉಪಾಧ್ಯ ಅವರ **ದೃಶ್ಯಕಲೆಗಳ ತೌಲನಿಕ ಅಧ್ಯಯನ,**[೩೧] ಡಿ.ಲಿಟ್. ಮಹಾಪ್ರಬಂಧಗಳಾಗಿವೆ.

**ಎಂ.ಫಿಲ್. ಪ್ರಬಂಧಗಳು**

೨೦೦೨ರಲ್ಲಿ ಮಲ್ಲಿಕಾರ್ಜುನ ಬಾಗೋಡಿಯವರು ಎಂ.ಫಿಲ್. ಪದವಿಗಾಗಿ ಮಂಡಿಸಿದ **ಚಿತ್ರಕಲಾವಿದ ಜೆ.ಎಸ್.ಖಂಡೇರಾವ-ಒಂದು ಅಧ್ಯಯನ,**[೩೨] ಮತ್ತು ೨೦೦೩ರಲ್ಲಿ ಎ.ಎಸ್.ವಿಶ್ವನಾಥ ಅವರ **ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣಗಳು,**[೩೩] ೨೦೦೫ರಲ್ಲಿ ಶಂಕರಪ್ಪ ಎಂ. ಕುಂದಗೋಳ ಅವರ **ಕಲಾವಿದ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು**[೩೪] ಮತ್ತು ಸಿ.ಡಿ.ಜಟ್ಟೆಣ್ಣವರ ಅವರ **ಕಲಾವಿದ ಡಾ.ಎಂ.ವಿ.ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳು,**[೩೫] ೨೦೦೬ರಲ್ಲಿ ಸುಚಿತ್ರಾ ಗ. ಲಿಂಗದಳ್ಳಿ ಇವರ **ವಿಜಯನಗರದ ಭಿತ್ತಿಚಿತ್ರಕಲೆ ಒಂದು ಅಧ್ಯಯನ,**[೩೬] ಮತ್ತು ರವಿ ವಸರಾಮ ನಾಯಕ ಇವರ **ಕಿನ್ನಾಳ ಕಲೆ ಒಂದು ಅಧ್ಯಯನ,**[೩೭] ೨೦೦೭ರಲ್ಲಿ ಬಿ.ಎಮ್.ಪಾಟೀಲ ಅವರ **ನಿಪ್ಪಾಣಿ ವಾಡೆಯ ಭಿತ್ತಿಚಿತ್ರಗಳು,**[೩೮] ಶೈಲಾ ಬರಡೋಲ ಅವರ **ಸಂತ ಕಲಾವಿದ ಶುಭರಾಯರ ಜೀವನ ಮತ್ತು ಕಲಾಕೃತಿಗಳು,**[೩೯] ಉಮೇಶ ಎಸ್. ಅವರ **ಕರ್ನಾಟಕ ಜೈನ ಚಿತ್ರಕಲೆ**[೪೦] ಹಾಗೂ

---

೨೮. ಡಾ.ಮೋಹನ್ ಪಂಚಾಳ : ಕಲಾವಿದ ಎಸ್.ಎಂ.ಪಂಡಿತ, ಬದುಕು ಮತ್ತು ಕಲೆ, ಪಿಎಚ್.ಡಿ. ಮಹಾಪ್ರಬಂಧ, ಗುಲ್ಬರ್ಗಾ ವಿ.ವಿ. ೨೦೦೮

೨೯. ಡಾ.ವಿಶ್ವನಾಥ ಎ.ಎಸ್. : ಕರಾವಳಿ ಕರ್ನಾಟಕದ ಯಕ್ಷಗಾನ ಮುಖವರ್ಣಿಕೆ ಹಾಗೂ ವೇಷಭೂಷಣಗಳು, ಪಿಎಚ್.ಡಿ. ಮಹಾಪಬಂಧ, ಕನ್ನಡ ವಿ.ವಿ.,. ೨೦೦೮

೩೦. ಡಾ. ಆನಂದ ಪೂಜಾರ್ : ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ, ಡಿ.ಲಿಟ್ ಮಹಾಪ್ರಬಂಧ, ಕನ್ನಡ ವಿ.ವಿ., ೨೦೦೫

೩೧. ಡಾ. ಡಿ.ವಿ. ಉಪಾಧ್ಯ : ದೃಶ್ಯಕಲೆಗಳು ಒಂದು ಅಧ್ಯಯನ, ಡಿ.ಲಿಟ್ ಮಹಾಪಬಂಧ, ಕನ್ನಡ ವಿ.ವಿ., ೨೦೦೫

೩೨. ಮಲ್ಲಿಕಾರ್ಜುನ ಬಾಗೋಡಿ : ಜೆ.ಎಸ್. ಖಂಡೆರಾವ್ ಒಂದು ಅಧ್ಯಯನ, ಎಂ.ಪಿಲ್. ಪಬಂಧ, ಕನ್ನಡ ವಿ.ವಿ.೨೦೦೨

೩೩. ಎ.ಎಸ್. ವಿಶ್ವನಾಥ : ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣಗಳು, ಎಂ.ಫಿಲ್, ಪಬಂಧ, ಕನ್ನಡ ವಿ.ವಿ., ೨೦೦೩

೩೪. ಶಂಕರಪ್ಪ ಕುಂದಗೋಳ : ಕಲಾವಿದ ಡಿ.ವಿ. ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು:ಒಂದು ಅಧ್ಯಯನ, ಎಂ.ಫಿಲ್, ಪಬಂಧ, ಕನ್ನಡ ವಿ.ವಿ., ೨೦೦೫

೩೫. ಸಿ.ಡಿ. ಜಟ್ಟೆಣ್ಣವರ : ಕಲಾವಿದ ಎಂ.ವಿ. ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳು,ಎಂ.ಫಿಲ್.ಪ್ರಬಂಧ, ಕನ್ನಡ ವಿ.ವಿ., ೨೦೦೫

೩೬. ಸುಚಿತ್ರಾ ಗ. ಲಿಂಗದಳ್ಳಿ : ವಿಜಯನಗರದ ಭಿತ್ತಿಚಿತ್ರಕಲೆ ಒಂದು ಅಧ್ಯಯನ: ಎಂ.ಫಿಲ್.ಪಬಂಧ, ಕನ್ನಡ ವಿ.ವಿ., ೨೦೦೬

೩೭. ರವಿ ವಸರಾಮ ನಾಯಕ : ಕಿನ್ನಾಳ ಕಲೆ ಒಂದು ಅಧ್ಯಯನ: ಎಂ.ಫಿಲ್.ಪಬಂಧ, ಕನ್ನಡ ವಿ.ವಿ., ೨೦೦೬

೩೮. ಬಿ.ಎಮ್.ಪಾಟೀಲ : ನಿಪ್ಪಾಣಿ ವಾಡೆಯ ಭಿತ್ತಿ ಚಿತ್ರಗಳು, ಎಂ.ಫಿಲ್.ಪಬಂಧ, ಕನ್ನಡ ವಿ.ವಿ., ೨೦೦೭

೩೯. ಶೈಲಾ ಬರಡೋಲ : ಸಂತ ಕಲಾವಿದ ಶುಭರಾಯರ ಜೀವನ ಮತ್ತು ಕಲಾಕೃತಿಗಳು, ಎಂ.ಫಿಲ್.ಪ್ರಬಂಧ, ಕನ್ನಡ ವಿ.ವಿ., ೨೦೦೭

೪೦. ಉಮೇಶ್ ಎಸ್. : ಕರ್ನಾಟಕ ಜೈನ ಚಿತ್ರಕಲೆ, ಎಂ.ಫಿಲ್.ಪ್ರಬಂಧ, ಕನ್ನಡ ವಿ.ವಿ., ೨೦೦೭

ಶಶಿಕಾಂತ ಬಸರಿಕಟ್ಟಿ ಅವರ **ಕಲಘಟಗಿ ಕಲೆ**[೪೧] ಈ ಪ್ರಬಂಧಗಳು ಕರ್ನಾಟಕ ದೃಶ್ಯಕಲೆಯ ಕುರಿತಾಗಿ ಬಂದ ಸಂಶೋಧನಾ ಅಧ್ಯಯನಗಳಾಗಿವೆ.

ಹೀಗೆ ಗುಲ್ಬರ್ಗಾ, ಬೆಂಗಳೂರು, ಕರ್ನಾಟಕ ವಿ.ವಿ. ಮತ್ತು ಕನ್ನಡ ವಿ.ವಿ.ಗಳಲ್ಲಿ ಪಿಹೆಚ್.ಡಿ.ಪದವಿಗಾಗಿ ೨೯ ಸಂಶೋಧನಾ ಪ್ರಬಂಧಗಳು ರಚನೆಯಾಗಿದ್ದು, ಈ ನಿಟ್ಟಿನಲ್ಲಿ ೧೫ಕ್ಕೂ ಹೆಚ್ಚು ಸಂಶೋಧಕರು ಅಧ್ಯಯನ ನಿರತರಾಗಿದ್ದಾರೆ. ಇದಲ್ಲದೇ ವಿಶ್ವವಿದ್ಯಾಲಯಗಳ ಬಿ.ಎಫ್.ಎ.ಪದವಿ ಹಾಗೂ ಮತ್ತು ಸ್ನಾತಕೋತ್ತರ ಹಂತದಲ್ಲಿ ಸುಮಾರು ೪೦೦ಕ್ಕೂ ಹೆಚ್ಚಿನ ಲಘುಶೋಧ ಪ್ರಬಂಧಗಳು ರಚನೆಗೊಂಡಿವೆ. ಪದವಿ ತರಗತಿಗಳಿಗೆ ಅಧ್ಯಯನದ ಭಾಗವಾಗಿ ಕಿರು ಸಂಶೋಧನಾ ಪ್ರಬಂಧಗಳು ರಚನೆಯಾಗಿದ್ದು, ಸಂಶೋಧನ ಪ್ರಕಾರವು ದೃಶ್ಯಕಲಾಕ್ಷೇತ್ರದಲ್ಲಿ ಅನಿವಾರ್ಯ ಅಧ್ಯಯನವಾಗಿ ಬೆಳೆಯುತ್ತಿದೆ. ಹೀಗೆ ಈ ಕ್ಷೇತ್ರದಲ್ಲಿ ಸಂಶೋಧನೆಗಳು ತೀವ್ರವಾಗಿ ಮುನ್ನಡೆಯುತ್ತಲಿದ್ದು, ಭವಿಷ್ಯತ್ತಿನಲ್ಲಿ ಕಲಾಕ್ಷೇತ್ರವು ಸಂಶೋಧನಾತ್ಮಕವಾಗಿಯೂ ಬಲಗೊಳ್ಳುವ ಆಶಯವನ್ನು ನಿರೀಕ್ಷಿಸಬಹುದು!

**ವಿ.ಬಿ.ಹಿರೇಗೌಡರ ಇವರ ಕುರಿತು ನಡೆದ ಅಧ್ಯಯನಗಳು**

ಕಲಾವಿದ ಹಿರೇಗೌಡರ ಅವರ ಕುರಿತು ಅಷ್ಟೊಂದು ಗಂಭೀರವಾದ ಅಧ್ಯಯನಗಳು ನಡೆದಿಲ್ಲವೆಂದು ಹೇಳಬಹುದು. ೨೦೦೩ರಲ್ಲಿ ಪ್ರಶಾಂತಕುಮಾರ್ ಎಂ. ಇವರು **ಕಲಾವಿದ ಹಿರೇಗೌಡರ್: ಜೀವನ ಮತ್ತು ಕಲೆ**[೪೨] ಎಂಬ ಶೀರ್ಷಿಕೆಯಡಿ ಸ್ನಾತಕೋತ್ತರ ಪದವಿಗೆ ಲಘು ಸಂಶೋಧನಾ ಪ್ರಬಂಧವನ್ನು ಗುಲಬರ್ಗಾ ವಿ.ವಿ.ಗೆ ಮಂಡಿಸಿದ್ದಾರೆ. ಸದರಿ ಪ್ರಬಂಧದವನ್ನು ನಾಲ್ಕು ಅಧ್ಯಾಯಗಳನ್ನಾಗಿ ವಿಂಗಡಿಸಿಕೊಂಡಿದ್ದು, ಒಂದನೆಯ ಅಧ್ಯಾಯದಲ್ಲಿ ಹಿರೇಗೌಡರ್ ಅವರ ಬಾಲ್ಯ, ಪ್ರಾಥಮಿಕ, ಮಾಧ್ಯಮಿಕ, ಪ್ರೌಢಶಾಲಾ, ಕಾಲೇಜು ವ್ಯಾಸಂಗ ಮತ್ತು ಆ ಸಂದರ್ಭದಲ್ಲಿ ಕಲಾಸಕ್ತಿಗೆ ಪೂರಕವಾಗುವ ಘಟನೆಗಳನ್ನು ನಮೂದಿಸಿದ್ದಾರೆ. ನಂತರದಲ್ಲಿ ಅವರು ಶಿಕ್ಷಕರಾಗಿ, ಪ್ರಾಚಾರ್ಯರಾಗಿ ಮತ್ತು ಸಮಕಾಲೀನ ಕಲಾವಿದರಾಗಿ ಅವರ ಕೊಡುಗೆಗಳನ್ನು ಸಂಕ್ಷಿಪ್ತ ರೂಪದಲ್ಲಿ ವಿವರಿಸಿದ್ದಾರೆ.

ಅಧ್ಯಾಯ ಎರಡರಲ್ಲಿ ಕಲಾಕೃತಿಗಳ ಕುರಿತು ವಿಶ್ಲೇಷಣೆ ಮಾಡಿ, ಅವುಗಳ ಸಂಗ್ರಹದ ವಿವರವನ್ನು, ಅಡಕವಾಗಿರುವ ಅಂಶಗಳನ್ನು, ಕಲಾವಿದರ, ಸಾಹಿತಿಗಳ ಮತ್ತು ವಿದ್ಯಾರ್ಥಿಗಳ ಅಭಿಪ್ರಾಯಗಳನ್ನು ದಾಖಲಿಸಿದ್ದಾರೆ. ಅಧ್ಯಾಯ ಮೂರರಲ್ಲಿ ಕಲಾಶಿಕ್ಷಣಕ್ಕೆ, ಅಕಾಡೆಮಿಗಳಿಗೆ ಸಾರ್ವಜನಿಕ ಕ್ಷೇತ್ರಗಳಿಗೆ ಹಿರೇಗೌಡರ ಕೊಡುಗೆಯನ್ನು ದಾಖಲಿಸಿದ್ದಾರೆ. ಜೊತೆಗೆ ಅವರ ಕಲಾಕೃತಿಗಳ ಪ್ರದರ್ಶನಗಳ ವಿವರವನ್ನು ಮತ್ತು ಸಂದ ಗೌರವವಗಳನ್ನು ಇಲ್ಲಿ ನಮೂದಿಸಿದ್ದಾರೆ. ಅಧ್ಯಾಯ ನಾಲ್ಕರಲ್ಲಿ ಸಮಾರೋಪ ಮತ್ತು ಅನುಬಂಧಗಳನ್ನು ದಾಖಲಿಸಿದ್ದಾರೆ. ಒಟ್ಟಾರೆ ಈ ಪ್ರಬಂಧ ಗಂಭೀರ ಮತ್ತು ಸಮಗ್ರತೆಯ ನೆಲೆಯಿಂದ ರಚಿತವಾದುದಲ್ಲ.

---

೪೧. ಶಶಿಕಾಂತ ಬಸರಿಕಟ್ಟಿ : ಕಲಘಟಗಿ ಕಲೆ, ಎಂ.ಫಿಲ್.ಪಬಂಧ, ಕನ್ನಡ ವಿ.ವಿ., ೨೦೦೭
೪೨. ಎಂ.ಪ್ರಶಾಂತಕುಮಾರ್ : ವಿ.ಬಿ.ಹಿರೇಗೌಡರ್ ಜೀವನ ಮತ್ತು ಕಲೆ : ಎಂ.ಎಫ್.ಎ. ಸಂಪ್ರಬಂಧ ಗು.ವಿ.ಗು. ೨೦೦೩

ಗವೀಶ ಹಿರೇಮಠ ಅವರ **ಕಲಾವಿದರು ನಡೆದು ಬಂದ ದಾರಿ**[೪೩] ಎಂಬ ಗ್ರಂಥದಲ್ಲಿ ಹಿರೇಗೌಡರ ಬಾಲ್ಯ, ಕಲಾಶಿಕ್ಷಣ, ವೃತ್ತಿ ಮತ್ತು ಅವರ ಕಲಾಕೃತಿಗಳ ಕುರಿತು ಅಲ್ಪ ಪರಿಚಯವಿದೆ. ಡಿ.ಎಸ್.ಚೌಗಲೆ ಅವರ **ನಮ್ಮ ಕಲಾವಿದರು**[೪೪] ಎಂಬ ಗ್ರಂಥದಲ್ಲಿ ಹಿರೇಗೌಡರ ಕುರಿತಂತೆ ಒಂದು ಲೇಖನವಿದ್ದು, ಇಲ್ಲೂ ಮೇಲಿನ ಲೇಖನದ ಅಂಶಗಳೇ ಪುನರಾವರ್ತನೆಯಾಗಿವೆ.

**ಪತ್ರಿಕಾ ಲೇಖನಗಳು**

ಕಲಾವಿದ ಹಿರೇಗೌಡರ್ ಅವರು ರಚಿಸಿದ ಕಲಾಕೃತಿಗಳ ಸಂಖ್ಯೆ ಸಾವಿರಕ್ಕೂ ಹೆಚ್ಚಿದ್ದರೂ ಅವರ ಕೃತಿನಿಷ್ಠ ಅಧ್ಯಯನಗಳು ತೀರ ವಿರಳ. ಇಂತಹುದರಲ್ಲಯೇ ಅವರ ಕುರಿತು ಬಂದ ಲೇಖನಗಳು ಹಲವು. ಬಹುತೇಕವಾಗಿ ಲೇಖನಗಳ ತಿರುಳು ಒಂದೇ ಸ್ವರೂಪದ್ದು. ಹಿರೇಗೌಡರ ಶಿಕ್ಷಣ, ಪ್ರಾಚಾರ್ಯರಾಗಿ, ಕಲಾವಿದರಾಗಿ, ಸಾರ್ವಜನಿಕ ಕ್ಷೇತ್ರದಲ್ಲಿ ಅವರ ಕೊಡುಗೆಯ ಕುರಿತಾಗಿ ಸಂಕ್ಷಿಪ್ತ ವಿವರಗಳಿವೆ. ವಿಶೇಷವಾಗಿ ಅವರ ಪ್ರದರ್ಶನ ನೀಡಿದ ಸಂದರ್ಭದಲ್ಲಿ ಕೆಲವು ಪತ್ರಿಕೆಗಳು ವಿಶೇಷ ಲೇಖನಗಳನ್ನು ಪ್ರಕಟಿಸಿವೆ. ಅವುಗಳ ವಿವರ ಈ ಕೆಳಗಿನಂತಿದೆ.

೧೯೮೫ರಲ್ಲಿ ಪ್ರಜಾವಾಣಿ ಪತ್ರಿಕೆಯಲ್ಲಿ ಬಿ.ವಿ.ಕೆ.ಶಾಸ್ತ್ರಿಯವರ "ಕುರ್ಚಿಯ ಹಲವು ಮುಖ",[೪೫] ೧೯೯೧ರಲ್ಲಿ ಪ್ರಜಾವಾಣಿಯಲ್ಲಿ ಜಿ.ಎನ್.ಮೋಹನ ಅವರ "ಹಿರೇಗೌಡರ್: ರೇಖೆಗಳ ಕನಸುಗಾರ,[೪೬] ೧೯೯೯ರಲ್ಲಿ ಜನತಾವಾಣಿಯಲ್ಲಿ ದತ್ತಾತ್ರೇಯ ಭಟ್ಟ ಅವರ "ರಮ್ಯನೋಟಗಳ ಚಿತ್ರಕಲಾವಿದ ವಿ.ಬಿ.ಹಿರೇಗೌಡರ್",[೪೭] ೧೯೯೯ರಲ್ಲಿ ಉದಯವಾಣಿಯಲ್ಲಿ ದತ್ತಾತ್ರೇಯ ಭಟ್ಟ ಅವರ "ರೋಮ್ಯಾಂಟಿಕ್ ನೆಲೆಯ ಚಿತ್ರಗಳು",[೪೮] ೨೦೦೧ರಲ್ಲಿ ಚಿತ್ರಕಲಾ ಕ್ಯಾಂಪ್ ನ್ಯೂಸ್ ಲೆಟರನಲ್ಲಿ ಎಚ್.ಎ.ಅನಿಲ್‌ಕುಮಾರ ಅವರ ವರದಿ,[೪೯] ೨೦೦೨ರಲ್ಲಿ ದಿ ನ್ಯೂ ಇಂಡಿಯನ್ ಎಕ್ಸಪ್ರೆಸ್‌ನಲ್ಲಿ "Jewel of India to exhibit soon" ವರದಿ,[೫೦] ೨೦೦೨ರಲ್ಲಿ ರೇವ್ ಪತ್ರಿಕೆಯಲ್ಲಿ "30,000 Paintings & 35 years in pursuit of excellence" ವರದಿ,[೫೧] ೨೦೦೨ರಲ್ಲಿ ದಿ ಹಿಂದೂದಲ್ಲಿ ಜಿ.ಎನ್.ಪ್ರಶಾಂತ್ ಅವರ "Art from the heart",[೫೨] ೨೦೦೨ರಲ್ಲಿ ಟೈಮ್ಸ ಆಫ್ ಇಂಡಿಯಾದಲ್ಲಿ ರಂಗರಾಜ ಅವರ "Canvases in retrospect",[೫೩] ೨೦೦೨ರಲ್ಲಿ ಡೆಕ್ಕನ್ ಹೆರಾಲ್ಡ್‌ನಲ್ಲಿ ಶುಭ ಶ್ರೀಕಾಂತ ಅವರ "Harmony his vision",[೫೪] ೨೦೦೨ರಲ್ಲಿ ಪ್ರಜಾವಾಣಿಯಲ್ಲಿ ಚಿ.ಸು.ಕೃಷ್ಣಸೆಟ್ಟಿ ಅವರ "ಬದುಕಿನ ಸಂಭ್ರಮಕ್ಕೆ

---

೪೩. ಗವೀಶ ಹಿರೇಮಠ : ಕಲಾವಿದರು ನಡೆದು ಬಂದ ದಾರಿ
೪೪. ಡಿ.ಎಸ್.ಚೌಗಲೆ : ನಮ್ಮ ಕಲಾವಿದರು
೪೫. ಬಿ.ವಿ.ಕೆ.ಶಾಸ್ತ್ರಿ: ಪ್ರಜಾವಾಣಿ : ಕುರ್ಚಿಯ ಹಲವು ಮುಖ :: ೧೯೮೫
೪೬. ಜಿ.ಎನ್.ಮೋಹನ :ಪ್ರಜಾವಾಣಿ : ಹಿರೇಗೌಡರ್: ರೇಖೆಗಳ ಕನಸುಗಾರ:೧೯೯೧
೪೭. ದತ್ತಾತ್ರೇಯ ಭಟ್ಟ : ಜನತಾವಾಣಿ : ರಮ್ಯನೋಟಗಳ ಚಿತ್ರಕಲಾವಿದ ವಿ.ಬಿ.ಹಿರೇಗೌಡರ್ :೨೪.೦೧.೧೯೯೯
೪೮. ದತ್ತಾತ್ರೇಯ ಭಟ್ಟ : ಉದಯವಾಣಿ : ರೋಮ್ಯಾಂಟಿಕ್ ನೆಲೆಯ ಚಿತ್ರಗಳು :೩೧.೦೧.೧೯೯೯
೪೯. ಎಚ್.ಎ.ಅನಿಲ್‌ಕುಮಾರ : ಚಿತ್ರಕಲಾ ಕ್ಯಾಂಪ್ ನ್ಯೂಸ್ ಲೆಟರ : ವರದಿ : ೨೦೦೧
೫೦. ವರದಿ, ದಿ ನ್ಯೂ ಇಂಡಿಯನ್ ಎಕ್ಸಪ್ರೆಸ್ : Jewel of India to exhibit soon : ೨೪.೦೪.೨೦೦೨
೫೧. ವರದಿ, ರೇವ್ ಪತ್ರಿಕೆ : 30,000 Paintings & 35 years in pursuit of excellence : ೦೩.೦೫.೨೦೦೨
೫೨. ಜಿ.ಎನ್.ಪ್ರಶಾಂತ್ : ದಿ ಹಿಂದೂ : Art from the heart : ೧೦.೦೫.೨೦೦೨
೫೩. ರಂಗರಾಜ : ಟೈಮ್ಸ್ ಆಫ್ ಇಂಡಿಯಾ : Canvases in retrospect : ೨೨.೦೫.೨೦೦೨
೫೪. ಶುಭ ಶ್ರೀಕಾಂತ : ಡೆಕ್ಕನ್ ಹೆರಾಲ್ಡ್ : Harmony his vision : ೨೬.೦೫.೨೦೦೨

ಸಂಭ್ರಮಾತ್ಮಕ ಪ್ರತಿಕ್ರಿಯೆ",[೫೫] ೨೦೦೩ರಲ್ಲಿ ಉದಯವಾಣಿಯಲ್ಲಿ ಎಲ್. ಶಿವಲಿಂಗಪ್ಪ ಅವರ "ಅನ್ವರ್ಥನಾಮವಾಗಿರಿಸಿಕೊಂಡ ಹಿರೇಗೌಡರ್",[೫೬] ೨೦೦೩ರಲ್ಲಿ ಪ್ರಜಾವಾಣಿಯಲ್ಲಿ ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ ಅವರ "ಬದುಕಿನ ಸಂಭ್ರಮಕ್ಕೆ ಬಣ್ಣಗಳ ಚಿತ್ತಾರ",[೫೭] ೨೦೦೪ರಲ್ಲಿ ಪ್ರಜಾವಾಣಿಯಲ್ಲಿ "ಕರ್ನಾಟಕ ಕುಂಚ : ಬನ್ನಿ, ನೋಡಿ ನೀವೂ ಕೊಂಚ!",[೫೮] ೨೦೦೫ರಲ್ಲಿ ಪ್ರಜಾವಾಣಿಯಲ್ಲಿ ಆರ್ಯ ಅವರ "ಸಮಕಾಲೀನ ಕಲೆಯ ಒಲವು-ಸವಾಲುಗಳು",[೫೯] ೨೦೦೫ರಲ್ಲಿ ಡೆಕ್ಕನ್ ಹೆರಾಲ್ಡನಲ್ಲಿ ಟಿ.ಜಯತಿಪ್ಪೇಶ ಅವರ "A Career full of colour",[೬೦] ೨೦೦೬ರಲ್ಲಿ ಕನ್ನಡ ಪ್ರಭದಲ್ಲಿ "ಜಿಲ್ಲಾ ಉತ್ಸವದಲ್ಲಿ ಕಾವ್ಯ-ಕುಂಚ-ಗಾಯನದ ತ್ರಿವೇಣಿ ಸಂಗಮ" ವರದಿ,[೬೧], ೨೦೦೬ರಲ್ಲಿ ಕರ್ಮವೀರದಲ್ಲಿ ಹೇಮಂತಕುಮಾರ ದೇಸಾಯಿ ಅವರ "ಅಪೂರ್ವ ಕಲಾವಿದ ಪ್ರೋ.ವಿ.ಬಿ.ಹಿರೇಗೌಡರ್"[೬೨] ಹೀಗೆ ಹಿರೇಗೌಡರ ಕುರಿತಂತೆ ಲೇಖನಗಳು ಪ್ರಕಟವಾಗಿದ್ದನ್ನು ಹೊರತುಪಡಿಸಿದರೆ ಗಂಭೀರವಾದ ಅಧ್ಯಯನಗಳು ಕಂಡುಬರುವುದಿಲ್ಲ.

### ಅಧ್ಯಯನದ ಸ್ವರೂಪ

ಈ ಅಧ್ಯಯನವನ್ನು ಏಳು ಅಧ್ಯಾಯಗಳಲ್ಲಿ ವಿಂಗಡಿಸಿಕೊಂಡಿದ್ದು ಪ್ರತಿಯೊಂದು ಅಧ್ಯಾಯದ ವಿಷಯವನ್ನು ಕುರಿತ ಸಂಕ್ಷಿಪ್ತ ಸ್ವರೂಪದ ಮಾಹಿತಿಯನ್ನು ಇಲ್ಲಿ ನೀಡಲಾಗುವುದು.

**ಒಂದನೆಯ ಅಧ್ಯಾಯ**ದಲ್ಲಿ ಅಧ್ಯಯನದ ಉದ್ದೇಶ, ಸ್ವರೂಪ, ವೈಧಾನಿಕತೆಗಳನ್ನು ಮತ್ತು ಆಕರ ಸಾಮಗ್ರಿಗಳನ್ನು ಕುರಿತಾದ ವಿವರಣೆ ಇರುವುದು.

**ಎರಡನೆಯ ಅಧ್ಯಾಯ**ದಲ್ಲಿ ಹಿರೇಗೌಡರ ಇವರು ಜನಿಸಿದ ಗುಡಿಗೇರಿಯ ಸಾಂಸ್ಕೃತಿಕ ಪರಿಸರದ ಹಿನ್ನೆಲೆಯೊಂದಿಗೆ ಅವರ ಪ್ರಾಥಮಿಕ ಶಿಕ್ಷಣ, ಪ್ರೌಢಶಿಕ್ಷಣದ ವಿವಿಧ ಘಟ್ಟಗಳು, ಚಿತ್ರಕಲಾಶಿಕ್ಷಣ ಪಡೆದ ಪರಿಸರ ನಂತರದಲ್ಲಿ ಅವರ ವೃತ್ತಿ ಜೀವನದ ವಿವಿಧ ಮಜಲುಗಳನ್ನು ದಾಖಲಿಸಲಾಗುವದು.

**ಮೂರನೆಯ ಅಧ್ಯಾಯ**ದಲ್ಲಿ ಹಿರೇಗೌಡರು ರಚಿಸಿದ ರೇಖಾಚಿತ್ರಗಳನ್ನು ಮಾಧ್ಯಮವಾರು, ವಿಷಯವಾರು ವರ್ಗೀಕರಿಸಿಕೊಂಡು ವಿಮರ್ಶಾತ್ಮಕ ಅಧ್ಯಯನ ಕೈಗೊಳ್ಳಲಾಗುವುದು.

**ನಾಲ್ಕನೆಯ ಅಧ್ಯಾಯ**ದಲ್ಲಿ ಹಿರೇಗೌಡರು ರಚಿಸಿದ ವರ್ಣಚಿತ್ರಗಳನ್ನು ಮಾಧ್ಯಮವಾರು, ವಿಷಯವಾರು ವರ್ಗೀಕರಿಸಿಕೊಂಡು ವಿಮರ್ಶಾತ್ಮಕ ಅಧ್ಯಯನ ಕೈಗೊಳ್ಳಲಾಗುವುದು.

---

೫೫. ಚಿ.ಸು.ಕೃಷ್ಣಸೆಟ್ಟಿ : ಪ್ರಜಾವಾಣಿ : ಬದುಕಿನ ಸಂಭ್ರಮಕ್ಕೆ ಸಂಭ್ರಮಾತ್ಮಕ ಪ್ರತಿಕ್ರಿಯೆ : ೧೧.೦೬.೨೦೦೨
೫೬. ಎಲ್. ಶಿವಲಿಂಗಪ್ಪ : ಉದಯವಾಣಿ : ಅನ್ವರ್ಥನಾಮವಾಗಿರಿಸಿಕೊಂಡ ಹಿರೇಗೌಡರ್ : ೧೧.೦೨.೨೦೦೩
೫೭. ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ : ಪ್ರಜಾವಾಣಿ : ಬದುಕಿನ ಸಂಭ್ರಮಕ್ಕೆ ಬಣ್ಣಗಳ ಚಿತ್ತಾರ : ೩೦.೦೩.೨೦೦೩
೫೮. ವರದಿ : ಪ್ರಜಾವಾಣಿ : ಕರ್ನಾಟಕ ಕುಂಚ : ಬನ್ನಿ, ನೋಡಿ ನೀವೂ ಕೊಂಚ! ೧೪.೧೦.೨೦೦೪
೫೯. ಆರ್ಯ : ಪ್ರಜಾವಾಣಿ : ಸಮಕಾಲೀನ ಕಲೆಯ ಒಲವು ಸವಾಲುಗಳು :೨೭.೦೨.೨೦೦೫
೬೦. ಟಿ.ಜಯತಿಪ್ಪೇಶ : ಡೆಕ್ಕನ್ ಹೆರಾಲ್ಡ : A Career full of colour : ೧೨.೦೪.೨೦೦೫
೬೧. ವರದಿ, ಕನ್ನಡ ಪ್ರಭ : ಜಿಲ್ಲಾ ಉತ್ಸವದಲ್ಲಿ ಕಾವ್ಯ-ಕುಂಚ-ಗಾಯನದ ತ್ರಿವೇಣಿ ಸಂಗಮ : ೨೧.೦೨.೨೦೦೬
೬೨. ಹೇಮಂತಕುಮಾರ ದೇಸಾಯಿ : ಅಪೂರ್ವ ಕಲಾವಿದ ಪ್ರೋ.ವಿ.ಬಿ.ಹಿರೇಗೌಡರ್ : ೨೬.೦೨೨೦೦೬

**ಐದನೆಯ ಅಧ್ಯಾಯ**ದಲ್ಲಿ ಹಿರೇಗೌಡರು ರಚಿಸಿದ ಭಿತ್ತಿಚಿತ್ರ/ಭಿತ್ತಿಶಿಲ್ಪ ಮತ್ತು ಶಿಲ್ಪಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗುವುದು.

**ಆರನೆಯ ಅಧ್ಯಾಯ**ದಲ್ಲಿ ಹಿರೇಗೌಡರು ರಚಿಸಿದ ಕಲಾಕೃತಿಗಳ ಮೇಲೆ ಆದ ಪ್ರಭಾವ, ಪ್ರೇರಣೆ ಮತ್ತು ರಚನಾಶೈಲಿ, ತಂತ್ರಗಾರಿಕೆಗಳ ಕುರಿತು ಚರ್ಚೆ ಮಾಡಲಾಗುವುದು.

**ಏಳನೆಯ ಅಧ್ಯಾಯ**ವು ಪ್ರಸ್ತುತ ಅಧ್ಯಯನದ ಫಲಿತಗಳ ಕುರಿತಾದ ಸಮೀಕ್ಷೆಯನ್ನು ಒಳಗೊಂಡಿರುತ್ತದೆ.

**ಅಧ್ಯಯನ ವೈಧಾನಿಕತೆ**

ವ್ಯಕ್ತಿಗತ ಅಧ್ಯಯನದ ವಿಧಾನದಲ್ಲಿ ಚಿತ್ರಕಲಾವಿದ ವಿ.ಬಿ.ಹಿರೇಗೌಡರ ಅವರ ಅಧ್ಯಯನವನ್ನು ಕೈಗೊಳ್ಳಲಾಗಿದ್ದು ಇಲ್ಲಿ ಎರಡು ರೀತಿಯ ಆಕರಗಳನ್ನು ಬಳಸಿಕೊಳ್ಳಲಾಗುವುದು.

**೧. ಮೂಲ ಆಕರ ಸಾಮಗ್ರಿ**

**೨. ಆನುಷಂಗಿಕ ಆಕರ ಸಾಮಗ್ರಿ**

ಈ ಎರಡು ಮೂಲಗಳಿಂದ ವಿಷಯ ಸಂಗ್ರಹ ಮಾಡಲಾಗುವುದು.

**೧. ಮೂಲ ಆಕರ ಸಾಮಗ್ರಿ**

ಮೂಲ ಆಕರ ಸಾಮಗ್ರಿಗಳಲ್ಲಿ ಮುಖ್ಯವಾದುದು ಕ್ಷೇತ್ರಕಾರ್ಯ. ಸ್ವತಃ ಕಲಾವಿದರ ಸಂದರ್ಶನ, ಅವರೊಂದಿಗಿನ ಚರ್ಚೆ, ಕಲಾಕೃತಿಗಳ ಛಾಯಾಚಿತ್ರಣ ಮಾಡುವುದು. ಅವರ ಸಮಕಾಲೀನರ ಸಂದರ್ಶನಗಳು ಹಾಗೂ ಸಂಗ್ರಹಿತ ವಿಷಯಗಳ ಪಟ್ಟಿ ಸಿದ್ಧಪಡಿಸಿ ವಿವಿಧ ರೂಪದಲ್ಲಿ ಅಧ್ಯಯನ ಮಾಡಲಾಗುವುದು.

**ಅ. ಸಂದರ್ಶನ**

ಗುಡಗೇರಿಯಲ್ಲಿ ಜನಿಸಿದ ವಿ.ಬಿ.ಹಿರೇಗೌಡರ ಅವರನ್ನು ಸಂದರ್ಶಿಸಿ ಅವರ ಬಾಲ್ಯ, ಪ್ರಾಥಮಿಕ ಶಿಕ್ಷಣ, ಅಂದಿನ ಸನ್ನಿವೇಶದಲ್ಲಿ ಕಲೆಯ ಕಡೆಗೆ ಅವರ ಮನಸ್ಸು ಆಕರ್ಷಿತವಾದ ಬಗೆ, ಪ್ರೇರಣೆ ನೀಡಿದ ವ್ಯಕ್ತಿಗಳು, ಗ್ರಾಮದ ಪರಿಸರ, ಶಾಲಾ ಪರಿಸರ ಮತ್ತು ಅಲ್ಲಿನ ಆಚರಣೆಗಳು ಹೇಗೆ ಪ್ರಭಾವ ಬೀರಿದವು ಹಾಗೂ ಅವರ ಕೌಟುಂಬಿಕ ಹಿನ್ನೆಲೆಯನ್ನು ಸಂಗ್ರಹಿಸಲಾಗುವುದು. ನಂತರ ಪ್ರೌಢಶಾಲಾ ವ್ಯಾಸಂಗ, ಕಲಾಶಿಕ್ಷಣ ಮತ್ತು ಆ ಸಂದರ್ಭದಲ್ಲಿ ರಚನೆಯಾದ ಕಲಾರಚನೆಗಳ ಹಿನ್ನೆಲೆಗಳ ಅನುಭವಗಳನ್ನು ಇಲ್ಲಿ ದಾಖಲಿಸಲಾಗುವುದು. ದಾವಣಗೆರೆ ಕಲಾಶಾಲೆಯ ವೃತ್ತಿ ಜೀವನ, ಅವರ ಕಲಾಪ್ರದರ್ಶನಗಳ ಕುರಿತು ಬಂದ ವಿಮರ್ಶೆಗಳು, ಸಾರ್ವಜನಿಕ ಪ್ರತಿಕ್ರಿಯೆಗಳನ್ನು ವಿವಿಧ ಮೂಲಗಳಿಂದ ಸಂಗ್ರಹಿಸಲಾಗುವುದು. ಹಿರೇಗೌಡರ ಶಿಷ್ಯಬಳಗ, ಆಪ್ತವಲಯದ ಒಡನಾಡಿಗಳಿಂದ ಪ್ರಶ್ನಾವಳಿಗಳ ಮೂಲಕ ಅಭಿಪ್ರಾಯ ಸಂಗ್ರಹಿಸಲಾಗುವುದು. ಇದಕ್ಕೂ ಮುಖ್ಯವಾಗಿ

ಹಿರೇಗೌಡರ ಅವರ ಕಲಾಕೃತಿಗಳ ಅಭಿವ್ಯಕ್ತಿಯ ಕುರಿತು ಅವರ ಅನಿಸಿಕೆಗಳನ್ನು, ರಚನೆಯ ಹಿನ್ನೆಲೆ, ಪ್ರೇರಣೆ ಪ್ರಭಾವಗಳನ್ನು ಸಂದರ್ಶನದ ಮೂಲಕ ಸಂಗ್ರಹಿಸಿ ಇಲ್ಲಿ ಬಳಸಿಕೊಳ್ಳಲಾಗುವುದು.

**ಬ. ಛಾಯಾಚಿತ್ರಣ**

ಹಿರೇಗೌಡರು ತಮ್ಮ ಬದುಕಿನುದ್ದಕ್ಕೂ ಸಾವಿರಾರು ಕಲಾಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಕೆಲವು ಕಲಾಪ್ರೇಮಿಗಳ ಸಂಗ್ರಹದಲ್ಲಿದ್ದರೆ, ಇನ್ನೂ ಕೆಲವು ಹಿರೇಗೌಡರ ಸಂಗ್ರಹದಲ್ಲಿವೆ. ವಿದ್ಯಾರ್ಜನೆಯ ಸಂದರ್ಭದಲ್ಲಿ ರಚಿಸಿದ್ದ ಕಲಾಕೃತಿಗಳು, ಅಧ್ಯಾಪನದಲ್ಲಿ ರಚಿಸಿದ ಕಲಾಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗುವುದು. ಅವುಗಳಲ್ಲಿ ರೇಖಾಚಿತ್ರಗಳು, ವಿವಿಧ ಮಾಧ್ಯಮದ ವರ್ಣಚಿತ್ರಗಳು, ಶಿಲ್ಪಕಲಾಕೃತಿಗಳಲ್ಲದೇ ಇನ್ನೂ ಮುಂತಾದ ಕಲಾಕೃತಿಗಳನ್ನು ಛಾಯಾಚಿತ್ರೀಕರಣ ಮಾಡಿಕೊಂಡು ಗಣಕಯಂತ್ರದ ಮೂಲಕ ಅವುಗಳನ್ನು ಪುನರ್ ಮುದ್ರಿಸಿ ಮಾಧ್ಯಮವಾರು, ವಿಷಯವಾರು ವಿಂಗಡಿಸಿಕೊಂಡು ಇಲ್ಲಿನ ಅಧ್ಯಾಯಗಳಿಗೆ ಬಳಸಿಕೊಳ್ಳಲಾಗುವುದು.

ಅಧ್ಯಾಯ : ಎರಡು

**ವಿ.ಬಿ.ಹಿರೇಗೌಡರ : ಸಾಂಸ್ಕೃತಿಕ ಪರಿಸರ, ಬಾಲ್ಯ,, ಕಲಾ ಶಿಕ್ಷಣ ಮತ್ತು ವೃತ್ತಿ ಜೀವನ**

ಈ ಅಧ್ಯಾಯದಲ್ಲಿ ವಿ.ಬಿ.ಹಿರೇಗೌಡರ್‌ರವರ ಜನ್ಮ ಸ್ಥಳದ ಸಾಂಸ್ಕೃತಿಕ ಪರಿಸರ, ಬಾಲ್ಯ ಜೀವನ, ತಂದೆತಾಯಿ, ಕೌಟುಂಬಿಕ ಹಿನ್ನೆಲೆ ಪ್ರಾಥಮಿಕ, ಪ್ರೌಢಶಿಕ್ಷಣದ ಹಂತಗಳನ್ನು ಮತ್ತು ಇದೇ ಸಂದರ್ಭದಲ್ಲಿ ಕಲೆಯ ಕಡೆಗೆ ಹರಿದು ಮುಂದುವರೆದ ಅವರ ಮನಸ್ಸು, ಪ್ರೇರಣೆ ನೀಡಿದ ಗುರುಗಳು ಇತ್ಯಾದಿ ವಿಷಯಗಳನ್ನು ಅಧ್ಯಯನ ಮಾಡಲಾಗುವುದು.

ವಿ.ಬಿ.ಹಿರೇಗೌಡರ್ ಅವರು ತಮ್ಮ ಕಲಾಶಿಕ್ಷಣವನ್ನು ಧಾರವಾಡದಲ್ಲಿ ಕಲಾಗುರು ಡಿ.ವಿ.ಹಾಲಭಾವಿಯವರ ಕಲಾಶಾಲೆಯಲ್ಲಿ ಪೂರೈಸಿದರು. ಆ ಸಂದರ್ಭದ ದಿನಗಳನ್ನು ಮೆಲುಕು ಹಾಕುವ ಮತ್ತು ಅಂದಿನ ಶೈಕ್ಷಣಿಕ ದಿನಗಳಲ್ಲಿ ಡಿ.ವಿ.ಹಾಲಭಾವಿಯವರು, ಡಾ.ಎಂ.ವಿ.ಮಿಣಜಿಗಿಯವರು ಹಾಗೂ ಬಸವರಾಜ ಹಳೇಜೋಳದ ಅವರುಗಳು ಹಿರೇಗೌಡರ ಅವರಿಗೆ ಕಲಾಶಿಕ್ಷಣ ನೀಡಿದ ಕುರಿತು ಇಲ್ಲಿ ಸಮಗ್ರ ಮಾಹಿತಿಯನ್ನು ದಾಖಲಿಸಲಾಗುವುದು. ಇದೇ ಅಧ್ಯಾಯದ ಇನ್ನೊಂದು ಭಾಗವಾಗಿ ಹಿರೇಗೌಡರ್ ಅವರು ದಾವಣಗೆರೆ ಕಲಾಶಾಲೆಯ ಉಪನ್ಯಾಸಕರಾಗಿ ನೇಮಕಗೊಂಡು ಎಂಟು ವರ್ಷಗಳ ಕಾಲ ವಿದ್ಯಾರ್ಥಿಗಳೊಂದಿಗೆ ಬೆರೆತ ದಿನಗಳನ್ನು ಮತ್ತು ನಂತರದ ದಿನಗಳಲ್ಲಿ ಅದೇ ಕಲಾಶಾಲೆಯ ಪ್ರಾಚಾರ್ಯರಾಗಿ ಆಡಳಿತದ ಚುಕ್ಕಾಣಿ ಹಿಡಿದ ಅವರು ಕೈಗೊಂಡ ಕಾರ್ಯಗಳನ್ನು ಇಲ್ಲಿ ದಾಖಲಿಸಲಾಗುವುದು. ಇದರೊಂದಿಗೆ ಅವರ ಸಹೋದ್ಯೋಗಿಗಳೊಂದಿಗೆ ಸಂದರ್ಶಿಸಿ ಹಿರೇಗೌಡರ ಅವರ ಬಗ್ಗೆ ಅಭಿಪ್ರಾಯಗಳನ್ನು ಸಂಗ್ರಹಿಸಿ ದಾಖಲಿಸುವ ಕಾರ್ಯವನ್ನು ಇಲ್ಲಿ ಮಾಡಲಾಗುವುದು. ತಮ್ಮ ವೃತ್ತಿಯೊಂದಿಗೆ ಕಲಾಕೃತಿಗಳನ್ನು ರಚಿಸುವ ಪ್ರವೃತ್ತಿಯನ್ನು ಗಂಭೀರವಾಗಿ ಕೈಗೊಂಡ ಗೌಡರು ಈ ಸಂದರ್ಭದಲ್ಲಿ

ಸುಮಾರು ೧೦,೦೦೦ರೇಖಾ ಚಿತ್ರಗಳು, ೨,೦೦೦ ಜಲವರ್ಣ ಚಿತ್ರಗಳು ಹಾಗೂ ೧,೦೦೦ ತೈಲವರ್ಣ ಮತ್ತು ಮಿಶ್ರಮಾಧ್ಯಮದ ಚಿತ್ರಗಳನ್ನು ರಚಿಸಿರುವುದು ಕಂಡುಬರುತ್ತದೆ. ಇವುಗಳನ್ನು ಈ ಕೆಳಗಿನಂತೆ ವರ್ಗೀಕರಿಸಿಕೊಂಡು ಮುಂದಿನ ಪ್ರತ್ಯೇಕ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

೧. ರೇಖಾಚಿತ್ರಗಳ ವರ್ಗೀಕರಣ

೧. ಭಾವಚಿತ್ರಗಳು (ಶೈಕ್ಷಣಿಕ, ಸಾಮಾಜಿಕ,ಧಾರ್ಮಿಕ)

೧:೧. ಪೆನ್ಸಿಲ್

೧:೨. ಶಾಯಿ

೧:೩. ಕ್ರೆಯಾನ್

೨. ಪೂರ್ಣಭಾವಚಿತ್ರಗಳು (ಶೈಕ್ಷಣಿಕ, ಸಾಮಾಜಿಕ,ಧಾರ್ಮಿಕ)

೨:೧. ಶಾಯಿ

೩. ಪ್ರಕೃತಿಚಿತ್ರಗಳು

೩:೧. ಪೆನ್ಸಿಲ್

೩:೨. ಶಾಯಿ

೩:೩. ಕ್ರೆಯಾನ್

೪. ಶಿಲ್ಪರೇಖಾಚಿತ್ರಗಳು

೪:೧. ಶಾಯಿ

೪:೨. ಕ್ರೆಯಾನ್

೫. ಆಧುನಿಕ ನೆಲೆಯ ರೇಖಾಚಿತ್ರಗಳು

೫.೧. ಪೆನ್ಸಿಲ್

೫:೨. ಶಾಯಿ

೨. ವರ್ಣಚಿತ್ರಗಳ ವರ್ಗೀಕರಣ

೧. ಭಾವಚಿತ್ರ

೧:೧. ಜಲವರ್ಣ

೧:೨. ತೈಲವರ್ಣ

೨. ಪೂರ್ಣಭಾವಚಿತ್ರಗಳು (ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ)

೨:೧. ಜಲವರ್ಣ

೨:೨. ತೈಲವರ್ಣ

೩. ಪ್ರಕೃತಿ ಚಿತ್ರಗಳು

೩:೧. ಜಲವರ್ಣ

೩:೨. ಅಕ್ರಿಲಿಕ್ ವರ್ಣ

೩:೩. ತೈಲವರ್ಣ

೩:೪. ಮಿಶ್ರ ಮಾಧ್ಯಮ

**೪. ಶಿಲ್ಪವರ್ಣಚಿತ್ರಗಳು**

೪:೧. ಜಲವರ್ಣ

೪:೨. ಇಂಕ್

೪:೩. ತೈಲವರ್ಣ

**೫. ಆಧುನಿಕ ನೆಲೆಯ ವರ್ಣಚಿತ್ರಗಳು**

೫:೧. ಅಕ್ರಲಿಕ್ ವರ್ಣ

೫:೨. ಇಂಕ್

೫:೩. ತೈಲವರ್ಣ (ಆಧುನಿಕ, ನೈಜ, ಧಾರ್ಮಿಕ ಚಿತ್ರಗಳು)

೫:೪. ಡ್ರೈ ಪೇಸ್ಟಲ್

೫:೫. ಮಿಶ್ರ ಮಾಧ್ಯಮ

**೩. ಭಿತ್ತಿಚಿತ್ರ/ಶಿಲ್ಪ ಮತ್ತು ಶಿಲ್ಪಗಳ ವರ್ಗೀಕರಣ**

**೧. ಭಿತ್ತಿಚಿತ್ರಗಳು**

೧:೧. ಎಕ್ರಲಿಕ್

೧:೨. ಪೋಸ್ಟರ್

**೨. ಭಿತ್ತಿಶಿಲ್ಪಗಳು**

೨:೧. ಸುಡಾವೆ ಮಣ್ಣು

೨:೨. ಮೆಟಲ್

೨:೩. ಸಿಮೆಂಟ್

**೩. ಶಿಲ್ಪಗಳು**

೩:೧. ಸಿಮೆಂಟ್

**೪. ಸ್ತಬ್ಧಚಿತ್ರಗಳು**

ಈ ಮೇಲಿನ ವರ್ಗೀಕರಣದಂತೆ ಚಿತ್ರಗಳನ್ನು ವರ್ಗೀಕರಿಸಿಕೊಂಡು ಮುಂದಿನ ಪ್ರತ್ಯೇಕ ಅಧ್ಯಾಯಗಳಲ್ಲಿ ಅಧ್ಯಯನ ಮಾಡಲಾಗುವುದು.

ಅಧ್ಯಾಯ : ಮೂರು

**ವಿ.ಬಿ.ಹಿರೇಗೌಡರ : ರೇಖಾಚಿತ್ರಗಳು**

ರೇಖೆಗಳು ಚಿತ್ರಕಲೆಯ ತಾಯಿ ಬೇರಿದ್ದಂತೆ. ರೇಖೆಗಳಿಲ್ಲದೇ ಯಾವುದೇ ಚಿತ್ರ ಪೂರ್ಣಗೊಳ್ಳುವುದಿಲ್ಲ. ವರ್ಣಚಿತ್ರವಾಗಲಿ ಗ್ರಾಫಿಕ್ ಕೃತಿಯಾಗಲಿ ಇನ್ನಾವುದೇ ಚಿತ್ರವಾಗಿರಲಿ

ಅಲ್ಲಿ ರೇಖೆಯ ಸಾಂಗತ್ಯ ಇರಲೇಬೇಕು. ಕಲಾವಿದನೊಬ್ಬನನ್ನು ಬಯಲು ಮಾಡುವುದು ಅವನ ರೇಖಾಚಿತ್ರಗಳೇ. ಅದು ಅವನ ಸಹಿ ಇದ್ದಂತೆ ಎನ್ನುವ ಮಾತು ಕಲಾ ವಲಯದಲ್ಲಿ ಪ್ರಚಲಿತವಾಗಿರುವುದು. ಈ ಹಿನ್ನೆಲೆಯಲ್ಲಿ ಪ್ರಸ್ತುತ ಹಿರೇಗೌಡರರವರ ರೇಖಾಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗುವುದು.

ಹಿರೇಗೌಡರವರು ಈವರೆಗೆ ರಚಿಸಿದ ಅಸಂಖ್ಯಾತ ರೇಖಾ ಚಿತ್ರಗಳು ಅವರ ಕಲಾಭಿವ್ಯಕ್ತಿಗೆ ಬೆನ್ನೆಲುಬಾಗಿ ನಿಂತಿವೆ. ನಿತ್ಯ ರಚಿಸುವ ರೇಖಾಚಿತ್ರಗಳು ಅನೇಕ ಸಂಯೋಜನೆ ಕಲಾಕೃತಿಗಳ ಹುಟ್ಟಿಗೆ ಕಾರಣವಾಗಿವೆ. ೭೦ರದಶಕದ ಈಚೆಗೆ ಹಿರೇಗೌಡರು ಅನೇಕ ಮಾಧ್ಯಮಗಳಲ್ಲಿ ರೇಖಾಚಿತ್ರಗಳನ್ನು ರಚಿಸುತ್ತಾ ಬಂದಿದ್ದಾರೆ. ನವ್ಯಶೈಲಿಯಲ್ಲಿ ರಚಿಸಿದ ಕೃತಿಗಳು ಸಾಮಾಜಿಕ ಬದ್ಧತೆಯನ್ನು, ಎಡಪಂಥಿಯ ಧೋರಣೆಗಳನ್ನು ಬಿಂಬಿಸುವ ಹಾಗೂ ಇನ್ನಿತರೆ ವಿಷಯಗಳ ಕುರಿತಂತೆ ಅನೇಕ ರೇಖಾ ಚಿತ್ರಗಳನ್ನು ರಚಿಸಿದ್ದಾರೆ. ಇವುಗಳನ್ನು ಈ ಅಧ್ಯಾಯದಲ್ಲಿ ಸಮಗ್ರವಾಗಿ ವಿಮರ್ಶೆಗೆ ಒಳಪಡಿಸುವ ಉದ್ದೇಶವನ್ನು ಇಲ್ಲಿ ಹೊಂದಲಾಗಿದೆ.

ಅಧ್ಯಾಯ : ನಾಲ್ಕು

**ವಿ.ಬಿ.ಹಿರೇಗೌಡರ : ವರ್ಣಚಿತ್ರಗಳು**

ಹಿರೇಗೌಡರು ಸಾವಿರಾರು ರೇಖಾಚಿತ್ರಗಳನ್ನು ರಚಿಸಿದಂತೆ ಅಷ್ಟೇ ಸಂಖ್ಯೆಯಲ್ಲಿ ವರ್ಣಚಿತ್ರಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಭಾವಚಿತ್ರ, ಪ್ರಕೃತಿ ಚಿತ್ರ, ಸಂಯೋಜನಾ ಚಿತ್ರಗಳು ಜಲವರ್ಣ, ತೈಲ ವರ್ಣ, ಪೇಸ್ಟಲ್, ಡ್ರೈ ಪೇಸ್ಟಲ್, ಎಕ್ರಿಲಿಕ್, ಪೋಸ್ಟರ್ ಇನ್ನೂ ಮುಂತಾದ ಮಾಧ್ಯಮಗಳನ್ನು ಪ್ರಾಯೋಗಿಕ ನೆಲೆಯಲ್ಲಿ ರಚಿಸಿರುವುದು ಅಧ್ಯಯನ ಸಂದರ್ಭದಲ್ಲಿ ಕಂಡುಬರುತ್ತದೆ. ಪ್ರಸ್ತುತ ವರ್ಣ ಕಲಾಕೃತಿಗಳಲ್ಲಿ ಎಂದಿನಂತೆ ಅವರು ಪ್ರಾಕೃತಿಕ, ಸಾಮಾಜಿಕ, ಧಾರ್ಮಿಕ ಇನ್ನೂ ಮುಂತಾದ ನೆಲೆಗಳಲ್ಲಿ ಅವರ ಚಿಂತನೆಗಳು ಮೂರ್ತರೂಪ ತಾಳಿವೆ. ಅವರ ಕೃತಿಗಳಲ್ಲಿ ತಂತ್ರಗಾರಿಕೆ, ಸಾಂಕೇತಿಕ ಛಾಯೆಗಳು ಹೇಗೆ ಮೂಡಿವೆ ಎಂಬುದನ್ನು ಪ್ರಸ್ತುತ ಅಧ್ಯಾಯದಲ್ಲಿ ಕಂಡುಕೊಳ್ಳಲಾಗುವುದು ಹಾಗೂಆ ಹಿನ್ನೆಲೆಯಲ್ಲಿ ಹಿರೇಗೌಡರ ಅವರ ಕೃತಿಗಳನ್ನು ಅಧ್ಯಯನ ಮಾಡಲಾಗುವುದು.

ಅಧ್ಯಾಯ : ಐದು

**ವಿ.ಬಿ.ಹಿರೇಗೌಡರ : ಭಿತ್ತಿಚಿತ್ರ, ಭಿತ್ತಿಶಿಲ್ಪ ಮತ್ತು ಶಿಲ್ಪಕಲಾಕೃತಿಗಳು**

ಸಾವಿರ ಸಾವಿರ ಸಂಖ್ಯೆಯಲ್ಲಿ ರೇಖಾ ಚಿತ್ರಗಳನ್ನು ರಚಿಸಿದ್ದರೆ, ಅಲ್ಪ ಸಂಖ್ಯೆಯ ಶಿಲ್ಪ ಮತ್ತು ಭಿತ್ತಿ ಶಿಲ್ಪಗಳನ್ನು ಸಾಂದರ್ಭಿಕವಾಗಿ ಉದ್ಯಮಗಳ ಮತ್ತು ಸಾರ್ವಜನಿಕ ಕಟ್ಟಡಗಳಲ್ಲಿ ರಚಿಸಿರುವುದನ್ನು ಕಾಣಬಹುದಾಗಿದೆ. ಹಾಗೆಯೇ ಧಾರ್ಮಿಕ ವಲಯದಲ್ಲೂ ಕೂಡ ಭಿತ್ತಿ ಶಿಲ್ಪಗಳನ್ನು ರಚಿಸಿರುವುದು ಹಿರೇಗೌಡರ ಪ್ರತಿಭೆಯ ವಿಸ್ತಾರಕ್ಕೆ ಸಾಕ್ಷಿ. ಹಿರೇಗೌಡರ ಅವರು ದಾವಣಗೆರೆಯ ಪ್ರಮುಖ ವೃತ್ತಗಳಲ್ಲಿ ರಾಜಕೀಯ ನಾಯಕರ, ಮಠ ಮಾನ್ಯಗಳಲ್ಲಿ ಧಾರ್ಮಿಕ ವ್ಯಕ್ತಿಗಳ ಭಾವ

ಶಿಲ್ಪಗಳನ್ನು ರಚಿಸಿಕೊಟ್ಟಿದ್ದಾರೆ. ಹಾಗೆಯೇ ಚರ್ಚು, ಆಸ್ಪತ್ರೆ, ಸ್ಮಶಾನ, ವೈಕುಂಠಧಾಮ, ಚಿತ್ರಮಂದಿರಗಳ ಹೊರಭಿತ್ತಿಯ ಮೇಲೆ ಪೂರಕ ವಿಷಯಗಳ ಭಿತ್ತಿಶಿಲ್ಪಗಳನ್ನು ಪ್ಲಾಸ್ಟರ ಆಫ್ ಪ್ಯಾರೀಸ್‌ನಲ್ಲಿ, ಸಿಮೆಂಟಿನಲ್ಲಿ ರಚಿಸಿರುವುದನ್ನು ಕಾಣಬಹುದಾಗಿದೆ. ಅವುಗಳ ರಚನಾ ವಿನ್ಯಾಸ, ತಂತ್ರಗಾರಿಕೆ, ಭಾವಾಭಿವ್ಯಕ್ತಿಗಳ ಕುರಿತಾಗಿ ಈ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

ಅಧ್ಯಾಯ : ಆರು

**ವಿ.ಬಿ.ಹಿರೇಗೌಡರ : ಕಲಾಕೃತಿಗಳ ಮೇಲಾದ ಪ್ರಭಾವ, ಪ್ರೇರಣೆ, ರಚನಾ ಶೈಲಿ, ತಂತ್ರಗಾರಿಕೆ**

ಕಲಾಕೃತಿಯೊಂದರ ನಿರ್ಮಾಣದ ಹಿಂದೆ ಅನುಭವ, ಪ್ರಭಾವ- ಪ್ರೇರಣೆಗಳು ಇದ್ದೇ ಇರುತ್ತವೆ. ಹಿರೇಗೌಡರ ಬಹುತೇಕ ಕಲಾಕೃತಿಗಳಲ್ಲಿ ಪ್ರಭಾವಗಳು ಮೂಡಿವೆ. ಹಿರೇಗೌಡರ ಅವರು ಒಂದೇ ಶೈಲಿಯಲ್ಲಿ ಕೃತಿ ರಚಿಸಿದವರಲ್ಲ. ಶೈಲಿ ಎಂಬ ಮನೋಭಾವದಿಂದ ದೂರವಾಗಿದ್ದು ಕಾಲಕಾಲಕ್ಕೆ ಅವರ ಕೃತಿಗಳಲ್ಲಿ ಶೈಲಿಯು ಬದಲಾಗುತ್ತಾ ಹೋಗಿದೆ. ಆದರೂ "ಇವರದೇ ಕೃತಿ ಇದು" ಎಂದು ಗುರುತಿಸುವ ಅಂಶ ಇವರ ಎಲ್ಲಾ ಕೃತಿಗಳಲ್ಲಿ ಪರೋಕ್ಷವಾಗಿ ಎದ್ದು ಕಾಣುತ್ತದೆ. ಪ್ರಾಪಂಚಿಕ ಘಟನೆಗಳು ನೈಸರ್ಗಿಕ ಘಟನೆಗಳು ಹಾಗೂ ಸಾಮಾಜಿಕ ಘಟನೆಗಳು ಇವರಿಗೆ ಕೃತಿರಚಿಸಲು ಹೇಗೆ ಪ್ರೇರಣೆ ನೀಡಿವೆ ಎಂಬುದನ್ನು ಕುರಿತು ಈ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗುವುದು.

ಅಧ್ಯಾಯ : ಏಳು

**ಸಮಾರೋಪ**

ಪ್ರಸ್ತುತ ಮಹಾಪ್ರಬಂಧದ ಏಳೂ ಅಧ್ಯಾಯದಲ್ಲಿ ಚರ್ಚಿತವಾದ ಫಲಿತಗಳ ವಿಶ್ಲೇಷಣೆಯನ್ನು ಈ ಅಧ್ಯಾಯದಲ್ಲಿ ಮಾಡಲಾಗುವುದು.

**ಅಧ್ಯಯನದ ವ್ಯಾಪ್ತಿ**

ವಿ.ಬಿ.ಹಿರೇಗೌಡರ ಕಲಾಕೃತಿ ರಾಜ್ಯ, ರಾಷ್ಟ್ರ ಮತ್ತು ಅಂತರಾಷ್ಟ್ರೀಯ ಕಲಾಪ್ರೇಮಿಗಳ ಸಂಗ್ರಹದಲ್ಲಿವೆ. ಇವೆಲ್ಲವನ್ನೂ ಅಧ್ಯಯನಕ್ಕೆ ಒಳಪಡಿಸಿಕೊಳ್ಳದೇ, ಕೇವಲ ಕರ್ನಾಟಕ ಸಂದರ್ಭಕ್ಕೆ ಮಾತ್ರವೇ ಪ್ರಸ್ತುತವನ್ನು ಅಧ್ಯಯನವನ್ನು ಸೀಮಿತಗೊಳಿಸಲಾಗಿದೆ.

*******




ಅಧ್ಯಾಯ : ಎರಡು

# ವಿ.ಬಿ.ಹಿರೇಗೌಡರ : ಸಾಂಸ್ಕೃತಿಕ ಪರಿಸರ, ಬಾಲ್ಯ, ಕಲಾಶಿಕ್ಷಣ ಮತ್ತು ವೃತ್ತಿ ಜೀವನ



ಕಲಾವಿದ ವಿ.ಬಿ.ಹಿರೇಗೌಡರ

ನನ್ನ ಕಲಾವಂತಿಕೆ ನನ್ನ ಸುತ್ತಲಿನ ಜನರನ್ನು ಕಲೆಯ ಬಗ್ಗೆ ಎಷ್ಟರಮಟ್ಟಿಗೆ ತಿಳುವಳಿಕೆ ನೀಡುತ್ತದೋ ಅದರ ಮೇಲೆ ನಿರ್ಧರಿತವಾಗುತ್ತದೆ.

## ಸಾಂಸ್ಕೃತಿಕ ಪರಿಸರ

ಮಾನವ ಪ್ರಕೃತಿಯ ಸಂವೇದನಾತ್ಮಕವಾದ ಒಂದು ಭಾಗವೇ ಆಗಿದ್ದು, ಪ್ರಕೃತಿಯ ಸಾಂಸ್ಕೃತಿಕ ವಿಶೇಷಣಗಳೆಲ್ಲವನ್ನೂ ತನ್ನಲ್ಲಿ ಮೈಗೂಡಿಸಿಕೊಂಡೇ ಬದುಕುತ್ತಾನೆ. ಆ ಬದುಕಿನಲ್ಲಿ ಅನೇಕ ಬಗೆಯ ವಿಸ್ಮಯಕಾರಿ ಸೃಜನಾತ್ಮಕ ಚಿಂತನೆಗಳು ಗರಿಗೆದರುತ್ತವೆ. ಆ ಒಂದು ಬಗೆಯ ಸೃಜನಾತ್ಮಕ ಅಲೆಗಳು ಅಕ್ಷರ, ಧ್ವನಿ, ಅಭಿನಯ ಮತ್ತು ದೃಶ್ಯಾತ್ಮಕ ರೂಪ ತಾಳುವುದರೊಂದಿಗೆ ಅಭಿವ್ಯಕ್ತಿಗೆ ಒಂದು ಸ್ಪಷ್ಟ ರೂಪಣ ಪ್ರಕಟವಾಗುತ್ತದೆ.

ಇಂತಹ ಅಭಿವ್ಯಕ್ತಿಗೆ ಆ ವ್ಯಕ್ತಿ ಬದುಕಿದ ಸುತ್ತಲಿನ ಪರಿಸರವೂ ಕಾರಣ. ಪರಿಸರದ ಕೂಸಾಗಿಯೇ ಚಿಗುರೊಡೆಯುವ ಮಾನವನ ಬೌದ್ಧಿಕತೆ ಅನೇಕ ಕಸರತ್ತುಗಳ ಮೂಲಕ ತನ್ನತನವನ್ನೂ ರೂಢಿಸಿಕೊಳ್ಳುತ್ತದೆ. ಅದೇ ಸಂದರ್ಭದಲ್ಲಿಯೇ ಭವಿಷ್ಯತ್ತಿನ ಮೊದಲ ಹೆಜ್ಜೆಗಳೂ ಕೂಡ ಬಾಲ್ಯದಲ್ಲಿಯೇ ಒಂದು ಸ್ಪಷ್ಟ ರೂಪ ತಾಳುವ ಕ್ರಿಯೆಗೆ ಉದಾಹರಣೆಯಾಗಿ ಅನೇಕ ಸೃಜಶೀಲರೂ ನಮ್ಮ ನಡುವೆ ಬೆಳೆದಿದ್ದಾರೆ, ಬೆಳೆಯುತ್ತಲಿದ್ದಾರೆ.

ಕಲೆಯ ಕುರಿತು ಡಾ.ಶಿವರಾಮ ಕಾರಂತರು ಕಲಾಪ್ರಪಂಚದಲ್ಲಿ ಹೀಗೆ ಬರೆಯುತ್ತಾರೆ– "ನಮಗೆ ತೃಪ್ತಿಯನ್ನು, ಸಂತಸವನ್ನು ಕೊಡುವ ಅನೇಕ ಅನುಭವಗಳು ಜೀವನದ ಉದ್ದಕ್ಕೂ ಆಗುತ್ತಿರುತ್ತವೆ.ಹಸಿದವನಿಗೆ ಸರಿಯಾದ ಆಹಾರ ದೊರಕಿದಾಗ ತೃಪ್ತಿ ಉಂಟಾಗಬಹುದು. ಪ್ರಕೃತಿಯ ಯಾವುದೋ ಒಂದು ಅದ್ಭುತ ಘಟನೆ ಇಲ್ಲವೇ ಸುಂದರ ದೃಶ್ಯ ಮನಸ್ಸಿಗೆ ಆನಂದವನ್ನು, ತೃಪ್ತಿಯನ್ನು ತಂದುಕೊಡಬಹುದು... ಮಾನವ ಆದಿ ಮಾನವನಂತಹ ಮುಗ್ಧ ಜೀವಿಯೇ ಆಗಿರಲಿ, ಅಥವಾ ಆಧುನಿಕ ಬುದ್ಧಿ ಶೀಲ ಜ್ಞಾನ ಸಂಪನ್ನ ವ್ಯಕ್ತಿಯೇ ಆಗಿರಲಿ, ತನ್ನಲ್ಲಿ ಹುಟ್ಟಿಕೊಂಡ

ಭಾವನೆ, ಅನಿಸಿಕೆಗಳ ಒತ್ತಡಗಳ ದೆಸೆಯಿಂದ ಉದ್ದೇಶಪಟ್ಟು ಮೃತ್ತಿಕೆ, ಕಲ್ಲು, ಕಾಗದ, ಬಣ್ಣ, ಕುಂಚ, ಉಳಿ– ಇವುಗಳಂಥ ವಸ್ತುಗಳನ್ನು ಬಳಸಿ, ತನ್ನ ಮನಸ್ಸಿನಲ್ಲಿ ತುಂಬಿಕೊಂಡ ಭಾವನೆ, ಕಲ್ಪನೆಗಳಿಗೆ ಇತರರು ಗುರುತಿಸಬಲ್ಲ ದೃಗ್ಗೋಚರ ರೂಪವನ್ನು, ಅಥವಾ ಬಿಂಬವನ್ನು ಸೃಷ್ಟಿಮಾಡಿ ಇರಿಸಿದಾಗ ಮಾತ್ರವೇ ಅದಕ್ಕೆ 'ಕಲಾಕೃತಿ' ಎಂಬ ಹೆಸರು ಬರುವ ಸಾಧ್ಯತೆಯಿದೆ. ಅಂಥದು 'ಕಲಾಕೃತಿ' ಎನಿಸಲೇಬೇಕು ಎಂಬ ನಿಯಮವಿಲ್ಲ. ಈ ಸೃಷ್ಟಿಕಾರ್ಯದಲ್ಲಿ ಒಬ್ಬ ವ್ಯಕ್ತಿ ತನ್ನಲ್ಲಿ ತುಂಬಿಕೊಂಡ ಭಾವನೆ, ಕಲ್ಪನೆಗಳನ್ನು ಮೂರ್ತ ರೂಪದಲ್ಲಿ ತೋರಿಸಲೇಬೇಕು ಎನ್ನುವ ಅದಮ್ಯ ಒತ್ತಡ ಅವನಲ್ಲಿ ಮೊದಲಿಗೆ ಚಿಗುರಬೇಕು. ಅದಕ್ಕೆ ಆತ ಮೂರ್ತ ರೂಪವನ್ನು ಕೊಡಬೇಕು; ಅದಕ್ಕಾಗಿ ಯೋಗ್ಯ ಸಾಧನ, ಸಲಕರಣೆಗಳನ್ನು ಆತ ತಂದುಕೊಳ್ಳಬೇಕು. ಅಂಥ ಸಾಧನ, ಸಲಕರಣೆ ಮತ್ತು ಯಾವುದೇ ಮಾಧ್ಯಮದ ಸಹಾಯದಿಂದ ಆತ ನಿರ್ಮಿಸಿದಂಥ ಒಂದು ಕೃತಿ ಸುತ್ತಣ ಜನರಿಗೆ ಅವನಲ್ಲುಂಟಾದ ನೋವನ್ನೋ, ಸಂತೋಷವನ್ನೋ, ಆನಂದವನ್ನೋ, ಇನ್ನಾವುದೋ ನಿಶ್ಚಿತ ಭಾವನೆಯನ್ನೋ ಅಭಿವ್ಯಕ್ತಿಸಿದಾಗ, ಅವುಗಳಿಂದ ಅವರು ಪುಳಕಿತರಾಗಿ ತೃಪ್ತಿಯೊಂದಿಗೆ, ಸಂತೋಷಪಡುವ ವಾತಾವರಣ ಉಂಟಾಗಬೇಕು. ಎಂಬ ಅವಲೇಶಕ್ಕೆ ಪಾತ್ರನಾಗುತ್ತಾನೆ.[೧] ಹೀಗೆ ಕಲಾವಿದ, ಕಲಾ ತಜ್ಞ ಎಂದು ಗುರುತಿಸಲ್ಪಟ್ಟವರಲ್ಲಿ ಹಿರೇಗೌಡರ ಅವರೂ ಒಬ್ಬರಾಗಿ ಸೇರ್ಪಡೆಯಾಗುತ್ತಾರೆ.

ಗುಡಗೇರಿ ಉತ್ತರ ಕರ್ನಾಟಕದ ಧಾರವಾಡ ಜಿಲ್ಲೆಯ ಕುಂದಗೋಳ ತಾಲೂಕಿನ ಒಂದು ಗ್ರಾಮ. ಆಗಿನ ಮುಂಬೈ ಪ್ರಾಂತದ ವ್ಯಾಪ್ತಿಯಲ್ಲಿರುವಾಗ ಕುಂದಗೋಳ ಮಹಲ್ ಎಂದು ಕರೆಯುತ್ತಿದ್ದರು. (ಇತ್ತಕಡೆ ತಾಲೂಕಾ ಕೇಂದ್ರವೂ ಅಲ್ಲ; ಅತ್ತ ಗ್ರಾಮವೂ ಅಲ್ಲ ಎಂಬ ಅರ್ಥದಲ್ಲಿ ಈ ಮಹಲ್ ಎಂಬ ಶಬ್ದ ಬಳಕೆಯಲ್ಲಿತ್ತು) ಪೂರ್ವಕ್ಕೆ ಲಕ್ಷ್ಮೇಶ್ವರ, ಪಶ್ಚಿಮಕ್ಕೆ ಶಿಸುವಿನಾಳ, ಶಿಗ್ಗಾಂವ, ದಕ್ಷಿಣಕ್ಕೆ ಹಾವೇರಿ ಉತ್ತರಕ್ಕೆ ದೊಡ್ಡ ಊರು ಹುಬ್ಬಳ್ಳಿ, ಮುಂದೆ ಸಾಗಿದರೆ ವಿದ್ಯಾಕೇಂದ್ರ ಧಾರವಾಡ ಮತ್ತು ಬೆಳಗಾವಿ ನಗರಗಳ ಸಂಪರ್ಕ ಉಗಿಬಂಡಿ ಮುಖಾಂತರ ಗುಡಗೇರಿಗಿತ್ತು. (ಈಗಲೂ ಇದೆ)

ಶಂಕರಿಯನ್ನು (ಸೇಂದಿ)ಖರೀದಿಸಲು ಹಣವಿಲ್ಲದಾಗ ಸಂತ ಶಿಶುನಾಳ ಷರೀಫರು ಪುರಾಣೇತಿಹಾಸ ಪ್ರಸಿದ್ಧವಾದ ಗುಡಗೇರಿಯ ಗ್ರಾಮದೇವಿ ದ್ಯಾಮವ್ವಳಲ್ಲಿ ನತ್ತನ್ನು ನೀಡುವಂತೆ ಬೇಡಿಕೊಳ್ಳುತ್ತಾರೆ. ಆಗ ದ್ಯಾಮವ್ವ ಷರೀಫನ ಸಾಮಾಜಿಕ ಕಾಳಜಿ, ವ್ಯಕ್ತಿತ್ವದ ಮಹಿಮೆಯನ್ನು ಮತ್ತು ಅವನ ಭಕ್ತಿಗೆ ಮೆಚ್ಚಿ ತನ್ನ ಮೂಗಿನಲ್ಲಿದ್ದ ನತ್ತನ್ನೇ ದಾನವಾಗಿ ನೀಡುತ್ತಾಳೆ. ಷರೀಫರು ಆ ನತ್ತನ್ನು ತೆಗೆದುಕೊಂಡು ಅಕ್ಕಸಾಲಿಗನಿಗೆ ಮಾರಲು ನೀಡಿದಾಗ, ಅದನ್ನು ಗಮನಿಸಿದ ಆತ ದ್ಯಾಮವ್ವನ ನತ್ತು ಎಂದು ಗೊತ್ತಾಗಿ ಊರಿನ ಹಿರಿಯರಿಗೆ ತಿಳಿಸುತ್ತಾನೆ. ಊರವರು ಷರೀಫನನ್ನು ಹಿಡಿದು ಪ್ರಶ್ನಿಸಿದಾಗ ನತ್ತನ್ನು ಕಳ್ಳತನ ಮಾಡಿಲ್ಲವೆಂದೂ, ಅದನ್ನು ಸ್ವತಃ ದ್ಯಾಮವ್ವಳೇ ಪ್ರತ್ಯಕ್ಷಳಾಗಿ ನೀಡಿದಳೆಂದು ಹೇಳುತ್ತಾನೆ. ಊರವರು ಷರೀಫರ ಮಾತನ್ನು ನಂಬದೇ ಇದನ್ನು ಸಿದ್ಧಮಾಡಿ ತೋರಿಸೆಂದು ಷರೀಫನಿಗೆ ಸವಾಲು ಹಾಕುತ್ತಾರೆ. ಷರೀಫನು ದೇವಿ ದ್ಯಾಮವ್ವಳಲ್ಲಿ ಊರಿನ ಹಿರಿಯರೊಂದಿಗೆ ಹೋದಾಗ ಆಶ್ಚರ್ಯ

೧೧. ಡಾ.ಶಿವರಾಮ ಕಾರಂತ : ಕಲಾಪ್ರಪಂಚ, ಪುಟ ೩

ಕಾದಿತ್ತು. ಊರ ಹಿರಿಯರು ನೋಡಿದ ನತ್ತು ದೇವಿಯ ಮೂಗಿನಲ್ಲೇ ಇತ್ತು. ಷರೀಫರ ಪವಾಡಕ್ಕೆ ಗ್ರಾಮಸ್ಥರು ತಲೆತಗ್ಗಿಸುತ್ತಾರೆ.[೨]

ಇಂತಹ ಪೌರಾಣಿಕ ಪ್ರಸಿದ್ಧಿಯನ್ನು ಪಡೆದ ಗುಡಗೇರಿ ಗ್ರಾಮಸ್ಥರ ಮುಖ್ಯ ಕಸಬು ಕೃಷಿ. ವಿಶೇಷವಾಗಿ ವರುಣನನ್ನೇ ನಂಬಿ ಬದುಕಿನ ಬಂಡಿ ಸಾಗಿಸುವ ಇಲ್ಲಿಯ ಜನಕ್ಕೆ ಕಾಲ ಕಾಲಕ್ಕೆ ಹದವಾದ ಮಳೆ ಬಿದ್ದರೆ ವರ್ಷವಿಡೀ ಸುಖಿಗಳು. ಕರಿ ಮಣ್ಣಿನಲ್ಲಿ ಬೆಳೆದ ಮೆಣಸಿನಕಾಯಿ ಬೆಳೆ ಬಂದರೆ ಊರಿನ ಮನೆ ಮಾಳಿಗೆ, ಕೆರೆಯ ದಿಬ್ಬಗಳೆಲ್ಲವೂ ಕಡುಗೆಂಪು ಬಣ್ಣದಲ್ಲಿ ಕಂಗೊಳಿಸುತ್ತಿರುತ್ತವೆ. ಬೆಳೆದ ಮೆಣಸಿಕಾಯಿಯನ್ನು ಮಾಳಿಗೆಯ ಮೇಲೆ ಒಣ ಹಾಕುವ ಮತ್ತು ಅದರಲ್ಲಿನ ಕೆಟ್ಟು ಹೋದ ಮೆಣಸಿಕಾಯಿ ಹೆಕ್ಕಿ ತೆಗೆಯುವ ಜನ, ಅದೇ ಸಂದರ್ಭದಲ್ಲಿ ಹೆಣ್ಣುಮಕ್ಕಳು ಹಾಡುವ ಜನಪದ ಗೀತೆಗಳು ಬಿಸಿಲ ಬದುಕಿಗೆ ರಂಗೇರಿಸುತ್ತವೆ.

ಮುಸ್ಸಂಜೆಯಾದರೆ ಊರಿನ ದ್ಯಾಮವ್ವನ ಗುಡಿ, ಬಸವಣ್ಣನ ಗುಡಿ, ಸಂಗಮೇಶ್ವರನ ಗುಡಿಗಳಲ್ಲಿ ಭಜನೆಯ ಸದ್ದು ಗುಡಗೇರಿಯಾಚೆಗಿನ ಹಳ್ಳಿಗಳಲ್ಲಿ ಪ್ರತಿಧ್ವನಿಸುತ್ತದೆ. ಹಬ್ಬ ಹರಿದಿನಗಳಲ್ಲಿ ಊರ ಕಲಾಭಿಜ್ಞರು ಕೂಡಿ ಆಡುವ ದೊಡ್ಡಾಟಗಳು, ರಾತ್ರಿಯಿಡೀ ನಡೆಯುವ ಸಂಗೀತಾಭಿನಯದಲ್ಲಿ ಊರ ಮಕ್ಕಳಾದಿಯಾಗಿ ಹಿರಿಯರೆಲ್ಲ ಸಂಭ್ರಮಿಸುವ ಕ್ಷಣವದು. ಗೌರಿ ಹುಣ್ಣಿಮೆ, ಭಾರತ ಹುಣ್ಣಿಮೆ ಬಂತೆಂದರೆ ರಾತ್ರಿಯೆಲ್ಲ ಹೆಂಗಳೆಯರ ಕೋಲಾಟ ಹಾಗೂ ಜನಪದ ಹಾಡಿಗೆ ಕಂಪು ಇತ್ಯಾದಿ. ಇಂತಹ ಸಾಂಸ್ಕೃತಿಕ ಪರಂಪರೆಯ ಮಂದ ಬೆಳಕಲ್ಲಿ ಊಟ ಮಾಡಿ ಮಲಗಿದರೆ ಅಂದಿನ ಬದುಕಿಗೆ ವಿರಾಮ ನೀಡಿ ನಾಳಿನ ಬದುಕಿನ ಬಗ್ಗೆ ಯೋಚಿಸುವಂತ ಸಹಬಾಳ್ವೆಯ ಗ್ರಾಮಸ್ಥರಿಂದ ಕೂಡಿದ ಶ್ರಮ ಸಂಸ್ಕೃತಿಯ ಊರು ಗುಡಗೇರಿ.

ಗುಡಗೇರಿಯಲ್ಲಿ ಬಹುತೇಕ ಸಾಮಾನ್ಯ ಬಡಕುಟುಂಬಗಳ ಮಧ್ಯೆ ಊರಾಡಳಿತ ನಿರ್ವಹಿಸುವ ಪಟೇಲರು, ಗೌಡರು, ಶಾನುಭೋಗರು, ಶೆಟ್ಟರು ಹಾಗೂ ಸರ್ವಧರ್ಮದ ಹಲವು ಶ್ರೀಮಂತ ಕುಟುಂಬಗಳೂ ಇದ್ದವು. ಗೌಡರು ಮತ್ತು ಶಾನುಭೋಗರ ಕುಟುಂಬಗಳು ಇತರರಿಗಿಂತ ಹೆಚ್ಚು ಕೃಷಿ ಭೂಮಿ ಹೊಂದಿದವರು. ಹೀಗಾಗಿ ಅವರ ಆದಾಯವೂ ಹೇರಳವಾಗಿತ್ತು. ಇಂತಹ ಕುಟುಂಬಗಳ ಸಾಲಿಗೆ ಬಸವನಗೌಡ ಹಿರೇಗೌಡರ (ರಾಯಪ್ಪನವರ) ಅವರ ಕುಟುಂಬವೂ ಒಂದಾಗಿತ್ತು. ಲಿಂಗವಂತರ ಕುಟುಂಬವಾಗಿದ್ದರಿಂದ ಧಾರ್ಮಿಕ ಮತ್ತು ಆಧ್ಯಾತ್ಮಿಕ ಆಚರಣೆಗಳನ್ನು ಪಾಲಿಸುವ ಸರ್ವಧರ್ಮ ಪಾಲನೆಯ ಮನೋಧರ್ಮದ ಸುಸಂಸ್ಕೃತ ಮನೆತನವೂ ಆಗಿತ್ತು. ಊರಿನ ಪಟೇಲರಾಗಿದ್ದ ಬಸನಗೌಡರ ಧರ್ಮಪತ್ನಿ ಗಂಗಮ್ಮ ಸುಶಿಕ್ಷಿತ ಆಚರಣೆಯುಳ್ಳವರು. ಇಂತಹವರ ಒಡಲಲ್ಲಿ ಎರಡನೆಯ ಮಗನಾಗಿ ೧೯೪೩ರ ಏಪ್ರಿಲ್ ೧ರಂದು ಜನಿಸಿದ ಮಗುವಿಗೆ ವಿರುಪಾಕ್ಷಗೌಡ ಎಂದು ನಾಮಕರಣ ಮಾಡಿದರು.

**ಬಾಲ್ಯ, ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢ ಶಿಕ್ಷಣ**

ಕಲೆ ಮತ್ತು ಸಾಂಸ್ಕೃತಿಯ ತೊಟ್ಟಿಲಾದ ಧಾರವಾಡ ಪಕ್ಕದ ನವಲೂರು ತಾಯಿ ಗಂಗಮ್ಮನ ತವರು. ಇವರು ತಮ್ಮ ಬಾಲ್ಯ ದಿನಗಳಲ್ಲಿ ಬಿಡುವಿನ ವೇಳೆಯಲ್ಲಿ ಸೀರೆ, ಕುಪ್ಪಸಗಳಿಗೆ ಹಾಕುತ್ತಿದ್ದ

೦೨. ವಿ.ಬಿ.ಹಿರೇಗೌಡರ ಸಂದರ್ಶನದಿಂದ

ಕಸೂತಿ ಚಿತ್ತಾರಗಳನ್ನು ಹಾಕುವುದು ಮತ್ತು ಕಾರಹುಣ್ಣಿಮೆ, ಭಾರತ ಹುಣ್ಣಿಮೆ ದಿನಗಳಂದು ಹಿತ್ತಲಿನ ಮನೆ ಗೋಡೆಗೆ ಸೆಗಣಿ ಸಾರಿಸಿದ ನಂತರ ಗೋಡೆಗೆ ಹಾಕುವ ಹಸೆ ಚಿತ್ರಗಳು ಬಾಲಕ ವಿರುಪಾಕ್ಷನಿಗೆ ಕಲೆಯ ಮೊದಲ ಪ್ರಭಾವ ಬೀರಿದವು ಎನ್ನಬಹುದು. ತಾಯಿಯ ತೊಡೆಯನ್ನೇರಿ ಬಣ್ಣ ಬಣ್ಣದ ದಾರಗಳು ಸೂಜಿಯಿಂದ ಬಟ್ಟೆಯ ಮೇಲೆ ಚಿತ್ತಾರಗೊಳ್ಳುವ ವಿನ್ಯಾಸಗಳೇ ಈತನಿಗೆ ವಿಸ್ಮಯವೆನಿಸುವ ಸಂದರ್ಭವಾಗಿರಬಹುದು. ಕುತೂಹಲಕ್ಕೆಂದು ನೆಲದ ಮೇಲೆ, ಗೋಡೆಯ ಮೇಲೆ, ಎಮ್ಮೆಯ ಮೈಮೇಲೆ ಬಳಪದಿಂದ ಚಿತ್ರ ಬಿಡಿಸುವ ಗೀಳಿನ ವಿರುಪಾಕ್ಷ ಪ್ರಾಥಮಿಕ ಶಿಕ್ಷಣದಲ್ಲಿಯೇ ಶಿಕ್ಷಕರ ಅವಜ್ಞೆಗೆ ಗುರಿಯಾಗುತ್ತಾನೆ. ಕಾರಣವಿಷ್ಟೆ. ಶಾಲಾ ಶಿಕ್ಷಕರು ಬರೆಯಲು ಹೇಳಿದ್ದು ಒಂದು ಚಿತ್ರವಾದರೆ, ಇವನು ಮಾಡುವುದು ಹತ್ತಾರು ಎಂಬಂತೆ ವಾರಕ್ಕೆ ಹತ್ತಿಪ್ಪತ್ತು ಚಿತ್ರಗಳನ್ನು ಬರದುಕೊಂಡು ಹೋಗುತ್ತಿದ್ದ. ಈತನ ಗುರುಗಳಾದ ಹರದಟ್ಟಿಯವರು ವಿರುಪಾಕ್ಷನಲ್ಲಿ "ಅಧಿಕ ಪ್ರಸಂಗಿತನ"ವನ್ನು ಕಂಡಿದ್ದರು.[೩]

ಇಂತಹ ಅಧಿಕ ಪ್ರಸಂಗಿತನದಿಂದಾಗಿ ಶಿಕ್ಷಕರಿಂದ ಮೈಮೇಲೆ ಬಾಸುಂಡೆಗಳು ಬಿದ್ದವು. ಸಹಜವಾಗಿಯೇ ತಂದೆಯವರಿಂದ ಶಿಕ್ಷಕರ ಜೊತೆಗೆ ವಿಚಾರಣೆ ನಡೆಯಿತು. "ವಾರಕ್ಕೊಂದು ಚಿತ್ರ ಬಿಡಿಸ್ಕೊಂಡು ಬಾ ಅಂದ್ರ ಪುಸ್ತಕಾನ ತುಂಬಿಸ್ಕೊಂಡು ಬರ್‍ತಾನ ನೋಡ್ರಿ, ನಿಮ್ಮ ಮಗ? ಇನ್ನೂ ಒಂದು ವರ್ಷದಾಗ ಎಷ್ಟು ಚಿತ್ರಗಳನ್ನಾ ಬಿಡಿಸ್ತಾನ ಇವ್ನು" ಎಂಬ ಪ್ರಶ್ನೆಗೆ ತಂದೆಯವರು ಮತ್ತೆ ವಿರುಪಾಕ್ಷನ ವರ್ತನೆಗಳ ಬಗ್ಗೆ ಸಮಜಾಯಿಷಿ ನೀಡುತ್ತಾರೆ.[೪] ಆದರೆ ನಂತರದ ದಿನಗಳಲ್ಲಿ ಅಲ್ಲಿನ ಶಿಕ್ಷಕರು ವಿರುಪಾಕ್ಷನಲ್ಲಿರುವ ಕಲೆಯ ಉತ್ಸಾಹಕ್ಕೆ ತಣ್ಣೀರೆರಚದೇ ಪ್ರೋತ್ಸಾಹಿಸುವ ಕ್ರಮವನ್ನು ಅನುಸರಿಸುತ್ತಾರೆ.

ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣ ಹಂತದಲ್ಲಿ ಗೆಳೆಯರೊಂದಿಗೆ ದೀಪಾವಳಿ ಹಬ್ಬದ ರಜಾ ದಿನಗಳಲ್ಲಿ ಹೊಸ ಹೊಸ ರೀತಿಯ ದೊಡ್ಡ ಗಾತ್ರದ ಗಾಳಿಪಟ ತಯಾರಿಸಿ ಪೈಪೋಟಿಯೊಡ್ಡಿ ಪಟ ಹಾರಿಸುವುದು, ದೀಪಾವಳಿ ಹಬ್ಬದಲ್ಲಿ ಬೃಹದಾಕಾರದ ಮನುಷ್ಯಾಕೃತಿ ಹೋಲುವ ಆಕಾಶಬುಟ್ಟಿ ತಯಾರಿಸಿ ರಾತ್ರಿ ವೇಳೆಯಲ್ಲಿ ಹಾರಿಸುವುದು ಇತ್ಯಾದಿ ಈ ರೀತಿಯ ಕ್ರೀಡೆ ಮತ್ತು ಕಲೆಯ ಪ್ರದರ್ಶನಗಳಲ್ಲಿ ತೊಡಗಿಕೊಳ್ಳುವುದು ಇವನ ಜಾಯಮಾನವಾಗಿತ್ತು.[೫] ಶಾಲೆಯಲ್ಲಿ ನಡೆಯುವ ಸರಸ್ವತಿ ಪೂಜೆ, ಗಣಪತಿ ಪೂಜೆ, ಸ್ವಾತಂತ್ರ್ಯೋತ್ಸವ, ಗಣರಾಜ್ಯೋತ್ಸವದ ಸಂದರ್ಭಗಳಲ್ಲಿ ಶಿಕ್ಷಕರ ಮಾರ್ಗದರ್ಶನದಲ್ಲಿ ವಿವಿಧ ಬಗೆಯ ರಂಗೋಲಿ ವಿನ್ಯಾಸಗಳನ್ನು ರಚಿಸುವಲ್ಲಿ ವಿರುಪಾಕ್ಷ ಸಿದ್ಧ ಹಸ್ತನಾದನು.

ಮಾಧ್ಯಮಿಕ ಶಾಲೆಗೆ ಬಂದ ಮೇಲೂ ಕೂಡ ಇತರ ವಿಷಯಗಳತ್ತ ಗಮನಹರಿಸುವುದಕ್ಕಿಂತ ಚಿತ್ರಕಲೆಯಲ್ಲಿಯೇ ಹೆಚ್ಚು ಆಸಕ್ತಿಯನ್ನು ತೋರ್ಪಡಿಸುತ್ತಿದ್ದುದರಿಂದ ಶಿಕ್ಷಕರಿಗೆ ಈತನ ಬಗ್ಗೆ ಸಿಟ್ಟು,

---

೦೩. ವಿ.ಬಿ.ಹಿರೇಗೌಡರ ಸಂದರ್ಶನದಿಂದ
೦೪. -ಅದೇ-
೦೫. -ಅದೇ-

ಮತ್ತೊಮ್ಮೆ ಸಂತೋಷ ಪ್ರಕಟವಾಗಿ, ಅಂತಿಮವಾಗಿ ಅವನಲ್ಲಿ ಸುಪ್ತವಾಗಿ ಅಡಗಿದ್ದ ಕಲಾ ಆಸಕ್ತಿಗೆ ಶಿಕ್ಷಕರು ಪ್ರೋತ್ಸಾಹಿಸುವ ಸ್ಥಿತಿಗೆ ಬರುವುದು ಅನಿವಾರ್ಯವಾಗಿತ್ತು. ಗೌಡರು ಮಾಧ್ಯಮಿಕ ಶಾಲೆಯಲ್ಲಿ ಇರುವಾಗಲೇ ನಾಟಕಗಳ ಹಿನ್ನೆಲೆ, ರಂಗಪರದೆಯ ಮೇಲೆ ರಚಿಸುತ್ತಿದ್ದ ಬೆಳಗಾವಿ ಜಿಲ್ಲೆಯ ಗೊರವನಕೊಳ್ಳದ ಮೂಲದವರಾದ ಕಲಾವಿದರಾದ ಕಾಳಪ್ಪ ಸಾಬಣ್ಣವರ ಬಳಿ ಕುತೂಹಲದಿಂದ ನೋಡಲು ಹೋಗುತ್ತಿದ್ದ. ಅವರು ಹೇಳಿದಂತೆ ಬಣ್ಣ ಮಿಶ್ರಮಾಡಿಕೊಡುವುದು, ಅವರು ಬಟ್ಟೆಯ ಮೇಲೆ ಹಾಕಿದ ರೇಖಾಚಿತ್ರದಲ್ಲಿ ಅವರು ತೋರಿಸಿದಂತೆ ಬಣ್ಣವನ್ನು ತುಂಬುವುದು ಹಾಗೂ ಈ ರೀತಿಯ ಎಲ್ಲ ಸಹಕಾರವನ್ನು ನೀಡಿ ಚಿಕ್ಕ ವಯಸ್ಸಿನಲ್ಲಿಯೇ ಪರದೆ ರಚಿಸುವ ದೇಸೀ ಕಲೆಯ ಅನುಭವ ಪಡೆದುಕೊಂಡರು.

ಸರಳ ಸ್ವಭಾವದ ಕಾಳಪ್ಪನವರ ಸಹವಾಸದಿಂದ ಗೌಡರು ೧೦-೧೨ ವರ್ಷದವರಿದ್ದಾಗಲೇ ದೀಪಾವಳಿಯ ಹಬ್ಬದ ಸಂದರ್ಭದಲ್ಲಿ ಸ್ವತಂತ್ರವಾಗಿ ಊರಿನ ಅಂಗಡಿಗಳ ಗೋಡೆಗಳ ಮೇಲೆ ಅಲಂಕಾರಿಕ ಹೂವುಗಳ ವಿನ್ಯಾಸ ರಚಿಸುವುದು, 'ಸುಸ್ವಾಗತ', 'ಶುಭ-ಲಾಭ' ಇತ್ಯಾದಿ ಸುಂದರವಾಗಿ ಬರೆಯುವುದು, ಅಲಂಕಾರಿಕ ಕುಂಭಗಳನ್ನು, ತೆಂಗಿನಕಾಯಿಗಳನ್ನು ಬಿಡಿಸುವುದು, ನಾಮಫಲಕಗಳನ್ನು ಬರೆಯುವುದು, ಕೊಬ್ಬರಿ ಗಿಟಕಗಳ ಮೇಲೆ ಬ್ಲೇಡಿನಿಂದ ಚಿತ್ರ ಕೊರೆಯುವುದು ಮತ್ತು ಭಜನಾ ಸಂಘಗಳ ಹಾಗೂ ಊರಿನ ಚುನಾವಣಾ ಬ್ಯಾನರ್‌ಗಳನ್ನು ಬರೆಯುವ ಮತ್ತು ಭಜನಾ ಮೇಳದಲ್ಲಿ ಕುಳಿತುಕೊಳ್ಳುವ ಹವ್ಯಾಸಗಳನ್ನು ರೂಢಿಸಿಕೊಂಡಿದ್ದರು. ಅಲ್ಲದೇ ಹುಬ್ಬಳ್ಳಿಯ ಕಸ್ತೂರಿ ಎಂಬ ಮಾಸಿಕ ಪತ್ರಿಕೆಯ ಕಲಾವಿದರಾದ ಕೆ.ಬಿ.ಕೆ.ಯವರ ಚುಕ್ಕೆ ಚಿತ್ರಣ ತಂತ್ರದ ಪ್ರಭಾವದಿಂದಾಗಿ ಪ್ರಪ್ರಥಮ ಬಾರಿಗೆ ಮಹಾತ್ಮ ಗಾಂಧಿ ಭಾವ ಚಿತ್ರ ರಚಿಸಿದ್ದನ್ನು ಗಮನಿಸಿದ ಸ್ನೇಹಿತರು, ಶಿಕ್ಷಕರು ಬಹಳಷ್ಟು ಅಭಿನಂದಿಸಿದ ವಿಚಾರವನ್ನು ಗೌಡರು ಈಗಲೂ ಜ್ಞಾಪಿಸಿಕೊಳ್ಳುತ್ತಾರೆ.[೬]

ಗುಡಗೇರಿ ಪ್ರೌಢಶಾಲೆಗೆ ಹೊಸಬರಾಗಿ ಸಿ.ಬಿ.ಮೆಳ್ಳೆಗಟ್ಟಿ ಎಂಬ ಯುವ ಕಲಾಶಿಕ್ಷಕರ ಪ್ರವೇಶದಿಂದ ವಿರುಪಾಕ್ಷನ ಬದುಕಿನಲ್ಲಿ ಮಹತ್ತರ ಬದಲಾವಣೆಗಳು ಘಟಿಸುತ್ತವೆ. ವಿರುಪಾಕ್ಷ ರಚಿಸುತ್ತಿದ್ದ ಚಿತ್ರಗಳನ್ನು ಗಮನಿಸಿದ ಮೆಳ್ಳೆಗಟ್ಟಿಯವರು ಅವನಿಗೆ ವಿಶೇಷ ಪ್ರೋತ್ಸಾಹ ನೀಡಿ ಲೋಯರ್ ಮತ್ತು ಹೈಯರ್ ಗ್ರೇಡ್ ಡ್ರಾಯಿಂಗ್ ಪರೀಕ್ಷೆಗಳಿಗೆ ಅರ್ಜಿ ಸಲ್ಲಿಸಿ ಪರಿಪಕ್ವ ತರಬೇತಿ ನೀಡುತ್ತಾರೆ. ಗೌಡರು ಸಹ ಅತ್ಯಂತ ಶ್ರದ್ಧೆ, ಆಸಕ್ತಿಯಿಂದ ತರಬೇತಿ ಪಡೆದು ಎರಡೂ ಪರೀಕ್ಷೆಗಳನ್ನು ಅನುಕ್ರಮವಾಗಿ ಎಂಟನೆ ಹಾಗು ಒಂಭತ್ತನೆ ತರಗತಿಯಲ್ಲಿರುವಾಗ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆ ಹೊಂದುತ್ತಾರೆ.

ಇದೇ ಸಂದರ್ಭದಲ್ಲಿ ಗೌಡರ ಚಿತ್ರಕಲೆಯ ಆಸಕ್ತಿ ಕುರಿತಂತೆ ಪ್ರೌಢಶಾಲೆಯ ಕೆಲವು ಅಧ್ಯಾಪಕರು ಕೇವಲ ಚಿತ್ರ ಬಿಡಿಸುತ್ತಾ ಕುಳಿತರೆ ಎಸ್.ಎಸ್.ಎಲ್.ಸಿ. ಪರೀಕ್ಷೆಯನ್ನು ಹೇಗೆ ಪಾಸಾಗುತ್ತಿಯಾ ? ಎಂದು ಸಿಟ್ಟಿನಿಂದ ಕೇಳಿದರೂ ಸಹ ಗೌಡರು ಇನ್ನೂ ಮುಂದುವರೆದು ತಮ್ಮ ಹಟ ಬಿಡದೇ ಶಾಲಾ ವಲಯದ ಸುತ್ತಮುತ್ತ ದೊರೆಯುವ ಕೆಂಪು ಮತ್ತು ಹಳದಿ ಬಣ್ಣದ ಮಟ್ಟಿ ಕಲ್ಲಿನ ಶಿಲ್ಪ ರಚಿಸುವ ಹಾಗೂ ಚಿತ್ರ ರಚಿಸುತ್ತಲೇ ಅಧ್ಯಯನದಲ್ಲಿ ತೊಡಗುತ್ತಾರೆ. ಒಮ್ಮೆ ಶಾಲೆಯಲ್ಲಿ

೦೬. ವಿ.ಬಿ.ಹಿರೇಗೌಡರ ಸಂದರ್ಶನದಿಂದ

ವಾರ್ಷಿಕೋತ್ಸವ ಕಾರ್ಯಕ್ರಮದ ನಿಮಿತ್ತ 'ಬೆಳಗು' ಎಂಬ ಶಾಲಾ ವಾರ್ಷಿಕ ಕೈಬರಹ ಪತ್ರಿಕೆಯನ್ನು ಪ್ರಕಟಿಸಬೇಕೆಂದು ಸಿದ್ಧತೆಗಳು ನಡೆದು ಎಲ್ಲ ವಿದ್ಯಾರ್ಥಿಗಳ ಕೈಬರಹಗಳನ್ನು ಸಂಗ್ರಹಿಸಿ ಅದಕ್ಕೆ ಅಂದವಾದ ರಕ್ಷಾಪುಟ ವಿನ್ಯಾಸವನ್ನು ರಚಿಸಲು ಹತ್ತನೆಯ ತರಗತಿಯ ವಿದ್ಯಾರ್ಥಿಯಾಗಿದ್ದ ವಿರುಪಾಕ್ಷಿಗೆ ಮತ್ತು ಅದೇ ಶಾಲೆಯಲ್ಲಿ ಚಿತ್ರಕಲಾ ಅಧ್ಯಾಪಕರಾಗಿದ್ದ ಸಿ.ಎಚ್.ನಂದಿಹಳ್ಳಿ ಅವರಿಗೆ ವಹಿಸಿಕೊಡಲಾಯಿತು. ಇಬ್ಬರೂ ರಚಿಸಿದ ರಕ್ಷಾಪುಟಗಳನ್ನು ನೋಡಿದ ಅಧ್ಯಾಪಕ ವರ್ಗ ಹಾಗೂ ಹೆಡ್‌ಮಾಸ್ಟರ ಎನ್.ಬಿ.ಹಾಲಿ ಗುರುಗಳು ವಿರುಪಾಕ್ಷ ರಚಿಸಿದ ರಕ್ಷಾ ಪುಟದ ವಿನ್ಯಾಸವು ಸುಂದರವಾಗಿದೆಯೆಂದು ಆಯ್ಕೆ ಮಾಡಿದಾಗ ನಂದಿಹಳ್ಳಿಯವರು ಪ್ರಬಲ ವಿರೋಧ ಮಾಡಿ ಅಧ್ಯಾಪಕ ರಚಿಸಿದ ರಕ್ಷಾಪುಟ ಆಯ್ಕೆ ಮಾಡದೇ ವಿದ್ಯಾರ್ಥಿಯೊಬ್ಬನ ವಿನ್ಯಾಸವನ್ನು ಆಯ್ಕೆ ಮಾಡಿದ್ದಕ್ಕೆ ಬೇಸರಗೊಂಡು ಕೆಲವು ದಿನಗಳ ಕಾಲ ವಿರುಪಾಕ್ಷನನ್ನು ಮಾತನಾಡಿಸದೇ ಇರುವ ಸಂದರ್ಭವನ್ನು ಹಾಗೂ ವಾಸ್ತವತೆಯಯ ಅರಿವಾದ ನಂತರ ಗೌಡರನ್ನು (ಶಿಷ್ಯನನ್ನು) ಗೌರವದಿಂದ, ಪ್ರೀತಿಯಿಂದ ಮಾತನಾಡಿದ್ದನ್ನು ಗೌಡರು ಈಗಲೂ ನೆನೆಯುತ್ತಾರೆ.[೭]

ಮುಂದೆ ಗೌಡರು ಡ್ರಾಯಿಂಗ್ ವಿಷಯವನ್ನು ಐಚ್ಛಿಕ ವಿಷಯವಾಗಿ ಆಯ್ಕೆ ಮಾಡಕೊಂಡು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಧಾರವಾಡ ಪರೀಕ್ಷಾ ಕೇಂದ್ರಕ್ಕೆ ಅತ್ಯುನ್ನತ ಅಂಕಪಡೆದು ಕಲೆಯಲ್ಲಿ ಡಿಸ್ಟಿಂಕ್ಷನ್‌ದಲ್ಲಿ ಪಾಸಾಗುತ್ತಾರೆ. "ಬೆಳೆವ ಸಿರಿಯ ಮೊಳಕೆಯಲ್ಲಿ ನೋಡು" ಎಂಬಂತೆ ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢ ಶಾಲಾ ಹಂತಗಳಲ್ಲಿ ಹಿರೇಗೌಡರು ಅತ್ಯಂತ ಆಸಕ್ತಿಯಿಂದ ಚಿತ್ರ ರಚನೆಯಲ್ಲಿ ತೊಡಗಿಸಿಕೊಂಡಿದ್ದರಿಂದ ಇಂದಿನ ಸಮಕಾಲೀನ ಸಂದರ್ಭದ ಕ್ರಿಯಾಶೀಲ ಕಲಾವಿದರಾಗಿ ರೂಪಗೊಂಡು ರಾಜ್ಯ ಹಾಗೂ ರಾಷ್ಟ್ರಮಟ್ಟದಲ್ಲಿ ಗುರುತಿಸಲ್ಪಟ್ಟಿದ್ದಾರೆ.

**ಕಲಾಶಿಕ್ಷಣ**

ಭಾರತದಲ್ಲಿ ಕಲಾಶಿಕ್ಷಣದ ಇತಿಹಾಸವು ಇತ್ತೀಚಿನ ಶತಮಾನದಲ್ಲಷ್ಟೆ ಬೆಳೆದು ಬಂದಿದೆ. ಅದೂ ಪಡುವಣದಿಂದ ಬಂದ ವಿಕ್ಟೋರಿಯನ್ ಕಲಾಶಿಕ್ಷಣವನ್ನು ನಾವು ಅನಿವಾರ್ಯವಾಗಿ ಒಪ್ಪಿಕೊಂಡಿದ್ದೂ ಆಗಿದೆ. ಆಂಗ್ಲರು ಭಾರತೀಯರನ್ನು ಆಳುತ್ತಿರುವಾಗಲೇ ತಮ್ಮದೇ ಶೈಕ್ಷಣಿಕ ಪದ್ಧತಿಯನ್ನು ಒತ್ತಾಯವಾಗಿ ಭಾರತದಲ್ಲಿ ಬಿತ್ತಿದರು. ಅದರ ಪರಿಣಾಮವಾಗಿ ಮದ್ರಾಸ, ಮುಂಬಯಿ, ಕಲ್ಕತ್ತಾಗಳಲ್ಲಿ ಆಂಗ್ಲ ಕಲಾವಿದರ, ಅಧಿಕಾರಿಗಳ ಉಸ್ತುವಾರಿಯಲ್ಲಿ ಕಲಾ ಶಾಲೆಗಳು ಹುಟ್ಟಿಕೊಂಡವು. ಹೀಗೆ ಹುಟ್ಟಿಕೊಂಡ ಕಲಾಶಾಲೆಗಳಲ್ಲಿ ಮುಂಬಯಿಯ ಜೆ.ಜೆ.ಕಲಾಶಾಲೆಯೂ ಒಂದು. ಆದರೆ ಕನ್ನಡಿಗ ಕಲಾಗುರುಗಳಾದ ಡಿ.ವಿ.ಹಾಲಭಾವಿಯವರು ಸ್ಕೂಲ್ ಆಫ್ ಆರ್ಟ್ ಸಂಸ್ಥೆಯನ್ನು ಉತ್ತರ ಕರ್ನಾಟಕದ ಧಾರವಾಡದಲ್ಲಿ ಸ್ಥಾಪಿಸಿದರೂ ಅವರೂ ಸಹ ಮುಂಬೈ ಜೆ.ಜೆ.ಸ್ಕೂಲ ಆಫ್ ಆರ್ಟ್‌ನ ಪಠ್ಯಕ್ರಮ ಮತ್ತು ಪರೀಕ್ಷಾ ಕ್ರಮಗಳನ್ನೇ ಅನುಸರಿಸುತ್ತಿದ್ದರು. ತನ್ಮೂಲಕ ಉತ್ತರ ಕರ್ನಾಟಕದಲ್ಲಿ ಮೊದಲ ಕಲಾಶಾಲೆಯನ್ನು ಪ್ರಾರಂಭಿಸುವುದರೊಂದಿಗೆ ಕಲಾಶಿಕ್ಷಣ ಪಡೆಯಬಯಸಿದ್ದ

೦೭. ವಿ.ಬಿ.ಹಿರೇಗೌಡರ ಸಂದರ್ಶನದಿಂದ

ವಿದ್ಯಾರ್ಥಿಗಳಿಗೆ ದಾರಿದೀಪವಾದರು. ಇಂಥವರು ಹಚ್ಚಿದ ದೀಪದಡಿ ಅಧ್ಯಯನ ಮಾಡಿದವರಲ್ಲಿ ಹಿರೇಗೌಡರು ಒಬ್ಬರು.

ಬಾಲ್ಯದ ದಿನಗಳಲ್ಲಿ ಚಿತ್ರಕಲೆಯಲ್ಲಿ ತೋರಿದ ಉತ್ಸಾಹ ಇಮ್ಮಡಿಗೊಳ್ಳುವುದೇ ಕಲಾಶಿಕ್ಷಣದಲ್ಲಿ. ಕಲಾಶಿಕ್ಷಣವೆಂಬುದೇ ಸಾಗರದಾಳವನ್ನು ಪ್ರವೇಶಿಸಿದಂತೆ. ಇಲ್ಲಿಯೂ ಕೂಡ ಉತ್ಸಾಹ ಬತ್ತದಂತೆ ಚೈತನ್ಯ ಮೂರ್ತಿಯಾಗಿ ಗಂಭೀರ ಕಲಾಧ್ಯಯನ ನಡೆಸಿದಾಗ ಮಾತ್ರ ಕಲಾವಿದನಾಗಿ ರೂಪಗೊಳ್ಳಬಹುದು. ಹನ್ನೊಂದನೆಯ(ಎಸ್.ಎಸ್.ಸಿ.) ತರಗತಿ ಮುಗಿದ ಮೇಲೆ ಹಿರೇಗೌಡರು ಧಾರವಾಡಕ್ಕೆ ಉನ್ನತ ವ್ಯಾಸಂಗಕ್ಕೆ ಬರುತ್ತಾರೆ. ಮನೆಯ ಸಾಮಾನ್ಯ ಆರ್ಥಿಕ ಸ್ಥಿತಿಯಿಂದಾಗಿ ಸ್ವತಂತ್ರವಾಗಿ ವಿದ್ಯಾರ್ಥಿ ನಿಲಯದಲ್ಲಾಗಲಿ, ಪ್ರತ್ಯೇಕ ಕೊಠಡಿಯೊಂದರಲ್ಲಿ ಇದ್ದುಕೊಂಡು ವ್ಯಾಸಂಗ ಮಾಡುವುದು ಅಸಾಧ್ಯವಾದುದು ಎಂದು ಮನದಟ್ಟಾದ ಮೇಲೆ ಸೋದರ ಮಾವಂದಿರ ಮನೆಯಲ್ಲಿಯೇ ವಾಸ್ತವ್ಯ ಹೂಡಿ ವ್ಯಾಸಂಗಕ್ಕೆ ಸನ್ನದ್ಧರಾಗುತ್ತಾರೆ. ಅಲ್ಲಿದ್ದಾಗ ಸೋದರ ಮಾವಂದಿರು ಚಿತ್ರಕಲೆಯನ್ನು ಕಲಿತು ಮಾಡುವುದಾದರೂ ಏನಿದೆ? ಇವತ್ತು ಜನ ನಿನ್ನ ಚಿತ್ರಗಳನ್ನು ನೋಡಿ ಮೆಚ್ಚುತ್ತಾರೆ. ನಾಳೆ ಮರೆಯುತ್ತಾರೆ. ಪದವಿ ಅಥವಾ ಎಂಜಿನಿಯರಿಂಗ್ ಮಾಡಿದರೆ ಎಲ್ಲಾದರೂ ಕೆಲಸ ಸಿಗಬಹುದು. ಅಥವಾ ಹೈಸ್ಕೂಲಿನಲ್ಲಿ ಶಿಕ್ಷಕನಾದರೆ ಬದುಕಿಗೊಂದು ಆಸರೆ ಆಗುತ್ತದೆ[೮] ಎಂಬ ಸೋದರ ಮಾವಂದಿರ ಸಾಂದರ್ಭಿಕ ಮಾತುಗಳಿಂದ ಅನಿವಾರ್ಯವಾಗಿ ೧೯೬೨ರಲ್ಲಿ ಕರ್ನಾಟಕ ಕಾಲೇಜಿನಲ್ಲಿ ಪಿ.ಯು.ಸಿ. ಶಿಕ್ಷಣದ ಅಧ್ಯಯನಕ್ಕೆ ಪ್ರವೇಶ ಪಡೆಯುತ್ತಾರೆ.

ಕಲಾಶಿಕ್ಷಕರಾದ ಸಿ.ವಿ.ಮೆಳಗಟ್ಟಿಯವರ ಮಾರ್ಗದರ್ಶನದಿಂದ ಕಲಾಮಾರ್ಗದಲ್ಲಿ ನಡೆಯಬೇಕೆಂಬ ಅಮಿತೋತ್ಸಾಹವನ್ನು ಸ್ಥಿರವಾಗಿಸಿಕೊಂಡ ಹಿರೇಗೌಡರು ಮನೆಯವರ ವಿರೋಧ ಕಟ್ಟಿಕೊಂಡೇ ಪಿ.ಯು.ಸಿ. ಅಧ್ಯಯನದ ಜೊತೆಗೆ ಹಾಲಭಾವಿ ಕಲಾಶಾಲೆ ಪ್ರವೇಶಿಸಿದ್ದು. ಹಾಲಭಾವಿ ಕಲಾಶಾಲೆಯ ಸಂಸ್ಥಾಪಕರು, ಕಲಾವಿದರಾದ ಡಿ.ವಿ.ಹಾಲಭಾವಿ ಅವರಲ್ಲಿ ತಮ್ಮ ಹಂಬಲವನ್ನು ತೋಡಿಕೊಂಡ ಅವರು ತಾವು ಕರ್ನಾಟಕ ಕಾಲೇಜಿನಲ್ಲಿ ಪಿ.ಯು.ಸಿ. ವ್ಯಾಸಂಗ ಮಾಡುತ್ತಿರುವುದನ್ನು ತಿಳಿಸಿ ಚಿತ್ರಕಲಾ ಅಧ್ಯಯನ ಮಾಡಬೇಕೆಂಬ ಉತ್ಕಟೇಚ್ಛೆಯನ್ನು ವ್ಯಕ್ತಪಡಿಸಿದರು.[೯] ಹಾಲಭಾವಿಯವರು ಹಿರೇಗೌಡರು ರಚಿಸಿದ್ದ ಕಲಾಕೃತಿಗಳನ್ನು ನೋಡಿ ಭವಿಷ್ಯತ್ತಿನಲ್ಲಿ ಶ್ರೇಷ್ಠ ಕಲಾವಿದನಾಗುವ ಲಕ್ಷಣಗಳನ್ನು ಕಂಡುಕೊಂಡು ತಮ್ಮ ಶಾಲೆಯಲ್ಲಿ ಚಿತ್ರಕಲಾ ವ್ಯಾಸಂಗಕ್ಕೆ ೧೯೬೨ರಲ್ಲಿ ಪ್ರವೇಶ ನೀಡಿದರು.

ಹಾಲಭಾವಿ ಕಲಾಶಾಲೆಯಲ್ಲಿ ಮುಂಜಾನೆ ೮.೦೦ಗಂಟೆಯಿಂದ ೧೨.೦೦ ಗಂಟೆಯವರೆಗೆ ಕಲಾಧ್ಯಯನ ಮಾಡಿ ೧.೦೦ಗಂಟೆಯಿಂದ ಕರ್ನಾಟಕ ಕಾಲೇಜಿನ ವ್ಯಾಸಂಗಕ್ಕೆ ಹೋಗುತ್ತಿದ್ದರು. ಇದೇ ಸಂದರ್ಭದಲ್ಲಿ ಅವರಿಗೆ ಅತಿಯಾದ ಆರ್ಥಿಕ ತೊಂದರೆ ಉಂಟಾಗಿ ಅಧ್ಯಯನಕ್ಕೆ ಅಡೆತಡೆಯಾಯಿತು. ಅಷ್ಟೇ ಅಲ್ಲದೇ ಸೋದರಮಾವನ ಮನೆಯಲ್ಲಿಯೂ ಇರಲು ಅವರಿಗೆ ಮುಜುಗರವಾಗತೊಡಗಿತು. ಏಕೆಂದರೆ ಆ ಮನೆಯಲ್ಲಿ ಕಲಾಧ್ಯಯನಕ್ಕೆ ಪೂರಕವಾದ ವಾತಾವರಣ

---

೦೮. ವಿ.ಬಿ.ಹಿರೇಗೌಡರ ಸಂದರ್ಶನದಿಂದ

೦೯. -ಅದೇ-



ಹಾಲಬಾವಿ ಸ್ಕೂಲ್ ಆಫ್ ಆರ್ಟ್‌ನಲ್ಲಿ ಅಧ್ಯಯನ ಮಾಡುತ್ತಿರುವ (೧೯೬೩) ಸಂದರ್ಭದಲ್ಲಿ
ಪ್ರಾಚಾರ್ಯ ಡಿ.ವಿ.ಹಾಲಬಾವಿ ಮತ್ತು ಸಹಪಾಠಿಗಳೊಂದಿಗೆ ಹಿರೇಗೌಡರ್




೧೯೬೬ರ ಅಂತಿಮ ವರ್ಷದ ಡಿಪ್ಲೋಮ ಪರೀಕ್ಷೆಗೆ ರಚಿಸಿದ ಕರಡು ಮೂಲ ಚಿತ್ರ

ಇರಲಿಲ್ಲ. ಅಲ್ಲದೇ ಹಿರೇಗೌಡರು ಸ್ವತಂತ್ರವಾಗಿ ಬದುಕಬೇಕೆಂಬ ಹಂಬಲವುಳ್ಳವರಾಗಿದ್ದರಿಂದ ಅವರು ಪ್ರತ್ಯೇಕವಾಗಿ ಸ್ನೇಹಿತರೊಡಗೂಡಿ ವಾಸಿಸಬೇಕಾದ ಪ್ರಸಂಗವನ್ನು ಎದುರಿಸುತ್ತಾರೆ.[೧೦] ಕೆಲದಿನಗಳ ನಂತರ ಅವರು ಪ್ರತ್ಯೇಕ ಕೊಠಡಿಯೊಂದನ್ನು ಬಾಡಿಗೆಗೆ ಪಡೆದು ಅಲ್ಲಿ ವ್ಯಾಸಂಗವನ್ನು ಮುಂದುವರೆಸುತ್ತಾರೆ.

ಮನೆಯವರ ವಿರೋಧದ ನಡುವೆಯೂ ಕಲಾಧ್ಯಯನ ಮುಂದುವರೆಸಿದ್ದರ ಪರಿಣಾಮವಾಗಿ ಆರ್ಥಿಕ ಸಹಕಾರ ಇವರಿಗೆ ದಕ್ಕಲಿಲ್ಲ. ಹೀಗಾಗಿ ಹಿರೇಗೌಡರು ಬಿ.ಎಡ್. ಪಾಠದ ಚಿತ್ರಗಳನ್ನು ಬರೆದುಕೊಡುವುದರ ಮೂಲಕ ಮತ್ತು ಫೋಟೋಗ್ರಫಿಯಿಂದ ಅಲ್ಪ ಸ್ವಲ್ಪ ಹಣ ಗಳಿಸಿ ತಮ್ಮ ಶೈಕ್ಷಣಿಕ ಬದುಕಿನ ದಾರಿಯನ್ನು ಸುಗಮಗೊಳಿಸಿಕೊಳ್ಳುತ್ತಾರೆ. ಇವರ ಸಮಸ್ಯೆಯನ್ನು ಅರಿತ ಸ್ನೇಹಿತರೊಬ್ಬರ ಸಹಕಾರದಿಂದ ಧಾರವಾಡದ ರಾಮಾಶ್ರಯ ಬುಕ್ ಡಿಪೋದಲ್ಲಿ ಸಂಜೆಯ ಅರೆಕಾಲಿಕ ನೌಕರನಾಗಿ ವಿವಿಧ ರಾಜ್ಯಗಳ ನಕ್ಷೆಗಳನ್ನು ಬಿಡಿಸುವುದು, ಅವುಗಳಿಗೆ ಬಣ್ಣ ತುಂಬುವುದು, ಪಠ್ಯಪುಸ್ತಕಗಳಿಗೆ ರಕ್ಷಾಪುಟ ರಚಿಸಿಕೊಡುವುದರಿಂದ ಅಲ್ಪ ಮಟ್ಟದ ಜೀವನ ನಿರ್ವಹಣೆಗೆ ಆದಾಯ ಕಲ್ಪಿಸಿಕೊಂಡು ಕಲಾಭ್ಯಾಸ ಮುಂದುವರೆಸಿದರು.

ಇವರ ಮೊಂಡು ಸ್ವಭಾವವನ್ನು ಅರಿತ ಸೋದರಮಾವ ಇವರಿಗೊಂದು ಪೂರ್ಣಕಾಲಿಕ ಕೆಲಸ ಕೊಡಿಸುವ ನಿಟ್ಟಿನಲ್ಲಿ ತಮ್ಮ ಸ್ನೇಹಿತರ ಸಹಾಯದಿಂದ ಗೌಡರಿಗೆ ಧಾರವಾಡದ ಮೈಸೂರು ರಾಜ್ಯ ವಿದ್ಯುತ್ ಮಂಡಳಿಯ ಕಛೇರಿಯಲ್ಲಿ ಕಛೇರಿ ಸಹಾಯಕರಾಗಿ ನೇಮಕಗೊಳ್ಳಲು ನೆರವಾಗುತ್ತಾರೆ. ಇದರಿಂದ ಸ್ವತಂತ್ರವಾಗಿ ಬದುಕಬೇಕೆಂಬ ಛಲವನ್ನು ಸಾಧಿಸಿದ ಹಿರೇಗೌಡರು ಯಾವುದೇ ಅನುಭವವಿಲ್ಲದಿದ್ದರೂ ಮೇಲಾಧಿಕಾರಿಗಳ ಪಕ್ಕದಲ್ಲಿಯೇ ಕುಳಿತು ಅವರ ನಿರ್ದೇಶನದಂತೆ ಬೃಹತ್ ವಿದ್ಯುತ್ ಸಂಚಲನಾ ಗೋಪುರಗಳ ಹಾಗೂ ಸಲಕರಣೆಗಳ ವಿನ್ಯಾಸ ಕಾರ್ಯ ಮಾಡುತ್ತಿದ್ದರು.[೧೧] ಆರು ತಿಂಗಳು ಇಲ್ಲಿ ಕೆಲಸ ನಿರ್ವಹಿಸಿದ ಮೇಲೆ ಧಾರವಾಡದಲ್ಲಿ ನೆಲೆ ನಿಲ್ಲಲು ಮಂಡಳಿ ಅವಕಾಶ ನೀಡಲಿಲ್ಲ. ಕೆಲವೇ ದಿನಗಳಲ್ಲಿ ಅವರನ್ನು ಹುಬ್ಬಳ್ಳಿಯ ಕಛೇರಿಗೆ ವರ್ಗಾವಣೆ ಮಾಡಿದರು. ಇದರಿಂದ ಸ್ವಲ್ಪ ವಿಚಲಿತರಾದ ಹಿರೇಗೌಡರು ತಮ್ಮ ಕಲಾಧ್ಯಯನಕ್ಕೆ ಪರ್ಯಾಯ ಮಾರ್ಗವನ್ನು ಹುಡುಕತೊಡಗಿದರು.

ಹಾಲಭಾವಿ ಕಲಾಶಾಲೆಯಲ್ಲಿ ಅಡ್ವಾನ್ಸ್ ಪೇಂಟಿಂಗ ಅಭ್ಯಸಿಸಿದ್ದ ಹಿರೇಗೌಡರು ಹುಬ್ಬಳ್ಳಿಗೆ ಬಂದ ನಂತರ ಮೂರು ಸಾವಿರ ಮಠದ ವಿಜಯ ಮಹಾಂತೇಶ ಲಲಿತಕಲಾ ಮಹಾವಿದ್ಯಾಲಯದ ಪ್ರಾಚಾರ್ಯರು ಮತ್ತು ಅಂತರಾಷ್ಟ್ರೀಯ ಖ್ಯಾತಿಯ ಕಲಾವಿದರಾದ ಕುಂಚಬ್ರಹ್ಮ ಡಾ.ಎಂ.ವಿ.ಮಿಣಜಗಿಯವರನ್ನು ಕಂಡು ತಮ್ಮ ಕಲಾ ಹಂಬಲವನ್ನು ತೋಡಿಕೊಂಡರು. ಮಿಣಜಗಿಯವರು ಗೌಡರ ಆಸಕ್ತಿ ಮತ್ತು ಅವರು ರಚಿಸಿದ್ದ ಕಲಾಕೃತಿಗಳನ್ನು ನೋಡಿ ಸಂತಸ ವ್ಯಕ್ತಪಡಿಸಿ ಡಿಪ್ಲೋಮಾ ಪೇಂಟಿಂಗ ತರಗತಿಗೆ ಪ್ರವೇಶ ದೊರಕಿಸಿಕೊಟ್ಟರು. ಆಗ ಅಲ್ಲಿ ಕಲಾಗುರುಗಳಾದ

೧೦. ವಿ.ಬಿ.ಹಿರೇಗೌಡರ ಸಂದರ್ಶನದಿಂದ
೧೧. -ಅದೇ-

ವೈ.ಎಚ್.ಸೂಗೂರ ಅವರು ಸಹ ಅಲ್ಲಿ ಕಲಾಶಿಕ್ಷಕರಾಗಿದ್ದರು. ಇವರಿಬ್ಬರ ಮಾರ್ಗದರ್ಶನದಲ್ಲಿ ಗಂಭೀರವಾದ ಕಲಾಧ್ಯಯನಕ್ಕೆ ತೊಡಗಿಸಿಕೊಂಡಾಗಲೇ ವಿದ್ಯುತ್ ಮಂಡಳಿಯು ಮತ್ತೆ ಇವರನ್ನು ಟ್ರೇಸರ್ ಹುದ್ದೆಗೆ ನೇಮಕ ಮಾಡಿ ಶಿರಸಿಗೆ ವರ್ಗಾಯಿಸಿ ಆದೇಶ ಹೊರಡಿಸಿತು. ಇದರಿಂದ ಪೂರ್ಣವಾಗಿ ವಿಚಲಿತರಾದ ಗೌಡರು ಮಂಡಳಿಯ ನೌಕರಿಗೆ ತಿಲಾಂಜಲಿಯಿತ್ತು, ಸಂಪೂರ್ಣವಾಗಿ ಕಲಾಧ್ಯಯನದಲ್ಲಿ ತಲ್ಲೀನರಾದರು.[೧೨]

ವಿದ್ಯಾರ್ಥಿ ಜೀವನವೆಂಬುದು ಚಿನ್ನದಂತಹ ಜೀವನವೆಂಬುದನ್ನು ಅರಿತಿದ್ದ ಗೌಡರು ನಿತ್ಯ ಡಾ.ಮಿಣಜಿಗಿ, ಬಿ.ಎಂ.ಹಳಿಜೋಳದ, ಪಿ.ಎಸ್.ಹಿರೇಮಠ ಮತ್ತು ವೈ.ಎಚ್.ಸೂಗೂರ್ ಗುರುಗಳ ಮಾರ್ಗದರ್ಶನದಲ್ಲಿ ಪಠ್ಯಕ್ಕನುಗುಣವಾಗಿ ಅಧ್ಯಯನ ಕಲಾಕೃತಿಗಳನ್ನು ರಚಿಸತೊಡಗಿದರು. ಅನವಶ್ಯಕವಾಗಿ ಹರಟೆ ಹೊಡೆಯುವುದು, ಸಮಯ ಹರಣ ಮಾಡುವುದು ಇತ್ಯಾದಿ ಯಾವುದೇ ಬಗೆಯ ದುರಾಭ್ಯಾಸಗಳಿಲ್ಲದ ಹಿತಭಾಷಿ, ಸೌಮ್ಯ ವಿದ್ಯಾರ್ಥಿಯಾಗಿ ಗುರುತಿಸಿಕೊಂಡಿದ್ದರು. ವಿದ್ಯುತ್ ಮಂಡಳಿಯ ನೌಕರಿಗೆ ತಿಲಾಂಜಲಿಯಿತ್ತದ್ದರಿಂದ ಮನೆಯವರಿಂದ ತೀವ್ರವಾದ ಪ್ರತಿಭಟನೆ ನಡೆದು ಇವರಿಗೆ ಯಾವುದೇ ಬಗೆಯ ಆರ್ಥಿಕ ಸಹಕಾರ ಇಲ್ಲದೇ ಇದ್ದರೂ ಅದರಿಂದ ವಿಚಲಿತರಾಗದೇ, ಸಮೀಪದ ಗುಡಗೇರಿಯಿಂದ ಮನೆಯಿಂದ ಬುತ್ತಿ ತರಿಸುವ ವ್ಯವಸ್ಥೆ ಮಾಡಿಕೊಂಡು ದೈನಂದಿನ ಚಿತ್ರಗಳನ್ನು ನಿತ್ಯ ಪೂಜೆ ಎಂಬಂತೆ ರಚಿಸತೊಡಗಿದರು.[೧೩] ಸತತ ಅಭ್ಯಾಸ ಮತ್ತು ಸ್ಪರ್ಧಾತ್ಮಕವಾದ ಅಧ್ಯಯನಗಳು ಗೌಡರಲ್ಲಿ ಸಮಯ ಪ್ರಜ್ಞೆಯನ್ನು ಮೂಡಿಸಿದವು. ಹೀಗಾಗಿ ಇತರರ ಬಗ್ಗೆ ಯೋಚಿಸಲೂ ಕೂಡ ಅವರಿಗೆ ಸಮಯದ ಅಭಾವದಿಂದ ಅವರಿಗೆ ಕಲಾರಚನೆಯೊಂದೇ ನಿರ್ದಿಷ್ಟವಾದ ಮಾರ್ಗವಾಗಿತ್ತು.

ಇಂತಹ ಗಂಭೀರ ಅಧ್ಯಯನ ಕೈಗೊಂಡ ಹಿರೇಗೌಡರಿಗೆ ೧೯೬೬ರಲ್ಲಿ ಡಿಪ್ಲೋಮಾ ಅಂತಿಮ ವರ್ಷದ ಪರೀಕ್ಷೆಯಲ್ಲಿ ನಿರೀಕ್ಷೆಗಿಂತ ಅತೀ ಹೆಚ್ಚಿನ ಅಂಕಗಳು ಬಂದು ಕರ್ನಾಟಕ ರಾಜ್ಯಕ್ಕೆ ಪ್ರಥಮ ರ್‍ಯಾಂಕ್ ಪಡೆದರು. ಮುಂದೆ ಆರ್ಟ್ ಮಾಸ್ಟರ್ ಪದವಿಗಾಗಿ ಅವರು ಕನಿಷ್ಟ ಒಂದು ವರ್ಷ ಕಲಾಶಿಕ್ಷಕರಾಗಿ ಸೇವೆ ಸಲ್ಲಿಸಿದ್ದರೆ ಮಾತ್ರ ಆರ್ಟ್ ಮಾಸ್ಟರ್ ತರಬೇತಿಗೆ ಪ್ರವೇಶ ನೀಡುವ ನಿಯಮಾವಳಿ ಇದ್ದುದರಿಂದ ಆರ್ಟ್ ಮಾಸ್ಟರ ತರಬೇತಿಯೊಂದಿಗೆ ಅವರು ಮೂರುಸಾವಿರ ಮಠದ ಬಾಲಕಿಯರ ಶಾಲೆಯಲ್ಲಿ ಅರೆಕಾಲಿಕ ಶಿಕ್ಷಕರಾಗಿ ಒಂದು ವರ್ಷಕಾಲ ಸೇವೆ ಸಲ್ಲಿಸುವುದರೊಂದಿಗೆ ೧೯೬೭ರಲ್ಲಿ ಆರ್ಟ್ ಮಾಸ್ಟರ್ ತರಬೇತಿಯನ್ನು ಪಡೆದು ಪರೀಕ್ಷೆಯಲ್ಲಿ ಉನ್ನತ ಶ್ರೇಣಿಯಲ್ಲಿ ತೇರ್ಗಡೆ ಹೊಂದಿ[೧೪] ಗುರುಗಳಾದ ಕುಂಚಬ್ರಹ್ಮ ಡಾ.ಎಂ.ವಿ.ಮಿಣಜಿಗಿಯವರ ಕೃಪಾಕಟಾಕ್ಷಕ್ಕೆ ಒಳಗಾದರು. ಶೈಕ್ಷಣಿಕ ಸಂದರ್ಭದಲ್ಲಿಯೇ ವಿಭಿನ್ನ ಪ್ರಯೋಗಗಳನ್ನು ಮಾಡಿದ್ದರಿಂದ ಹಿರೇಗೌಡರು ಈಗಲೂ ಯಾವುದೇ ಒಂದು ಶೈಲಿಗೆ ಬದ್ಧರಾಗದೇ ವಿಭಿನ್ನ ಶೈಲಿಗಳ ಅವಿಷ್ಕಾರದ ಮಾರ್ಗದಲ್ಲಿ ನಡೆಯುತ್ತಿರುವುದನ್ನು ಮುಂದಿನ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

---

೧೨. ವಿ.ಬಿ.ಹಿರೇಗೌಡರ ಸಂದರ್ಶನದಿಂದ
೧೩. -ಅದೇ-
೧೪. -ಅದೇ-

ಶೈಕ್ಷಣಿಕ ಸಂದರ್ಭವು ಕೆಲ ಕಲಾವಿದರ ಮಟ್ಟಿಗೆ ಸ್ಮರಣೀಯವಾಗಿ ಬದುಕಿನುದ್ದಕ್ಕೂ ಆ ಶಾಲೆಯ ಕಲಿಕಾ ಪ್ರಭಾವವನ್ನು ತಮ್ಮ ಕಲಾಕೃತಿಗಳಲ್ಲಿ ಅಳವಡಿಸಿಕೊಂಡು ಅದೇ ಶೈಲಿಗೆ ಅಂಟಿಕೊಂಡು ಮನ್ನಡೆಯುತ್ತಾರೆ. ಆದರೆ ಕಲಾ ಶಿಕ್ಷಣ ಹಂತದಿಂದ ಹಿಡಿದು ಇಂದಿನವರೆಗೂ ವಿಭಿನ್ನ ಮಾಧ್ಯಮಗಳನ್ನು ಸಮರ್ಥನೀಯವಾಗಿ ಬಳಸಿಕೊಳ್ಳುತ್ತ ಕಲಾಶಾಲೆಯ ಪ್ರಭಾವವನ್ನು ಅದರ ಹೊಸ್ತಿಲಲ್ಲೇ ಬಿಟ್ಟು ಶೈಕ್ಷಣಿಕ ತತ್ವಗಳಲ್ಲಿ ತಮ್ಮತನವನ್ನು ಕಂಡುಕೊಂಡ ರೀತಿಯಿಂದ ಹಿರೇಗೌಡರ ಅವರು ಕರ್ನಾಟಕ ಕಲಾಕ್ಷೇತ್ರದಲ್ಲೇ ವಿಭಿನ್ನ ನೆಲೆಯಲ್ಲಿ ನಿಲ್ಲುವುದರೊಂದಿಗೆ ಮಹತ್ವದ ಕಲಾವಿದ, ಕಲಾ ಶಿಕ್ಷಕರೆನಿಸುತ್ತಾರೆ.

**ವೃತ್ತಿ ಜೀವನ**

ಶಿಕ್ಷಣ ಎಂಬುದು ಮಾನವನ ಬದುಕಿನ ಮೊದಲ ಘಟ್ಟವಾದರೆ, ವೃತ್ತಿ ಜೀವನ ಎಂಬುದು ಎರಡನೆಯ ತಿರುವಿನ ಪ್ರಮುಖ ಘಟ್ಟ. ಹಿರೇಗೌಡರ ಅವರು ಮಿಣಜಿಗಿಯವರ ಪ್ರಿತ್ಯಾದರಗಳಿಗೆ ಪಾತ್ರರಾಗಿ ಶಿಕ್ಷಣ ಮುಗಿದ ನಂತರ ಮುಂದೆ ಏನು ? ಎಂದು ಮುಂದಿನ ದಾರಿ ಹುಡುಕುತ್ತಿರುವಾಗಲೇ ಮಿಣಜಿಗಿಯವರಿಂದ ತಮ್ಮ ಕಲಾಶಾಲೆಯಲ್ಲಿಯೇ ಉಪನ್ಯಾಸಕ ಹುದ್ದೆಗೆ ಆಹ್ವಾನ ದೊರೆಯಿತು. ಇದನ್ನು ತುಂಬು ಉತ್ಸಾಹದಿಂದಲೇ ಸ್ವೀಕರಿಸಿದ ಹಿರೇಗೌಡರು ೧೯೬೦ರಲ್ಲಿ ವೃತ್ತಿ ಜೀವನಕ್ಕೆ ಅಡಿಯಿಟ್ಟು, ವಿಜಯಮಹಾಂತೇಶ ಲಲಿತಕಲಾ ಮಹಾವಿದ್ಯಾಲಯದಲ್ಲಿ ಉಪನ್ಯಾಸಕರಾಗಿ ವಿದ್ಯಾರ್ಥಿಗಳೊಂದಿಗೆ ಬೆರೆತು ಅವರ ಪ್ರೀತಿಗೆ ಪಾತ್ರರಾಗುತ್ತಾರೆ. ಅಧ್ಯಾಪಕನಾಗಿದ್ದರೂ ಕೂಡ ವಿದ್ಯಾರ್ಥಿಗಳೊಂದಿಗೆ ಸ್ಕೆಚ್ ಮಾಡಲು ಬಸ್ ನಿಲ್ದಾಣ, ರೈಲ್ವೆ ನಿಲ್ದಾಣ, ಸಂತೆಗಳಿಗೆ ಹೋಗುತ್ತಿದ್ದರು. ಅಲ್ಲಿ ದಿನವೊಂದಕ್ಕೆ ನೂರಾರು ಅಂಕನ ಚಿತ್ರಗಳನ್ನು ರಚಿಸಿ ತಾವೂ ಸಹ ಬೆಳೆಯುವದರೊಂದಿಗೆ ವಿದ್ಯಾರ್ಥಿಗಳಿಗೂ ಮಾರ್ಗದರ್ಶನ ಮಾಡುವ ಪ್ರವೃತ್ತಿಯನ್ನು ಬೆಳೆಸಿಕೊಂಡರು.[೧೫] ಈ ಕಲಾಶಾಲೆಯಲ್ಲಿ ಅವರ ಪಾಲ್ಗೊಳ್ಳುವಿಕೆಯನ್ನು ಗಮನಿಸಿದ ಮಿಣಜಿಗಿಯವರು ಗೌಡರಿಗೆ ಹಲವಾರು ಕಲಾಶಿಕ್ಷಣ ಮಾರ್ಗಗಳನ್ನು ತೋರಿಸಿದರು.

ಹಿರೇಗೌಡರು ಕುಂಚಬ್ರಹ್ಮ ಡಾ.ಎಂ.ವಿ.ಮಿಣಜಿಗಿಯವರ ಸೃಜನಶೀಲ ಕಲೆ, ಕಲಾವಿದ ಹಾಲಭಾವಿಯವರ ಜಲವರ್ಣದ ಪಾರದರ್ಶಕ ತಂತ್ರಗಾರಿಕೆ, ಬೆಳಗಾವಿಯ ಖ್ಯಾತ ಕಲಾವಿದರಾದ ಕೆ.ಬಿ.ಕುಲಕರ್ಣಿಯವರ ಭಾವಚಿತ್ರಗಳು, ಬಿ.ಕೆ.ಹುಬ್ಳಿಯವರ ರೇಖಾಚಿತ್ರದಲ್ಲಿಯ ಸಹಜ ಹಾಗೂ ಸರಳ ರಚನೆಗಳಲ್ಲಿನ ಸೌಂದರ್ಯ, ಲಾವಣ್ಯ, ಚಲನೆಗಳಿಂದಲೂ ಸ್ಫೂರ್ತಿ ಪಡೆದು ಅವುಗಳಿಂದ ಪ್ರಭಾವಿತರಾದರು. ಹಿರೇಗೌಡರ ಅವರು ತಮ್ಮ ಗುರುಗಳಿಂದ ಕಲಿತಂತಹ ಅಕಾಡೆಮಿಕ್ ಪದ್ಧತಿಯನ್ನು ತಳಪಾಯವಾಗಿಟ್ಟುಕೊಂಡು ಭಾರತೀಯ ಪರಂಪರೆ ಹಾಗೂ ಪಾಶ್ಚಿಮಾತ್ಯ ತಂತ್ರಗಳನ್ನು ಸಮನ್ವಯೀಕರಿಸಿಕೊಂಡು ವಿವಿಧ ಮಾಧ್ಯಮಗಳಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಲಿದ್ದರು.

ಇದೇ ಸಂದರ್ಭದಲ್ಲಿ ೧೯೬೪ರಲ್ಲಿ ಅಂದಿನ ಮುಖ್ಯಮಂತ್ರಿಗಳಾಗಿದ್ದ ಎಸ್.ನಿಜಲಿಂಗಪ್ಪ ಮತ್ತು ಶಿಕ್ಷಣ ಸಚಿವರಾಗಿದ್ದ ಎಸ್.ಆರ್.ಕಂಠಿಯವರ ಆಸಕ್ತಿಯಿಂದಾಗಿ ಕೇಂದ್ರ ಸರಕಾರದ ಮೂರನೆಯ

---

೧೫. ವಿ.ಬಿ.ಹಿರೇಗೌಡರ ಸಂದರ್ಶನದಿಂದ



ಮೊದಲ ಪುತ್ರಿ ವೀಣಾ ಮತ್ತು ಹಿರೇಗೌಡರ ಕುಟುಂಬ



ವಿಶ್ರಾಂತಿಯ ದಿನಗಳಲ್ಲಿ ಪತ್ನಿ ದಾಕ್ಷಾಯಣಿಯೊಂದಿಗೆ ಹಿರೇಗೌಡರ



ಹಿರೇಗೌಡರ ಕುಟುಂಬ





'ವರ್ಣಬಿಂದು'





ಹಿರೇಗೌಡರ ಅವರ ಮನೆ ಮತ್ತು ಅಂಗಳ



**ಸರಕಾರಿ ಚಿತ್ರಕಲೆ ಮತ್ತು ಕರಕುಶಲ ಶಾಲೆ(೧೯೬೪-೯೨)**
(ಕುವೆಂಪು ವಿಶ್ವವಿದ್ಯಾನಿಲಯ ಲಲಿತಕಲಾ ಮಹಾವಿದ್ಯಾಲಯ-೧೯೯೨)
ದಾವಣಗೆರೆ



**ಕಲಾಶಾಲೆಯ ಬೋಧಕ ವರ್ಗ (೧೯೭೧)**
ನಿಂತವರು : ಟಿ.ವಿ.ಗಣೇಶಗುಡಿ, ವಿ.ಸೋಮಶೇಖರಪ್ಪ, ಜೆ.ಮಲ್ಲಿಕಾರ್ಜುನ, ಶಂಕರ ಪಾಟೀಲ
ಕುಳಿತವರು : ವೈ.ಎಚ್.ಸೂಗೂರ, ವಿ.ಬಿ.ಹಿರೇಗೌಡರ, ಪ್ರಾಚಾರ್ಯ ಆರ್.ಬಿ.ಕುಂಬಾರ
ಕೆ.ಎಸ್.ಶಿರ್ಕೆ, ಐ.ಬಿ.ಕಂಟೆಪ್ಪಗೌಡರ

ಪಂಚವಾರ್ಷಿಕ ಯೋಜನೆಯಡಿ ಕರ್ನಾಟಕಕ್ಕೆ ಸರ್ಕಾರಿ ಕಲಾಶಾಲೆಯೊಂದು ಮಂಜೂರಾಯಿತು. ಕಲಾಶಾಲೆಯ ಸ್ಥಾಪನೆಗೆ ಕುಂಚಬ್ರಹ್ಮ ಡಾ.ಎಂ.ವಿ.ಮಿಣಜಿಗಿ ಅವರ ಅಧ್ಯಕ್ಷತೆಯಲ್ಲಿ ಸಮಿತಿಯೊಂದು ರಚನೆಯಾಗಿ ಕಲಾಶಾಲೆಯನ್ನು ಕರ್ನಾಟಕದ ಕೇಂದ್ರ ಸ್ಥಳವಾದ ದಾವಣಗೆರೆಯಲ್ಲಿ ಪ್ರಾರಂಭಿಸಬೇಕೆಂದು ಸರಕಾರಕ್ಕೆ ಸಮಿತಿ ಶಿಫಾರಸ್ಸು ಮಾಡಿತು.ಅಂತೆಯೇ ಒಟ್ಟು ೧೩ ಲಕ್ಷ ಅನುದಾನದೊಂದಿಗೆ ಅದರಂತೆ ೧೯೬೪ರಲ್ಲಿಯೇ "ಸರಕಾರಿ ಚಿತ್ರಕಲೆ ಮತ್ತು ಕರಕುಶಲ ಶಾಲೆ" ಎಂಬ ನಾಮಾಂಕಿತದಡಿ ಕಲಾಶಾಲೆ ಪ್ರಾರಂಭವಾಯಿತು. ಹಾಗೂ ಇದಕ್ಕೆ ೨೨ ಎಕರೆ ೨೮ಗುಂಟೆ ಜಾಗೆಯೂ ಸರಕಾರದಿಂದ ಮಂಜೂರಾಗಿ ೭ ಲಕ್ಷ ರೂಪಾಯಿ ಅನುದಾನದೊಂದಿಗೆ ಕಟ್ಟಡ ೧೯೬೯ರಲ್ಲಿ ಪೂರ್ಣಗೊಂಡು ಪಾಠ ಪ್ರವಚನಗಳು ಪ್ರಾರಂಭಗೊಂಡವು.

ಮುಂದಿನ ಪ್ರಕ್ರಿಯೆಯಾಗಿ ಕಲಾಶಾಲೆಯ ಉಪನ್ಯಾಸಕರ ಹುದ್ದೆಗೆ ಅರ್ಜಿ ಆಹ್ವಾನಿಸಿದಾಗ ಹಿರೇಗೌಡರು ಅರ್ಜಿ ಸಲ್ಲಿಸಿದರು. ವಾಸ್ತವವಾಗಿ ಮಿಣಜಿಗಿಯವರ ಅಧೀನದಲ್ಲಿ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದ ಗೌಡರು ಸಂದರ್ಶನಕ್ಕೆ ಬಂದಾಗಲೇ ಮಿಣಜಿಗಿಯವರು ಸಂದರ್ಶನ ಪರಿಣತ ಸಮಿತಿಯ ಅಧ್ಯಕ್ಷರಾಗಿರುವುದು ಗೊತ್ತಾಗಿದ್ದು.[೧೬] ಇಲ್ಲಿಯೂ ಸಹ ಸಮಿತಿಯು ಇವರ ಪ್ರಾಯೋಗಿಕ ಅರ್ಹತೆಯನ್ನು ಪರಿಗಣಿಸಿ ಉಪನ್ಯಾಸಕ ಹುದ್ದೆಗೆ ೧೯೬೭ರಲ್ಲಿ ನೇಮಕ ಮಾಡಿಕೊಂಡ ಮೇಲೆ ಹಿರೇಗೌಡರ ಅವರ ಬದುಕಿಗೆ ಭದ್ರ ನೆಲೆಯೊಂದು ಪ್ರಾಪ್ತವಾಯಿತು. ಜೀವನದ ನೆಲೆಗಟ್ಟು ಕಂಡುಕೊಳ್ಳುತ್ತಲೇ ಸಂಸಾರದ ವ್ಯವಸ್ಥೆ ಅನಿವಾರ್ಯವಾಗಿ ವೈವಾಹಿಕ ಜೀವನಕ್ಕೆ ಅಡಿಯಿಡುವ ಸಂದರ್ಭಕ್ಕೆ ಬಂದಾಗ ಹಿರೇಕೆರೂರು ತಾಲೂಕಿನ ಗೊಡಚಿಕೊಂಡ ಗ್ರಾಮದ ಗೌರವಾನ್ವಿತ ಪಟೇಲ್ ಮನೆತನದ ಶಿವನಗೌಡರ ಎರಡನೆಯ ಪುತ್ರಿಯಾದ ದಾಕ್ಷಾಯಣಿಯವರನ್ನು ೧೯೬೯ರಲ್ಲಿ ಧರ್ಮಪತ್ನಿಯನ್ನಾಗಿ ಸ್ವೀಕರಿಸಿದರು. ಇವರೂ ಸಹ ಪತಿಯ ಭಾವನೆಗಳನ್ನು ಅರ್ಥೈಸಿಕೊಂಡು ಗೌಡರಲ್ಲಿ ಸ್ಫೂರ್ತಿದಾಯಕ ಕಲಾಜೀವನಕ್ಕೆ ಪ್ರೇರಣಾ ಶಕ್ತಿಯಾಗಿ ಈಗಲೂ ಅದೇ ಮನೋಧರ್ಮದಿಂದ ಸಹಕರಿಸುತ್ತಿದ್ದಾರೆ.

ಹಿರೇಗೌಡರದು ಚಿಕ್ಕ ಹಾಗೂ ಚೊಕ್ಕ ಸಂಸಾರ. ಹಿರಿಯ ಮಗಳು ವೀಣಾ ಹಾಗೂ ಎರಡನೆಯ ಮಗಳು ವಾಣಿ ಮತ್ತು ಪುತ್ರ ವಿಲಾಸ (ಅವಳಿ ಮಕ್ಕಳು) ವಿವಾಹಿತರಾಗಿದ್ದು, ಅವರಲ್ಲಿಯೂ ಸಹ ಕಲೆಯ ಛಾಯೆ ಮೂಡಿ ಅವರುಗಳು ನೃತ್ಯ, ಸಂಗೀತ, ನಾಟಕ ಕಲೆಗಳಲ್ಲಿ ಆಸಕ್ತಿ ತೋರಿ ರಂಗದ ಮೇಲೂ ಸೃಜನಾತ್ಮಕ ನಾಟಕ ಪ್ರಯೋಗಗಳನ್ನು ನೀಡಿದ್ದಾರೆ. ಪುತ್ರನು ಕಲಾ ವ್ಯಾಸಂಗ ಮಾಡದಿದ್ದರೂ ಕಲೆಯಲ್ಲಿ ವಿಶೇಷ ಆಸಕ್ತಿಗೆ ಕಡಿಮೆ ಏನಿಲ್ಲ. ಬಿ.ಎಸ್ಸಿ. (ಎಲೆಕ್ಟ್ರಾನಿಕ್ಸ್)ಪದವಿ ಪಡೆದು ರಾಷ್ಟ್ರೀಯ ಅಂತರಾಷ್ಟ್ರೀಯ ಕಾರ್ಯಕ್ರಮಗಳನ್ನು ಸಂಘಟಿಸುತ್ತಾ ಕಾಮನ್ ಕಲರ್ಸ್ ಎಂಟರ್‌ಟೈನರ್ ಪ್ರೈ.ಲಿ. ಕಂಪನಿ ಸ್ಥಾಪಿಸಿ ಅದರ ಕಾರ್ಯ ಕಲಾಪಗಳೊಂದಿಗೆಯೇ ಇಂದಿನ ಆಧುನಿಕ ಮಾಹಿತಿ ತಂತ್ರಜ್ಞಾನದಲ್ಲಿ ಸ್ನಾತಕೋತ್ತರ ತರಗತಿಯನ್ನು ಪೂರೈಸಿರುವರು. ಅಲ್ಲದೇ ಎಂ.ಬಿ.ಎ.(ಈವೆಂಟ್ ಮ್ಯಾನೇಜಮೆಂಟ್)ಸ್ನಾತಕೋತ್ತರ ಪದವೀಧರನಾಗಿ

---

೧೬. ವಿ.ಬಿ.ಹಿರೇಗೌಡರ ಸಂದರ್ಶನದಿಂದ



ಕಲಾಗುರು ದಂಡಾವತಿಮಠ ಅವರು ಕಲಾಶಾಲೆಗೆ ಭೇಟಿ ನೀಡಿದ ಸಂದರ್ಭ



ಬೋಧಕ/ಬೋಧಕೇತರ ವರ್ಗ ಮತ್ತು ವಿದ್ಯಾರ್ಥಿಗಳೊಂದಿಗೆ-೧೯೭೧



೧೯೭೧ರಲ್ಲಿ ಟಿ.ಪಿ.ಅಕ್ಕಿ ಅವರು ಕಲಾಪ್ರದರ್ಶನ ಉದ್ಘಾಟಿಸುತ್ತಿರುವ ಸಂದರ್ಭ

ಬೆಂಗಳೂರಿನಲ್ಲಿ ನೆಲೆ ನಿಂತು ತಮ್ಮ ಭವಿಷ್ಯವನ್ನು ರೂಪಿಸಿಕೊಂಡಿದ್ದಾರೆ. ಇಷ್ಟು ಸುಂದರ ಕುಟುಂಬದ ಮಧ್ಯೆಯೂ ಹಿರೇಗೌಡರ ಮೂಲ ಆಸಕ್ತಿ ಇರುವದು ಕಲಾಶಾಲೆಯಲ್ಲಿ.

ಕಲಾಶಾಲೆಯ ಪ್ರಾರಂಭಿಕ ಹಂತದಲ್ಲಿ ಸರಕಾರವು ವಿದ್ಯಾರ್ಥಿಗಳ ಕಲಾಭ್ಯಾಸಕ್ಕೆ ಸಾಕಷ್ಟು ಸಲಕರಣೆ, ಪೀಠೋಪಕರಣಗಳ ಸೌಲಭ್ಯಗಳನ್ನು, ಶಿಷ್ಯವೇತನ, ಕಲಾಸಾಮಗ್ರಿ, ಇನ್ನಿತರೆ ಹಲವು ರೀತಿಯ ಸೌಲಭ್ಯಗಳನ್ನು ಕಲ್ಪಿಸಿದ್ದರೂ ಕೂಡ ವಿದ್ಯಾರ್ಥಿಗಳ ತೀವ್ರ ಕೊರತೆಯನ್ನು ಎದುರಿಸುತ್ತಿತ್ತು. ಇಂತಹ ಸಂದರ್ಭದಲ್ಲಿ ಕಲಾಶಾಲೆಯ ಸಹೋದ್ಯೋಗಿಗಳ ನೆರವಿನಿಂದ ಹಿರೇಗೌಡರು ಶಾಲೆಯಲ್ಲಿನ ಶಿಕ್ಷಣದ ಮಹತ್ವವನ್ನು ಸಾರ್ವತ್ರೀಕರಣಗೊಳಿಸುವುದಕ್ಕಾಗಿ ಪ್ರಕೃತಿ ಚಿತ್ರ ರಚಿಸಲು ಹಳ್ಳಿಗಳಿಗೆ, ಬಸ್ ನಿಲ್ದಾಣ, ರೈಲು ನಿಲ್ದಾಣಗಳಿಗೆ ವಿದ್ಯಾರ್ಥಿಗಳೊಂದಿಗೆ ಹೋಗಿ ಅಂಕನೆ ಚಿತ್ರ ರಚಿಸಲು ಪ್ರೇರೇಪಿಸಿದರು. ಈ ಸಂದರ್ಭದಲ್ಲಿ ಕಲಾವಿದ್ಯಾರ್ಥಿಗಳು ರಚಿಸುತ್ತಿದ್ದ ಅಂಕನೆ ಚಿತ್ರಗಳನ್ನು ಕುತೂಹಲದಿಂದ ವೀಕ್ಷಿಸುತ್ತಿದ್ದ ಸಾರ್ವಜನಿಕರು ಮತ್ತು ಪ್ರಯಾಣಿಕರಿಗೆ ಗೌಡರು ನಗರದಲ್ಲಿರುವ ಚಿತ್ರಕಲಾ ಶಾಲೆ ಮತ್ತು ಚಿತ್ರಕಲಾ ಶಿಕ್ಷಣದ ಮಹತ್ವವನ್ನು ತಿಳಿಯಪಡಿಸುವುದರೊಂದಿಗೆ ಅನೇಕ ಆಸಕ್ತ ವಿದ್ಯಾರ್ಥಿಗಳು ಶಾಲೆಯತ್ತ ಆಕರ್ಷಿತರಾಗಿ ಹೆಚ್ಚಿನ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಪ್ರವೇಶ ಪಡೆದು ಕಲಾಧ್ಯಯನದಲ್ಲಿ ತೊಡಗಿದರು.

ಅಷ್ಟೇ ಅಲ್ಲದೇ ಕಲಾಶಾಲೆಯ ವಿದ್ಯಾರ್ಥಿಗಳನ್ನು ಮೈಸೂರು ದಸರಾ, ಕರ್ನಾಟಕ ಲಲಿತಕಲಾ ಅಕಾಡೆಮಿ ಇನ್ನೂ ಹಲವಾರು ಸಂಘಟನೆಗಳು ಏರ್ಪಡಿಸುವ ಕಲಾಸ್ಪರ್ಧೆ, ಕಲಾ ಪ್ರದರ್ಶನಗಳಲ್ಲಿ ತಮ್ಮ ಸಹೋದ್ಯೋಗಿ ಮಿತ್ರರೊಂದಿಗೆ ವಿದ್ಯಾರ್ಥಿಗಳನ್ನು ಕರೆದುಕೊಂಡು ಪಾಲ್ಗೊಳ್ಳಿಕೆಯ ಮಹತ್ವವನ್ನು ತಿಳಿಸಿಕೊಡುವುದರ ಮೂಲಕ ಅವರ ಪ್ರತಿಭೆಗೆ ಸೂಕ್ತವಾದ ವೇದಿಕೆಯನ್ನು ಕಲ್ಪಿಸಿಕೊಟ್ಟರು. ಇದರಿಂದ ಕಲಾಶಾಲೆಯ ಅನೇಕ ವಿದ್ಯಾರ್ಥಿಗಳು ರಾಜ್ಯ, ರಾಷ್ಟ್ರ ಮಟ್ಟದ ಪ್ರಶಸ್ತಿಗಳಿಗೆ ಭಾಜನರಾಗಲು ಹಿರೇಗೌಡರಷ್ಟೇ ಅಲ್ಲದೇ ತಮ್ಮ ಸಹೋದ್ಯೋಗಿಗಳಾಗಿದ್ದ ವೈ.ಎಚ್.ಸೂಗೂರು, ಶಂಕರ ಪಾಟೀಲ, ಶಿರ್ಕೆ, ಟಿ.ವಿ.ಗಣೇಶಗುಡಿ, ಕೃಷ್ಣಮೂರ್ತಿ, ಕಂಟೆಪ್ಪಗೌಡರ ಮತ್ತು ರಾಯ್ಕರ ಅವರೂ ಸಹ ಸರಿಸಮಾನ ಕಾರಣಕರ್ತರಾಗಿದ್ದಾರೆ[೧೭] ಎಂಬುದನ್ನು ಗೌಡರು ಅತ್ಯಂತ ಕೃತಜ್ಞತಾಭಾವದಿಂದ ಸ್ಮರಿಸಿಕೊಳ್ಳುತ್ತಾರೆ.

ಇಂತಹ ಕ್ರಿಯಾತ್ಮಕ ಚಟುವಟಿಕೆಗಳಿಂದ ವಿದ್ಯಾರ್ಥಿಗಳ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದ ಹಿರೇಗೌಡರು ಎಂಟು ವರ್ಷಗಳ ಕಾಲ ಉಪನ್ಯಾಸಕ ಹುದ್ದೆಯಲ್ಲಿದ್ದಾಗಲೇ ಕಲಾಶಾಲೆಯ ಪ್ರಾಚಾರ್ಯರ ಹುದ್ದೆಗೆ ಕರ್ನಾಟಕ ಲೋಕಸೇವಾ ಆಯೋಗವು ೧೯೭೫ರಲ್ಲಿ ಅರ್ಜಿ ಆಹ್ವಾನಿಸಿತು. ಆ ಸಂದರ್ಭದಲ್ಲಿ ಗೌಡರ ಜೊತೆಗೆ ಶಂಕರ ಪಾಟೀಲ, ವೈ.ಎಚ್.ಸೂಗೂರ, ಟಿ.ವಿ.ಗಣೇಶಗುಡಿ, ಶಿರ್ಕೆ ರಾಜ್ಯದ ಇತರೆ ೧೫ ಜನ ಹಿರಿಯ ಕಲಾವಿದರು, ಇನ್ನೂ ಹಲವರು ಸಹ ಪ್ರಾಚಾರ್ಯರ ಹುದ್ದೆಗೆ ಅರ್ಜಿ ಸಲ್ಲಿಸಿದ್ದರು.

---

೧೭. ವಿ.ಬಿ.ಹಿರೇಗೌಡರ ಸಂದರ್ಶನದಿಂದ

ಸಂದರ್ಶನದ ನಂತರ ಪ್ರಾಚಾರ್ಯರ ಹುದ್ದೆಗೆ ಹಿರೇಗೌಡರು, ಅವರು ನೇಮಕವಾಗುತ್ತಾರೆ. ಆದರೆ ಪ್ರಾಚಾರ್ಯರ ಹುದ್ದೆಗೆ ಹಿರೇಗೌಡರ ನೇಮಕವನ್ನು ಪ್ರಶ್ನಿಸಿ ಶಂಕರ ಪಾಟೀಲ ಹಾಗೂ ವೈ.ಎಚ್ ಸೂಗೂರ ಅವರು ಹೈಕೋರ್ಟಿನಲ್ಲಿ ದಾವೆ ಹೂಡುತ್ತಾರೆ.[೧೮] ಇಲ್ಲಿಂದ ಅವರ ವೃತ್ತಿ ಬದುಕಿನಲ್ಲಿ ಅನೇಕ ರೀತಿಯ ಕಿರುಕುಳವೆನ್ನಬಹುದಾದ ಏರುಪೇರುಗಳು ಸಂಭವಿಸಿದರೂ ಗೌಡರು ವಿಚಲಿತರಾಗದೇ ಕಲಾಶಾಲೆಯ ಪ್ರಾಚಾರ್ಯರ ಹುದ್ದೆಯ ಗೌರವವನ್ನು ಕಾಪಾಡುವುದರೊಂದಿಗೆ ಶಾಲೆಯ ಅಭಿವೃದ್ಧಿಗೆ ಪಣ ತೊಡುತ್ತಾರೆ.

**ಆಡಳಿತಗಾರರಾಗಿ**

ಅಧ್ಯಾಪನ, ಅಧ್ಯಯನ ಕಾರ್ಯಗಳಿಗಿಂತ ಹಿರೇಗೌಡರ ಕಾರ್ಯಕ್ಷೇತ್ರ ಆಡಳಿತಕ್ಕೆ ಸೀಮಿತಗೊಳ್ಳುವ ಸಂದರ್ಭ ಬರುತ್ತದೆ. ಕಾರಣವೇನಂದರೆ ತಾಂತ್ರಿಕ ಶಿಕ್ಷಣ ಮಂಡಳಿಯ ಜೊತೆ ನಿರಂತರ ಸಂಪರ್ಕ ಮತ್ತು ಆಗಾಗ ನಡೆಯುವ ಸಭೆಗಳಿಗೆ ಇವರು ಅನಿವಾರ್ಯವಾಗಿ ಪಾಲ್ಗೊಳಬೇಕಿತ್ತು. ಹೀಗಾಗಿ ಅಧ್ಯಾಪನ ಕಾರ್ಯದಲ್ಲಿ ಅಷ್ಟು ತಲ್ಲೀನರಾಗುವ ಅವಕಾಶದಿಂದ ವಂಚಿತರಾದರೆಂಬುದು ದಿಟ. ಆದರೂ ಕೂಡ ಉಳಿದ ಸಮಯಾವಕಾಶದಲ್ಲಿ ಅಂತಿಮ ವರ್ಷದ ಲಲಿತಕಲಾ ವಿದ್ಯಾರ್ಥಿಗಳಿಗೆ ಬಹು ವರ್ಷಗಳವರೆಗೆ ಆಧುನಿಕ ಸಂಯೋಜನೆಯನ್ನು ಮತ್ತು ಪ್ರಥಮ, ದ್ವಿತೀಯ ವರ್ಷದ ವಿದ್ಯಾರ್ಥಿಗಳಿಗೆ ಯಥಾದರ್ಶನ ಪ್ರಾಯೋಗಿಕ ಪಾಠಗಳನ್ನು ಬೋಧಿಸುತ್ತಿದ್ದರು. ಜೊತೆಗೆ ಅಲ್ಪ ಸ್ವಲ್ಪ ಬಿಡುವಿನ ವೇಳೆಯಲ್ಲಿ ಅವರ ಅತ್ಯಂತ ಅಚ್ಚುಮೆಚ್ಚಿನ ಮಾಧ್ಯಮವಾದ ರೇಖಾಚಿತ್ರಗಳನ್ನು ರಚಿಸುವುದರಲ್ಲಿ ನಿರಂತರವಾಗಿ ತಲ್ಲೀನರಾಗುತ್ತಿದ್ದರು. ಆದರೆ ಹುದ್ದೆಯ ಜವಾಬ್ದಾರಿಯ ಒಂದೇ ಸಮಸ್ಯೆಯಲ್ಲದೇ ಹಲವಾರು ಸಮಸ್ಯೆಗಳು ತಲೆದೋರುತ್ತಿದ್ದವು.

ವಿದ್ಯಾರ್ಥಿಗಳ ಶಿಷ್ಯವೇತನ ಪರಿಷ್ಕರಣೆ ಸೇರಿದಂತೆ ನಗರದ ಹೃದಯಭಾಗದಲ್ಲಿರುವ ಶಾಲೆಯ ಭೌತಿಕ ಆಸ್ತಿಯ ರಕ್ಷಣೆಯ ಹೊಣೆ ದೊಡ್ಡ ಸಮಸ್ಯೆಯಾಗಿತ್ತು. ಏಕೆಂದರೆ ದಾವಣಗೆರೆ ನಗರ ಹನುಮಂತನ ಬಾಲದಂತೆ ದಿನೇ ದಿನೇ ಬೆಳೆಯುತ್ತಿದ್ದಂತೆ ವಿದ್ಯಾನಗರದ ಬಾಜುವಿರುವಂತಹ ಶಾಲೆಯ ಆವರಣಕ್ಕೆ ಹಲವಾರು ಜನರು ಕಬಳಿಸಲು ಯತ್ನ ನಡೆಸಿದ್ದು, ಅದನ್ನು ಬದಿಗೊತ್ತಲು ಇವರು ಪ್ರಯತ್ನಿಸಿದ್ದು ಈಗ ಚರಿತ್ರೆ. ಬೇಲಿಯೇ ಎದ್ದು ಹೊಲ ಮೇಯ್ದ ಹಾಗೆ ಎಂಬಂತೆ ಶಾಲೆಯ ಅನ್ನವನ್ನು ತಿನ್ನುವರೇ ಅನ್ಯ ಕಾರಣಗಳಿಗೆ ಶಾಲೆಯ ಭೂಮಿಯನ್ನು ಕಬಳಿಸಲು ಸಂಚು ರೂಪಿಸಿದ್ದು, ಅದಕ್ಕಾಗಿ ಇನ್ನಿಲ್ಲದ ರಾಜಕೀಯ ಒತ್ತಡ ತಂದಿದ್ದು, ಇದನ್ನೆಲ್ಲ ಎದುರಿಸುವುದರಲ್ಲಿಯೇ ಹೆಚ್ಚಿನ ಸಮಯ ಕಳೆಯಿತು ಎನ್ನುತ್ತಾರೆ ಗೌಡರು.[೧೯]

ಇಂಥ ಹಲವಾರು ಸಮಸ್ಯೆಗಳ ಮಧ್ಯೆಯೇ ಕೆಲವರ ಕುಮ್ಮಕ್ಕಿನಿಂದ ವಿದ್ಯಾರ್ಥಿಗಳ ಚಳುವಳಿಗಳು, ನಿರಂತರ ಸರಕಾರದ ನಿಯಮಾವಳಿಗಳ ಕಟ್ಟುನಿಟ್ಟಿನ ಪಾಲನೆಯ ಜೊತೆಗೆ ವಿದ್ಯಾರ್ಥಿಗಳ ಹಿತಕ್ಕಾಗಿ

೧೮. ವಿ.ಬಿ.ಹಿರೇಗೌಡರ ಸಂದರ್ಶನದಿಂದ
೧೯. -ಅದೇ-



ಕಲಾಶಾಲೆಗೆ ಭೇಟಿ ನೀಡಿದ ಶಿಕ್ಷಣ ಸಚಿವ
ಮಲ್ಲಿಕಾರ್ಜುನಸ್ವಾಮಿಯವರೊಂದಿಗೆ ಹಿರೇಗೌಡರ




ಪ್ರಾಚಾರ್ಯರಾಗಿ ವಿ.ಬಿ.ಹಿರೇಗೌಡರ



೧೯೮೭ರಲ್ಲಿ ಶಿಕ್ಷಣ ಸಚಿವ ಡಾ.ಜೀವರಾಜ ಆಳ್ವ ಕಲಾಶಾಲೆಗೆ
ಭೇಟಿ ನೀಡಿದ ಸಂದರ್ಭದಲ್ಲಿ ಪ್ರಾಚಾರ್ಯ ಹಿರೇಗೌಡರು

ಅನೇಕ ಯೋಜನೆಗಳನ್ನು ಜಾರಿಗೆ ತರುವುದರಲ್ಲಿ ಕೆಲವರ ಅಸಹಕಾರವಿದ್ದರೂ[೨೦] ಮೂರು, ನಾಲ್ಕು ಮತ್ತು ಅಂತಿಮ ವರ್ಷದ ವಿದ್ಯಾರ್ಥಿಗಳ ಯೋಜನಾ ಪ್ರವಾಸಗಳನ್ನು ಹಮ್ಮಿಕೊಳ್ಳಬೇಕು. ಇಷ್ಟೇ ಅಲ್ಲದೇ ವಿದ್ಯಾರ್ಥಿಗಳ ಕಲಾಶಿಕ್ಷಣದ ಗುಣಮಟ್ಟ ಹೆಚ್ಚಿಸಲು ಅವರಿಗಾಗಿ ಪ್ರಾತ್ಯಕ್ಷಿಕೆ, ವಿಶೇಷೋಪನ್ಯಾಸ ಕಾರ್ಯಕ್ರಮಗಳನ್ನು ಸಾಂಗವಾಗಿ ಏರ್ಪಡಿಸುವುದರ ಹಿಂದೆ ದುಷ್ಟ ಶಕ್ತಿಗಳ ಕೈವಾಡ, ಇವೆಲ್ಲವನ್ನು ಸಮರ್ಥವಾಗಿ ಎದುರಿಸಿದವರಲ್ಲಿ ಹಿರೇಗೌಡರು ಅಪ್ರತಿಮರು. ಅಷ್ಟೇ ಅಲ್ಲ ಸತ್ಯಪಾಲನೆ ಮಾಡುವುದರಲ್ಲಿ ವಜ್ರದಷ್ಟು ಕಠೋರ ಮನಸ್ಸುಳ್ಳವರು.

ಕಲಾಶಾಲೆಯ ಆಡಳಿತ ಸೂತ್ರ ಗೌಡರ ಕೈಗೆ ಬಂದಾಗ ಆಡಳಿತದ ಹಲವಾರು ಸಮಸ್ಯೆಗಳನ್ನು ಬಗೆಹರಿಸಲು ಪೇಚಾಡಬೇಕಾದ ಸಂದರ್ಭವನ್ನು ಗೌಡರು ಅಹೋರಾತ್ರಿ ಎದುರಿಸಿದರು. ಆದರೆ ಇದೇ ಶಾಲೆಯ ಸಹೋದರ ಸಂಸ್ಥೆಗಳಾದ ಡಿ.ಆರ್.ಆರ್. ಪಾಲಿಟೆಕ್ನಿಕ ಮತ್ತು ಬಿ.ಡಿ.ಟಿ.ಎಂಜಿನಿಯರಿಂಗ್ ಕಾಲೇಜಿನ ಕೆಲವು ಆಡಳಿತಾಧಿಕಾರಿಗಳು ಹಿರೇಗೌಡರ ನೆರವಿಗೆ ಬಂದು ಆಡಳಿತ ಯಂತ್ರ ಸುಗಮವಾಗಿ ಕಾರ್ಯನಿರ್ವಹಿಸಲು ಸಹಕರಿಸಿದರೆಂಬುದನ್ನು ಹಿರೇಗೌಡರು ಈಗಲೂ ಸ್ಮರಿಸುತ್ತಾರೆ.[೨೧]

ಪ್ರಾರಂಭದಲ್ಲಿ ವಿದ್ಯಾರ್ಥಿಗಳ ಮನವೊಲಿಸಿ ಕರೆತರಬೇಕಾದ ಸಂದರ್ಭ ಕಳೆದುಹೋಗಿ ಗರಿಷ್ಠ ಪ್ರವೇಶಗಳಿಗಿಂತ ಹೆಚ್ಚಿನ ವಿದ್ಯಾರ್ಥಿಗಳು ಅರ್ಜಿ ಸಲ್ಲಿಸಿದಾಗ ಅನೇಕ ಒತ್ತಡಗಳನ್ನು ಎದುರಿಸಿಯೂ ಮೆರಿಟ್ ಆಧಾರಿತ ಆಯ್ಕೆ ವಿಧಾನವನ್ನು ಅನುಸರಿಸಿದಾಗ ಅನೇಕ ಜನ ಪ್ರತಿಭಾವಂತ ವಿದ್ಯಾರ್ಥಿಗಳು ಪ್ರವೇಶ ಸಿಗದೇ ವಂಚಿತರಾಗಿರುವುದೂ ದಿಟ. ಏಕೆಂದರೆ ತಾಂತ್ರಿಕ ಶಿಕ್ಷಣ ಮಂಡಳಿಯ ನಿಯಮದ ಪ್ರಕಾರ ಎಸ್.ಎಸ್.ಎಲ್.ಸಿ. ವಿದ್ಯಾರ್ಥಿಯು ಕನಿಷ್ಠ ೪೫% ಅಂಕಗಳನ್ನು ಪಡೆದುಕೊಳ್ಳಬೇಕಾಗಿತ್ತು. ಈ ನಿಯಮಾವಳಿ ಪಾಲಿಟೆಕ್ನಿಕ್ ವಿದ್ಯಾರ್ಥಿಗಳಿಗೆ ಅನ್ವಯವಾಗುವಂಥದು. ಅದೇ ನಿಯಮಾವಳಿಯನ್ನು ಕಲಾಶಾಲೆಗೂ ಅನ್ವಯಿಸಿದ ಮಂಡಳಿಯ ನೀತಿ ಅನೇಕ ಕಲಾಸಕ್ತ ವಿದ್ಯಾರ್ಥಿಗಳ ಪಾಲಿಗೆ ಮುಳುವಾಯಿತು. ಇದನ್ನು ಬದಲಿಸಲು ಗೌಡರಿಂದ ಆಗದೇ ಇರುವುದಕ್ಕೂ ಕಾರಣವಿದೆ. ಏಕೆಂದರೆ ರಾಷ್ಟ್ರೀಯ ತಾಂತ್ರಿಕ ಶಿಕ್ಷಣ ಮಂಡಳಿಯ ನಿರ್ದೇಶನದಂತೆ ತಾಂತ್ರಿಕ ಶಿಕ್ಷಣದ ಅಡಿಯಲ್ಲಿಯೇ ಈ ಕಲಾಶಾಲೆ ಕಾರ್ಯನಿರ್ವಹಿಸುತ್ತಿದ್ದುದರಿಂದ ಶಿಕ್ಷಣದ ಏಕರೂಪತೆಯನ್ನು ಕಾಯ್ದುಕೊಳ್ಳಬೇಕಾದ ನಿರ್ದೇಶನವಿತ್ತು. ಹೀಗಾಗಿ ಈ ಕಲಾಶಾಲೆಗೆ ಪ್ರತ್ಯೇಕವಾದ ನೀತಿಯೊಂದನ್ನು ರೂಪಿಸಲು ಮಂಡಳಿ ಸಿದ್ಧವಿರಲಿಲ್ಲ. ಇದು ಕರ್ನಾಟಕದ ಕಲಾವಿದ್ಯಾರ್ಥಿಗಳ ಪಾಲಿಗೆ ನುಂಗಲಾರದ ತುತ್ತೂ ಆಗಿತ್ತು.

ಬೆಳಗಾಂ, ಹುಬ್ಬಳ್ಳಿ, ಧಾರವಾಡ, ಮಂಗಳೂರು, ಮೈಸೂರು, ವಿಜಾಪುರ, ಬೀದರ, ರಾಯಚೂರು, ಗುಲ್ಬರ್ಗಾಗಳಲ್ಲದೇ ಇನ್ನಿತರ ಸ್ಥಳಗಳಿಂದಲೂ ಈ ಕಲಾಶಾಲೆಗೆ ಅಧ್ಯಯನಾಸಕ್ತ ವಿದ್ಯಾರ್ಥಿಗಳ ಸಂಖ್ಯೆಯು ಗಣನೀಯವಾಗಿ ಹೆಚ್ಚಾಗಿ ಸರ್ಕಾರ ನಿಗದಿಪಡಿಸಿದ್ದ ಪ್ರವೇಶ ಮಿತಿಯ ಸಂಖ್ಯೆಯನ್ನು

೨೦. ವಿ.ಬಿ.ಹಿರೇಗೌಡರ ಸಂದರ್ಶನದಿಂದ
೨೧. -ಅದೇ-

ಮೀರಿ ಪ್ರವೇಶ ಕೋರಿ ಅರ್ಜಿಗಳು ಬರಲಾರಂಭಿಸಿದವು. ಪ್ರಾರಂಭದಲ್ಲಿ ಪ್ರವೇಶ ಬಯಸಿಬಂದ ಎಲ್ಲ ವಿದ್ಯಾರ್ಥಿಗಳನ್ನು ಪ್ರವೇಶ ಪಡೆಯಲು ಒತ್ತಾಯಿಸುತ್ತಿದ್ದ ಸಂದರ್ಭ ದೂರಾಗಿ, ಪ್ರವೇಶಕ್ಕೆ ಸ್ಪರ್ಧಾತ್ಮಕ ಪರೀಕ್ಷೆ ನಡೆಸಿ ಅದರಲ್ಲಿ ಉತ್ತೀರ್ಣರಾದವರನ್ನು ಅರ್ಹತೆಯ ಆಧಾರದ ಮೇಲೆ ಪ್ರವೇಶ ನೀಡುವಂತಹ ನಿಯಮಾಳಿಯನ್ನು ರೂಪಿಸಿ ಪ್ರತಿಭಾವಂತರಿಗೆ ಅಧ್ಯಯನದಿಂದ ವಂಚಿತರಾಗದಂತೆ ಕಾನೂನು ಕ್ರಮ ಜರುಗಿಸುವಲ್ಲಿ ಹಿರೇಗೌಡರು ಆಡಳಿತಾತ್ಮಕವಾಗಿ ಯಶಸ್ವಿಯಾಗಿದ್ದು ಅವರ ಆಡಳಿತದ ಮೈಲುಗಲ್ಲಾಗಿ, ಪ್ರತಿಭಾವಂತರಿಗೆ ಪ್ರವೇಶ ಪಡೆಯಲು ರಾಜಮಾರ್ಗ ಸೃಷ್ಟಿಯಾಯಿತು.

ಹಿರೇಗೌಡರು ತಮ್ಮ ಕಲಾಶಾಲೆಯ ವಿದ್ಯಾರ್ಥಿಗಳಿಗೆ ವಸತಿ ವ್ಯವಸ್ಥೆಯ ಸಮಸ್ಯೆ ಉಂಟಾದಾಗ ಡಿ.ಆರ್.ಆರ್.ಪಾಲಿಟೆಕ್ನಿಕ್‌ನ ಹಾಸ್ಟೆಲ್‌ನಲ್ಲಿ ವಿದ್ಯಾರ್ಥಿಗಳಿಗೆ ವಸತಿ ವ್ಯವಸ್ಥೆ ಕಲ್ಪಿಸಿಕೊಡುವುದರಲ್ಲಿ ಬಹುಮುಖ್ಯ ಪಾತ್ರವಹಿಸುತ್ತಾರೆ. ತಾಂತ್ರಿಕ ಶಿಕ್ಷಣ ಮಂಡಳಿಯೊಂದಿಗೆ ನಿರಂತರ ಸಂಪರ್ಕವಿಟ್ಟುಕೊಂಡು ವಿದ್ಯಾರ್ಥಿಗಳಿಗೆ ದೊರಕಬೇಕಾದ ಸೌಲಭ್ಯಗಳನ್ನು ಒದಗಿಸಲು ಪರಿಶ್ರಮವಹಿಸುತ್ತಾರೆ. ಇವೆಲ್ಲದರ ಮಧ್ಯೆಯೂ ವಿದ್ಯಾರ್ಥಿಗಳಿಗೆ ಪೀಠೋಪಕರಣಗಳು, ಪಾಠೋಪಕರಣಗಳು, ಸಮಕಾಲೀನ ಸ್ಥಿತಿಗೆ ಸಂಬಂಧಪಟ್ಟಂತೆ ಪಠ್ಯಕ್ರಮ ಪರಿಷ್ಕರಣೆ ಇವೆಲ್ಲವನ್ನು ಶಾಲೆಯ ಎಲ್ಲ ಅಧ್ಯಾಪಕರೊಂದಿಗೆ ಚರ್ಚಿಸಿ ತೀರ್ಮಾನ ತೆಗೆದುಕೊಳ್ಳಬೇಕಾಗಿತ್ತು.

ವಿಶ್ವಬ್ಯಾಂಕಿನಿಂದ ಆರ್ಥಿಕ ಸಹಾಯ ೧೯೯೨ರಲ್ಲಿ ಒದಗಿಬಂತು. ಆದರೆ ಕಾಗೆ ಕೂಡುವುದಕ್ಕೂ ಕೋಲು ಮುರಿಯುವುದಕ್ಕೂ ಸರಿ ಎಂಬಂತೆ ದೊರೆಯಬೇಕಾದ ಧನ ಸಹಾಯವನ್ನು ತಡೆಹಿಡಿಯಲಾಯಿತು. ಏಕೆಂದರೆ ಹೊಸದಾಗಿ ಕುವೆಂಪು ವಿಶ್ವವಿದ್ಯಾನಿಲಯ ಶಿವಮೊಗ್ಗ ಜಿಲ್ಲೆಯ ಬಿ.ಆರ್.ಪ್ರಾಜೆಕ್ಟಿನ ಶಂಕರಘಟ್ಟದಲ್ಲಿ ಸ್ಥಾಪನೆಗೊಂಡು ಶೈಶವಾವಸ್ಥೆಯಲ್ಲಿತ್ತು. ವಿಶ್ವವಿದ್ಯಾಲಯ ಅಭಿವೃದ್ಧಿಗೆ ಅಗತ್ಯವಾದ ಸ್ಥಿರಾಸ್ತಿಯನ್ನು ಯು.ಜಿ.ಸಿ.ಗೆ ತೋರಿಸಬೇಕಿತ್ತು. ಆಗ ಮಾತ್ರ ಯು.ಜಿ.ಸಿ. ಅನುಮೋದನೆ ಮತ್ತು ಧನಸಹಾಯ ದೊರಕುತ್ತಿತ್ತು. ಈ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆಯ ಸರಕಾರಿ ಕಾಲೇಜುಗಳನ್ನು ಮತ್ತು ತಾಂತ್ರಿಕ ಶಿಕ್ಷಣ ಮಂಡಳಿಯ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ದಾವಣಗೆರೆಯ ಸರ್ಕಾರಿ ಬಿ.ಡಿ.ಟಿ. ಇಂಜಿನಿಯರಿಂಗ್ ಕಾಲೇಜು ಮತ್ತು ಸರಕಾರಿ ಚಿತ್ರಕಲೆ ಮತ್ತು ಕರಕುಶಲ ಶಾಲೆಯನ್ನು ಇವುಗಳ ಸಂಪೂರ್ಣ ಆಸ್ತಿಯ ಸಹಿತವಾಗಿ ಸರಕಾರ ಕುವೆಂಪು ವಿಶ್ವವಿದ್ಯಾಲಯಕ್ಕೆ ಹಸ್ತಾಂತರಿಸಿತು. ಇದರಿಂದ ೧೯೯೨ರ ಅಂತ್ಯಕ್ಕೆ ತಾಂತ್ರಿಕ ಶಿಕ್ಷಣ ಮಂಡಳಿಯ ಡಿಪ್ಲೋಮಾ ಕೋರ್ಸ್‌ಗಳು ಸ್ಥಗಿತಗೊಂಡು ವಿಶ್ವವಿದ್ಯಾನಿಲಯ ಲಲಿತಕಲಾ ಮಹಾವಿದ್ಯಾಲಯವಾಗಿ ಪರಿವರ್ತನೆಗೊಂಡು ಪದವಿಮಟ್ಟದ ತರಗತಿಗಳು ಪ್ರಾರಂಭವಾದವು.

ದೃಶ್ಯಕಲೆಯಲ್ಲಿ ಪದವಿ ತರಗತಿಗಳು ರಾಜ್ಯದ ಗುಲ್ಬರ್ಗಾ, ಬೆಂಗಳೂರು, ಮೈಸೂರುಗಳಲ್ಲಿ ಆಗಲೇ ಪ್ರಾರಂಭವಾಗಿದ್ದವು. ಇದನ್ನು ಮನಗಂಡು ೧೯೯೧-೯೨ನೆಯ ಸಾಲಿನ ಅಂತಿಮ ವರ್ಷದ ಕಲಾಶಾಲೆಯ ವಿದ್ಯಾರ್ಥಿಗಳು ವಿಶ್ವವಿದ್ಯಾಲಯದ ಕುಲಪತಿಗಳಿಗೆ ಮನವಿ ಸಲ್ಲಿಸಿದಾಗ, ಅಗತ್ಯ ಕ್ರಮಗಳನ್ನು ಕೈಗೊಂಡರೂ ನಿಮಗೆ ಮಾತ್ರ ಪದವಿ ನೀಡಲು ಬರುವುದಿಲ್ಲ ಎಂಬ ಉತ್ತರ

ನೀಡಿದರು.[೨೨] ಆದರೆ ೧೯೯೨-೯೩ನೇ ಸಾಲಿನಿಂದಲೇ ವಿಶ್ವವಿದ್ಯಾಲಯವು ಕಲಾಶಾಲೆಯನ್ನು ತನ್ನ ಅಧೀನಕ್ಕೆ ತೆಗೆದಕೊಂಡು "ಕುವೆಂಪು ವಿಶ್ವವಿದ್ಯಾಲಯ ಲಲಿತಕಲಾ ಮಹಾವಿದ್ಯಾಲಯ" ಎಂದು ಮರುನಾಮಕರಣ ಮಾಡಿ ಹಾಲಿ ಪ್ರಚಲಿತದಲ್ಲಿದ್ದ ಚಿತ್ರಕಲೆ, ವಾಣಿಜ್ಯಕಲೆಯ ಜೊತೆಗೆ ಹೆಚ್ಚುವರಿಯಾಗಿ ಗ್ರಾಫಿಕ್ ಕಲೆ, ಶಿಲ್ಪಕಲೆಯ ವಿಭಾಗಗಳನ್ನು ಆರಂಭಿಸಿ ಬಿ.ಎಫ್.ಎ. ತರಗತಿಗಳನ್ನು ನಡೆಸಲು ಪ್ರಾರಂಭಿಸಿತು. ಈ ಹಂತದಲ್ಲಿ ಹಿರೇಗೌಡರ ಪರಿಶ್ರಮ ಬಹುಮುಖ್ಯವಾದುದು. ಇದರಿಂದಾಗಿ ಕೇವಲ ಎರಡು ವಿಭಾಗಗಳಿದ್ದ ಈ ಕಾಲೇಜಿನಲ್ಲಿ ಮತ್ತೆ ಗ್ರಾಫಿಕ್ ಮತ್ತು ಶಿಲ್ಪಕಲೆ ವಿಭಾಗಗಳು ಹೆಚ್ಚುವರಿಯಾಗಿ ದೊರೆತವು. ಅಲ್ಲದೇ ಇಲ್ಲಿನ ಶಿಕ್ಷಣ ಡಿಪ್ಲೋಮ ಹಂತದಿಂದ ಪದವಿ ಹಂತಕ್ಕೇರಿದುದರಿಂದ ಬಹಳ ದಿನಗಳ ವಿದ್ಯಾರ್ಥಿಗಳ ಬೇಡಿಕೆ ಈಡೇರಿದಂತಾಯಿತು. ಇದುವರೆಗೂ ಕೇವಲ ಭೌತಿಕ ಬೆಳವಣಿಗೆಯನ್ನು ಹೊಂದಿ, ರಾಷ್ಟ್ರಕ್ಕೆ ಕಲಾವಿದ್ಯಾರ್ಥಿಗಳನ್ನು ಕಲಾವಿದರನ್ನಾಗಿ ರೂಪಿಸಿ ಅಪಾರ ಕೊಡುಗೆಯನ್ನು ನೀಡಿದ ಈ ಶಾಲೆ ನಂತರದ ದಿನಗಳಲ್ಲಿ ಬೌದ್ಧಿಕವಾಗಿ ಬೆಳೆಯಲು ವಿ.ವಿ. ಸಹಕರಿಸಿತು.

ಕಾಲೇಜಿನಲ್ಲಿ ಬೋಧನಾ ತರಗತಿಯ ಕೊಠಡಿಗಳ ಕೊರತೆ ಇರುವುದನ್ನು ಗಮನಿಸಿದ ಹಿರೇಗೌಡರು ತಮ್ಮ ಅವಧಿಯಲ್ಲಿ ಎರಡು ಫೌಂಡೇಶನ್ ತರಗತಿಗಳ ಕೊಠಡಿಗಳು ಮತ್ತು ಲೀಥೋಗ್ರಫಿ ಕೊಠಡಿಗಳನ್ನು ವಿ.ವಿ.ಯಿಂದ ಮಂಜೂರು ಮಾಡಿಸಿಕೊಂಡು ಕಟ್ಟಡ ನಿರ್ಮಿಸಿದರು. ಪ್ರಾರಂಭದಲ್ಲಿ ಬಂದ ಅಧ್ಯಾಪಕರು ಕ್ರಮೇಣ ವಯೋನಿವೃತ್ತಿ, ಅಕಾಲಿಕ ಮರಣದಿಂದಾಗಿ ಮತ್ತು ಸ್ವಯಂ ನಿವೃತ್ತಿ ಹೊಂದಿದ ಅಧ್ಯಾಪಕರ ಹುದ್ದೆಗಳಿಗೆ ಪರ್ಯಾಯವಾಗಿ ಅರೆಕಾಲಿಕ ಅಧ್ಯಾಪಕರ ನೇಮಕಾತಿಯನ್ನು ಮಾಡಿಕೊಳ್ಳುವ ನಿಟ್ಟಿನಲ್ಲಿ ತಾಂತ್ರಿಕ ಶಿಕ್ಷಣ ಮಂಡಳಿಯ ಅಧೀನದಲ್ಲಿದ್ದಾಗಲೂ ಮತ್ತು ವಿ.ವಿ.ಯ ಅಧೀನ ಒಳಪಟ್ಟಾಗಲೂ ಸಂಬಂಧಪಟ್ಟವರೊಂದಿಗೆ ವ್ಯವಹರಿಸಿ ಮಂಜೂರಾತಿ ಪಡೆದರು. ಪ್ರಾರಂಭದಲ್ಲಿ ಕೇವಲ ಮಾಸಿಕ ೬೦೦/-ರೂಪಾಯಿಗಳಿಗಿದ್ದ ಅರೆಕಾಲಿಕ ಶಿಕ್ಷಕರ ಸಂಬಳ ಇಂದು ೮,೦೦೦/-ರೂಪಾಯಿಗಳವರೆಗೆ ಹೆಚ್ಚಿದೆ.

ಹಿರೇಗೌಡರ ಅವರ ಅವಧಿಯಲ್ಲಿ ಅರೆಕಾಲಿಕವಾಗಿ ಅಧ್ಯಾಪನ ಮಾಡಿವರಲ್ಲಿ ಸಿ.ಕೆ.ವೈ. ದಿಕ್ಷಿತ್(ಕಲಾಇತಿಹಾಸ), ಚಿ.ಸು.ಕೃಷ್ಣಸೆಟ್ಟಿ (ಚಿತ್ರಕಲೆ), ಪ್ರಕಾಶ(ಫೋಟೋಗ್ರಫಿ), ಬಿ.ಎಲ್.ಶ್ರೀನಿವಾಸ (ಲೀಥೋಗ್ರಫಿ), ಮಹಾಲಿಂಗಪ್ಪ(ಅನಾಟಮಿ), ಕೆ.ಕರಿರಾಜು(ಚಿತ್ರಕಲೆ), ರವೀಂದ್ರ ಎಸ್. ಕಮ್ಮಾರ (ಸ್ಟುಡಿಯೋ ವರ್ಕ), ಚಂದ್ರಶೇಖರ ಸಂಗಾ(ಚಿತ್ರಕಲೆ), ಸಂತೋಷಕುಮಾರ ಕುಲಕರ್ಣಿ(ಚಿತ್ರಕಲೆ), ಡಾ.ಎಂ.ಕೆ.ಗಿರೀಶಕುಮಾರ(ಚಿತ್ರಕಲೆ), ಟಿ.ಜಯತಿಪ್ಪೇಶ(ಚಿತ್ರಕಲೆ), ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ (ಚಿತ್ರಕಲೆ), ಬಾಬುರಾವ್ ಎಚ್.(ಗ್ರಾಫಿಕ್), ಅಣ್ಣಪ್ಪ ಟಿ.ಶಲ್ವಾರ್(ಗ್ರಾಫಿಕ್), ಎಂ.ವೆಂಕಟೇಶ(ಶಿಲ್ಪಕಲೆ),

೨೨. ವಿ.ಬಿ.ಹಿರೇಗೌಡರ ಸಂದರ್ಶನದಿಂದ ದಿ:೨೫.೦೫.೨೦೦೬/ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ (ಕಲಾಶಾಲೆಯ ೧೯೯೧-೯೨ನೆಯ ಸಾಲಿನ ವಿದ್ಯಾರ್ಥಿ)ಅವರ ಸಂದರ್ಶನದಿಂದ : ಈ ಬ್ಯಾಚಿನ ವಿದ್ಯಾರ್ಥಿಗಳು ಕುವೆಂಪು ವಿಶ್ವವಿದ್ಯಾಲಯದ ಕುಲಪತಿಗಳಿಗೆ ಮನವಿ ಸಲ್ಲಿಸಿ ಪದವಿ ತರಗತಿಗಳನ್ನು ಸಂಘಟಿಸಬೇಕೆಂಬುದಕ್ಕೆ ಹೋರಾಟವನ್ನು ಮಾಡಿದ್ದರಲ್ಲದೇ, ಅಂತಿಮ ವರ್ಷದ ಡಿಪ್ಲೋಮಾ ಪರೀಕ್ಷೆಗೆ ಕುಳಿತ ತಮಗೂ ಪದವಿ ಪ್ರಮಾಣ ಪತ್ರ ನೀಡಬೇಕೆಂದು ಆಗ್ರಹಿಸಿದ್ದರು.




ಕುವೆಂಪು ವಿಶ್ವವಿದ್ಯಾಲಯ ಲಲಿತಕಲಾ
ಮಹಾವಿದ್ಯಾಲಯದ ಸಹೋದ್ಯೋಗಿಗಳೊಂದಿಗೆ ಹಿರೇಗೌಡರು



ಕುವೆಂಪು ವಿಶ್ವವಿದ್ಯಾಲಯದ ಸೆನೆಟ್ ಸದಸ್ಯರೊಂದಿಗೆ ಹಿರೇಗೌಡರು

ಈಶ್ವರ ಪ್ರಕಾಶ (ಶಿಲ್ಪಕಲೆ), ದತ್ತಾತ್ರೇಯ ಭಟ್ಟ(ಕಲಾಇತಿಹಾಸ), ಜಯರಾಜ ಚಿಕ್ಕಪಾಟೀಲ (ವಾಣಿಜ್ಯ ಕಲೆ), ಎ.ಪಿ.ಚಂದ್ರಶೇಖರ (ಗ್ರಾಫಿಕ್), ಗುರುರಾಜ ನಾಯಕ (ಶಿಲ್ಪಕಲೆ) ಎಂಜಿ.ಈಶ್ವರಪ್ಪ(ಕನ್ನಡ), ಗುಬ್ಬಿ(ಕನ್ನಡ), ಬಿ.ವಿ.ವೀರಭದ್ರಪ್ಪ(ಕನ್ನಡ), ತಿಪ್ಪೇಸ್ವಾಮಿ ರೆಡ್ಡಿ(ಸೌಂದರ್ಯಶಾಸ್ತ್ರ) ಇವರುಗಳು ಅತೀ ಕಡಿಮೆ ಸಂಬಳ ಪಡೆದರೂ ಹೆಚ್ಚು ಕಾಲ ಶ್ರದ್ಧೆಯಿಂದ ಬೋಧನೆ ಮಾಡಿ ವಿದ್ಯಾರ್ಥಿಗಳ ಶೈಕ್ಷಣಿಕ ಉನ್ನತೀಕರಣಕ್ಕೆ ಕಾರಣಕರ್ತರಾಗಿದ್ದಾರೆ.

ಜಾಗತೀಕರಣದ ಸವಾಲುಗಳಿಗೆ ಕಾಲೇಜು ತಕ್ಕ ಜವಾಬು ನೀಡಲೇಬೇಕಾಯಿತು. ಅದರಂತೆ ಬೆರಳತುದಿಯಲ್ಲಿ ಜಗತ್ತು ಇರುವಾಗ ಅದಕ್ಕೆ ಅಗತ್ಯವಾದ ಗಣಕ ಯಂತ್ರಗಳನ್ನು, ಅದಕ್ಕೆ ಸಂಬಂಧಪಟ್ಟ ಪಠ್ಯಕ್ರಮವೂ ಸಹ ಹಿರೇಗೌಡರ ಅವಧಿಯಲ್ಲಿ ಸಿದ್ಧಗೊಂಡಿತು. ಅಲ್ಲದೇ ಇದೇ ಜಾಗತೀಕರಣದ ಸವಾಲುಗಳಿಗೆ ತಕ್ಕಂತೆ ಎಲ್ಲ ವಿಭಾಗಗಳ ಪಠ್ಯಕ್ರಮವನ್ನು ಮೂರ್‍ನಾಲ್ಕು ಬಾರಿ ಪರಿಷ್ಕರಿಸಲಾಯಿತು. ಪ್ರಾರಂಭಿಕವಾಗಿ ಆರು ಗಣಕ ಯಂತ್ರಗಳನ್ನು ವಿಶ್ವವಿದ್ಯಾನಿಲಯವು ಒದಗಿಸಿ ವಾಣಿಜ್ಯಕಲಾ ವಿದ್ಯಾರ್ಥಿಗಳ ಬೇಡಿಕೆಗನುಗುಣವಾಗಿ ಕಂಪ್ಯೂಟರ ಅಧ್ಯಯನ ಹಿರೇಗೌಡರ ಅವರ ಆಡಳಿತದ ಕೊನೆಯ ಅವಧಿಯಲ್ಲಿ ಪ್ರಾರಂಭವಾಯಿತು. ಆದರೆ ಇಂದಿನ ಅಗತ್ಯವಾದ ೨ಡಿ, ೩ಡಿ ಎನಿಮೇಷನ್, ವೆಬ್ ಡಿಸೈನಿಂಗ ಇನ್ನೂ ಮುಂತಾದ ಗಣಕಯಂತ್ರಾಧಾರಿತ ವಿಷಯಗಳನ್ನು ಪಠ್ಯಕ್ರಮದಲ್ಲಿ ಅಳವಡಿಸುವ ತುರ್ತು ಅಗತ್ಯವಿದೆ. ಅದಕ್ಕೆ ಪೂರಕವಾದ ಉಪನ್ಯಾಸಕರ ಹಾಗೂ ಇತರ ಸಿಬ್ಬಂದಿ ನೇಮಕ ಕೂಡ ಆಗಬೇಕಿದೆ.

ವಿದ್ಯಾಲಯದ ವಿದ್ಯಾರ್ಥಿಗಳಿಗೆ ಕೇವಲ ಪಾಠಕ್ಕೆ ಮಾತ್ರ ಸೀಮಿತಗೊಳಿಸದೇ ಅವರಿಗೆ ಆಗಾಗ ಹೊರಗಿನ ವಿದ್ವಾಂಸರಿಂದ ಪ್ರಾತ್ಯಕ್ಷಿಕೆ, ಉಪನ್ಯಾಸ, ಚರ್ಚಾಗೋಷ್ಠಿಗಳನ್ನು ಏರ್ಪಡಿಸುವಲ್ಲಿ ಹಿರೇಗೌಡರು ಆಸಕ್ತಿ ವಹಿಸುತ್ತಿದ್ದರು. ತನ್ಮೂಲಕ ವಿದ್ಯಾರ್ಥಿಗಳ ಆಸಕ್ತಿಯನ್ನು ಇಮ್ಮಡಿಗೊಳಿಸುವಲ್ಲಿ ಮತ್ತು ಆ ಕ್ಷೇತ್ರದಲ್ಲಿ ಅವರು ಉತ್ಸಾಹದಿಂದ ಮುಂದುವರೆಯಲು ಕಾರಣವಾದರು. ಅಲ್ಲದೇ ರಾಜ್ಯವಲ್ಲದೇ ಹೊರರಾಜ್ಯಗಳಿಂದಲೂ ಸಹ ವಿದ್ಯಾರ್ಥಿಗಳು ಈ ಕಲಾಶಾಲೆಯನ್ನು ಅರಸಿಕೊಂಡು ಬರುವಂತಾಯಿತು.

ಹಿರೇಗೌಡರು ಪ್ರಾಚಾರ್ಯರಿದ್ದಾಗ ಕಲಾಶಿಕ್ಷಣಕ್ಕೆ ಪೂರಕವಾಗಿ ಪ್ರಮುಖ ಸಮಿತಿಗಳ ಅಧ್ಯಕ್ಷರಾಗಿ, ಸದಸ್ಯರಾಗಿ ನಾಮಕರಣಗೊಂಡು ತಮ್ಮ ವೃತ್ತಿ ಬದುಕಿಗೆ ಘನತೆಯನ್ನು ತಂದುಕೊಟ್ಟಿದ್ದಾರೆ. ಅವುಗಳ ವಿವರ ಈಕೆಳಗಿನಂತಿದೆ.

೧. ಕರ್ನಾಟಕ ಸರಕಾರದ ತಾಂತ್ರಿಕ ಶಿಕ್ಷಣ ಇಲಾಖೆಯು ನಡೆಸುವ ತಾಂತ್ರಿಕ ಪರೀಕ್ಷಾ ಮಂಡಳಿ(ಚಿತ್ರಕಲಾ)ಯಲ್ಲಿ ೧೯೭೫-೭೮, ೧೯೮೨-೮೪, ೧೯೮೬-೮೮, ೧೯೯೦-೯೨ರ ಸಾಲಿನಲ್ಲಿ ಮತ್ತು ಉನ್ನತ ಕಲಾಶಿಕ್ಷಣದ ಕಲಾ ಇತಿಹಾಸ ಪುಸ್ತಕ ರಚನಾ ಸಮಿತಿಯ ಅಧ್ಯಕ್ಷರಾಗಿ ಸೇವೆಸಲ್ಲಿಸಿದ್ದಾರೆ.

೨. ೧೯೭೫ರಿಂದ ೧೯೭೭ರವರೆಗೆ ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿ ಕಲೆ ಮತ್ತು ಕರಕುಶಲ ಮಂಡಳಿಯ ಸದಸ್ಯರಾಗಿ ಕಾರ್ಯನಿರ್ವಹಿಸಿರುತ್ತಾರೆ.

೩. ೧೯೭೫ರಿಂದ ೧೯೮೫ರವರೆಗೆ ಕೇಂದ್ರೀಯ ತಾಂತ್ರಿಕ ನಿರ್ದೇಶನಾಲಯದ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

೪. ೧೯೭೮ರಲ್ಲಿ ಲಲಿತಕಲೆ ಮತ್ತು ವಾಣಿಜ್ಯಕಲೆ (ಡಿಪ್ಲೋಮಾ ಪರೀಕ್ಷೆಗಳಿಗೆ) ಹೊಸದಾಗಿ ಪಠ್ಯಕ್ರಮವನ್ನು ರಚಿಸುವ ರಚನಾ ಸಮಿತಿಯ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ.

೫. ೧೯೭೮ರಲ್ಲಿ ಕರ್ನಾಟಕ ರಾಜ್ಯದ ಎರಡು ವರ್ಷಗಳ ಪದವಿ ಪೂರ್ವ ತರಗತಿಗಳಲ್ಲಿ ವೃತ್ತಿ ಶಿಕ್ಷಣದಲ್ಲಿ ವಾಣಿಜ್ಯ ಕಲೆ ಮತ್ತು ಲಲಿತಕಲೆ ವಿಭಾಗಕ್ಕೆ ಪಠ್ಯಕ್ರಮ ರಚನಾ ಸಮಿತಿಯ ಸದಸ್ಯರಾಗಿ ಸೇವೆಸಲ್ಲಿಸಿದ್ದಾರೆ.

೬. ೧೯೭೫ರಿಂದ ೨೦೦೪ರವರೆಗೆ ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯ, ನಿರ್ದೇಶನಾಲಯದಡಿಯಲ್ಲಿ ಮೇಜರ್ ಚಪ್ಪದೀರ್ ಪೊನ್ನಪ್ಪ ರಾಜಾರಾಂ ಸ್ಮಾರಕ ಶಿಲ್ಪಕಲಾ ಶಿಷ್ಯವೇತನ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

೭. ೧೯೮೩ರಿಂದ೮೬ ಮತ್ತು ೧೯೮೮-೯೦ರವರೆಗೆ ಎರಡು ಅವಧಿಗೆ ಕರ್ನಾಟಕ ಲಲಿತಕಲಾ ಅಕಾಡೆಮಿಗೆ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

೮. ೧೯೮೧ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಪದವಿ ಮಟ್ಟದ ಸ್ತ್ರೀ ಶಿಕ್ಷಣಾಭಿವೃದ್ಧಿ ಯೋಜನೆಯಡಿಯಲ್ಲಿ ಲಲಿತಕಲೆ ಮತ್ತು ವಾಣಿಜ್ಯಕಲಾ ವಿಭಾಗದಲ್ಲಿ ಪಠ್ಯಕ್ರಮ ರಚನಾ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

೯. ೧೯೮೨-೮೪ರವರೆಗೆ ಕರ್ನಾಟಕ ಉಚ್ಚಕಲಾ ಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಡಿ.ಎಂ.ಸಿ. ಮತ್ತು ಆರ್ಟ್ ಮಾಸ್ಟರ್ ಪರೀಕ್ಷಾ ಸಮಿತಿಯ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

೧೦. ೧೯೭೭-೮೨ರ ಅವಧಿಯಲ್ಲಿ ಗುಲಬರ್ಗಾ ವಿಶ್ವವಿದ್ಯಾನಿಲಯದ ಲಲಿತಕಲಾ ವಿಭಾಗದ ಅಧ್ಯಯನ ಮಂಡಳಿಯ ಸದಸ್ಯರಾಗಿ ಕಾರ್ಯ ನಿರ್ವಹಿಸಿದ್ದಾರೆ.

೧೧. ೧೯೮೩ರಿಂದ೨೦೦೨ರವರೆಗೆ ಬೆಂಗಳೂರು ವಿಶ್ವವಿದ್ಯಾನಿಲಯದ ಲಲಿತಕಲಾ (ಬಿ.ಎಫ್.ಎ. ಮತ್ತು ಎಂ.ಎಫ್.ಎ.)ಅಧ್ಯಯನ ಮಂಡಳಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

೧೨. ೧೯೮೭-೧೯೯೫ರವರೆಗೆ ಮೈಸೂರು ವಿಶ್ವವಿದ್ಯಾನಿಲಯದ ಲಲಿತಕಲಾ ವಿಭಾಗದ ಅಧ್ಯಯನ ಮಂಡಳಿಯ (ಬಿ.ಎಫ್.ಎ.) ಪರೀಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ.

೧೩. ೧೯೮೪-೯೦ ಮತ್ತು ೧೯೯೦-೯೧ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ದೃಶ್ಯಕಲಾ ವಿಷಯದ ಅಫಿಲಿಯೇಶನ್ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿರುವರು.



ರಾಜ್ಯಪಾಲರಾದ ಟಿ.ಎನ್.ಚತುರ್ವೇದಿ ಮತ್ತು ಉನ್ನತ ಶಿಕ್ಷಣ
ಸಚಿವರಾದ ಜಿ.ಪರಮೇಶ್ವರ ಅವರೊಂದಿಗೆ ಹಿರೇಗೌಡರ



ಶಿಲ್ಪವನದ ಉದ್ಘಾಟನೆಯ ಸಂದರ್ಭದಲ್ಲಿ
ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ಅಧ್ಯಕ್ಷರೊಂದಿಗೆ ಹಿರೇಗೌಡರ



ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ವಿಭಾಗದಲ್ಲಿ ಹಿರೇಗೌಡರ ಅವರು ಅಧ್ಯಾಪಕರಾಗಿ
ಕಾರ್ಯನಿರ್ವಹಿಸಿದ ಸಂದರ್ಭ (೨೦೦೩-೦೪)

೧೪. ನವದೆಹಲಿಯ ಇಂಡಿಯನ್ ಸೊಸೈಟಿ ಫಾರ್ ಟೆಕ್ನಿಕಲ್ ಎಜ್ಯುಕೇಶನ್‌ನ ಸದಸ್ಯತ್ವ ಹೊಂದಿರುತ್ತಾರೆ.

೧೫. ಕರ್ನಾಟಕ ಕಲಾಶಾಲೆಗಳ ಸಿಬ್ಬಂದಿ ಸಂಘ, ಹುಬ್ಬಳ್ಳಿ ಇವರು ೧೯೯೨ರಲ್ಲಿ ಹಂಪಿಯಲ್ಲಿ ಸಂಘಟಿಸಿದ ರಾಜ್ಯಮಟ್ಟದ ಜಲವರ್ಣ ರಚನಾ ಕಾರ್ಯಾಗಾರದ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ.

೧೬. ೧೯೮೭ರಿಂದ ೧೯೯೫ರವರೆಗೆ ಕರ್ನಾಟಕ ರಾಜ್ಯ ಕಲಾಶಿಕ್ಷಣ ಸಂಯುಕ್ತ ಸಂಸ್ಥೆಗಳ ಉಪಾಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

೧೭. ೧೯೯೪ರಲ್ಲಿ ನವದೆಹಲಿಯ ಕೇಂದ್ರ ಲಲಿತಕಲಾ ಅಕಾಡೆಮಿಯ ಕಲಾಶಿಕ್ಷಣ ಮಂಡಳಿಗೆ (ಕರ್ನಾಟಕದ ಪ್ರತಿನಿಧಿಯಾಗಿ)ಸದಸ್ಯರಾಗಿ ನಾಮಕರಣಗೊಂಡು ಸೇವೆ ಸಲ್ಲಿಸಿದ್ದಾರೆ.

೧೮. ಕುವೆಂಪು ವಿಶ್ವವಿದ್ಯಾನಿಲಯದ ಕಲಾಶಿಕ್ಷಣ ಮಂಡಳಿಗೆ ಮೂರು ಬಾರಿ ಮತ್ತು ಸೆನೆಟ್ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ.

೧೯. ೨೦೦೦ದಲ್ಲಿ ಹರಿಯಾಣ ರಾಜ್ಯದ ಕುರುಕ್ಷೇತ್ರ ವಿಶ್ವವಿದ್ಯಾಲಯದ ಲಲಿತಕಲಾ ವಿಭಾಗದ ಅಧ್ಯಯನ ಮಂಡಳಿಯ ತಜ್ಞ ಸದಸ್ಯರಾಗಿ ಸೇವೆ ಸಲ್ಲಿಸಿರುವರು.

೨೦. ಕನ್ನಡ ವಿಶ್ವವಿದ್ಯಾಲಯದ ದೃಶ್ಯಕಲಾ ಅಧ್ಯಯನ ಮಂಡಳಿ ಹಾಗೂ ಪರೀಕ್ಷಾ ಮಂಡಲಿಯ ಸದಸ್ಯರಾಗಿ ಸೇವೆ ಸಲ್ಲಿರುವುದಲ್ಲದೇ ಬಿ.ವಿ.ಎ. ಹಾಗೂ ಎಂ.ವಿ.ಎ ಸ್ನಾತಕೋತ್ತರ ಪದವಿಯ ಪಠ್ಯಕ್ರಮ ರಚನಾ ಸಮಿತಿಯ ಸದಸ್ಯರಾಗಿಯೂ ಸೇವೆ ಸಲ್ಲಿಸಿದ್ದಾರೆ.

೨೨. ದಾವಣಗೆರೆಯ ದೃಶ್ಯಕಲಾ ಪರಿಷತ್‌ನ ಸಂಸ್ಥಾಪಕ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದ್ದಾರೆ.

೨೩. ದಾವಣಗೆರೆ ಕಲಾಶಾಲೆಯ ಹಳೆಯ ವಿದ್ಯಾರ್ಥಿಗಳ ಸಂಘದ (ದಾಕಹವಿಸ)ದ ಸಲಹೆಗಾರರಾಗಿ ಸೇವೆಸಲ್ಲಿಸಿದ್ದಾರೆ.

೨೪. ಹಿರೇಗೌಡರು ತಮ್ಮ ನಿವೃತ್ತಿ ಜೀವನದಲ್ಲಿಯೂ ಕನ್ನಡ ವಿ.ವಿ. ಹಂಪಿಯ ವಿಶೇಷ ಆಹ್ವಾನದ ಮೇರೆಗೆ ೨೦೦೩ರಲ್ಲಿ ಹೊಸದಾಗಿ ಪ್ರಾರಂಭವಾದ ಸ್ನಾತಕೋತ್ತರ ದೃಶ್ಯಕಲಾ ವಿಭಾಗಕ್ಕೆ ಸಂದರ್ಶಕ ಪ್ರಾಧ್ಯಾಪಕರಾಗಿ ಹಾಗೂ ಮುಖ್ಯಸ್ಥರಾಗಿ ಭದ್ರ ಬುನಾದಿ ಹಾಕಿ ಅದರ ನಿರಂತರ ಅಭಿವೃದ್ಧಿಗೆ ಒಂದು ವರ್ಷ ಸೇವೆ ಸಲ್ಲಿಸಿದ್ದಾರೆ.

೨೫. ಇವರ ಸೇವಾ ವ್ಯಾಪ್ತಿ ಇಲ್ಲಿಗೆ ನಿಲ್ಲದೇ ೨೦೦೫ರಿಂದ ಮೈಸೂರಿನ ಡಿ.ಎಂ.ಎಸ್. ಲಲಿತಕಲಾ ಮಹಾಸಂಸ್ಥಾನದ ಆಹ್ವಾನದ ಮೇರೆಗೆ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದ ಪ್ರಾಯೋಜಕತ್ವದಲ್ಲಿ ದೂರ ಶಿಕ್ಷಣದ ಮುಖಾಂತರ ದೃಶ್ಯಕಲೆ ಬಿ.ಎಫ್.ಎ. ಪದವಿಯನ್ನು ನೀಡುವ ಡಿ.ಎಮ್.ಎಸ್. ಲಲಿತಕಲಾ ಮಹಾಸಂಸ್ಥಾನದಲ್ಲಿ ಗೌರವ ಡೀನ್‌ರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಈ ಸಂಸ್ಥೆ ರಾಷ್ಟ್ರದಲ್ಲಿಯೇ ಪ್ರಥಮ ಬಾರಿಗೆ ದೂರಶಿಕ್ಷಣ ಪದ್ಧತಿಯ ಸಂಸ್ಥೆಯಾಗಿರುವುದಲ್ಲದೇ







ಹಿರೇಗೌಡರ ಅವರು ಗೌರವ ಡೀನ್ ಆಗಿ ಕಾರ್ಯನಿರ್ವಹಿಸುತ್ತಿರುವ
ಮೈಸೂರಿನ ಡಿ.ಎಮ್.ಎಸ್.ಲಲಿತಕಲಾ ಮಹಾಸಂಸ್ಥಾನದ (ದೂರಶಿಕ್ಷಣ ಕೇಂದ್ರ) ಪರಿಸರ

ಇದಕ್ಕೆ ಅಮೂಲಾಗ್ರವಾಗಿ ಶೈಕ್ಷಣಿಕ ಹಂದರವನ್ನು ಹೆಣೆಯುವಲ್ಲಿ ಹಿರೇಗೌಡರ ಪಾತ್ರ ಅವಿಸ್ಮರಣೀಯ. ಅಲ್ಲದೇ ರಾಷ್ಟ್ರದ ಮೂಲೆ ಮೂಲೆಗಳಿಂದ ಕಲಾ ಶಿಕ್ಷಣ ವಂಚಿತರಾದ ವಿದ್ಯಾರ್ಥಿಗಳು ಇಲ್ಲಿ ಪ್ರವೇಶ ಪಡೆದು ಅಧ್ಯಯನ ಮಾಡುತ್ತಿರುವುದು ಒಂದು ವಿಶೇಷವಾಗಿದೆ. ಈ ಸಂಸ್ಥೆಗೆ ರಾಜ್ಯದ ಎಲ್ಲೆಡೆಯಿಂದ ಸೇವಾ ಸೌಜನ್ಯರನ್ನು ಆಹ್ವಾನಿಸಿ ವಿದ್ಯಾರ್ಥಿಗಳಿಗೆ ವಿಶೇಷ ಉಪನ್ಯಾಸ, ಪ್ರಾತ್ಯಕ್ಷಿಕೆ ಹಾಗೂ ಚರ್ಚೆ, ಸಂವಾದ ಯೋಜನೆಗಳನ್ನು ಸಮರ್ಪಕವಾಗಿ ಹೆಣೆದು ಕಾರ್ಯ ನಿರ್ವಹಿಸುವಲ್ಲಿ ಹಿರೇಗೌಡರ ಪಾತ್ರ ಪ್ರಶ್ನಾತೀತವಾಗಿದೆ.

ವಿಶಿಷ್ಟ ಕಲಾ ಪ್ರೌಢಿಮೆಯನ್ನು ತಮ್ಮದೇ ಆದ ಶೈಲಿಯಲ್ಲಿ ಬೆಳಸಿಕೊಂಡ ಇವರು ನಮ್ಮ ರಾಜ್ಯದ ಬಹುತೇಕ ಎಲ್ಲ ಕಲಾಶಾಲೆಗಳಿಗೆ ವಿಶೇಷ ಆಹ್ವಾನಿತ ಕಲಾವಿದರಾಗಿ ಭೇಟಿ ನೀಡಿ ಅಲ್ಲಿನ ವಿದ್ಯಾರ್ಥಿಗಳಿಗೆ ವಿವಿಧ ಮಾಧ್ಯಮಗಳಲ್ಲಿ ಭಾವಚಿತ್ರಣ, ಸಂಯೋಜನಾ ಚಿತ್ರಣ, ಭಿತ್ತಿ ಚಿತ್ರಣ ವಿನ್ಯಾಸ ಹಾಗೂ ರೇಖಾ ಚಿತ್ರಗಳ ಪ್ರಾತ್ಯಕ್ಷಿಕೆಯನ್ನು ಮತ್ತು ವಿವಿಧ ಅಭ್ಯಾಸ ವಿಷಯಗಳಿಗೆ ಪೂರಕವಾಗಿ ಉಪನ್ಯಾಸ, ಚರ್ಚೆ ಮತ್ತು ಸ್ಲೈಡ್ ಶೋ ಇತ್ಯಾದಿ ಹಲವಾರು ಕಾರ್ಯಕ್ರಮಗಳನ್ನು ನೀಡಿ ಅಲ್ಲಿನ ವಿದ್ಯಾರ್ಥಿಗಳ ಪ್ರಗತಿಗೂ ಸಹ ಕಾರಣರಾಗಿದ್ದಾರೆ. ಇಂತಹ ವಿಶಿಷ್ಟ ವ್ಯಕ್ತಿತ್ವದ ಹಿರೇಗೌಡರ ಅವರು ರಚಿಸಿರುವ ಕಲಾಕೃತಿಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ವಿಭಾಗಿಸಿಕೊಂಡು ಅವುಗಳನ್ನು ವಿವರವಾಗಿ ಪ್ರತ್ಯೇಕವಾದ ಅಧ್ಯಾಯಗಳಲ್ಲಿ ಅಧ್ಯಯನ ಮಾಡಲಾಗುವುದು.

**ಭಾಗ ೧. ರೇಖಾಚಿತ್ರಗಳ ವರ್ಗೀಕರಣ**

೧. **ಭಾವಚಿತ್ರಗಳು** (ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ)

೧:೧. ಪೆನ್ಸಿಲ್

೧:೨. ಶಾಯಿ

೧:೩. ಕ್ರೆಯಾನ್

೨. **ಪೂರ್ಣಭಾವಚಿತ್ರಗಳು** (ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ)

೨:೧. ಶಾಯಿ

೩. **ಪ್ರಕೃತಿಚಿತ್ರಗಳು**

೩:೧. ಪೆನ್ಸಿಲ್

೩:೨. ಶಾಯಿ

೩:೩. ಕ್ರೆಯಾನ್

೪. **ಶಿಲ್ಪರೇಖಾಚಿತ್ರಗಳು**

೪:೧. ಶಾಯಿ

೪:೨. ಕ್ರೆಯಾನ್

೫. **ಆಧುನಿಕ ನೆಲೆಯ ರೇಖಾಚಿತ್ರಗಳು**

೫.೧. ಪೆನ್ಸಿಲ್

೫:೨. ಶಾಯಿ

**ಭಾಗ ೨. ವರ್ಣಚಿತ್ರಗಳ ವರ್ಗೀಕರಣ**

೧. **ಭಾವಚಿತ್ರ**

೧:೧. ಜಲವರ್ಣ

೧:೨. ತೈಲವರ್ಣ

೨. **ಪೂರ್ಣಭಾವಚಿತ್ರಗಳು** (ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ)

೨:೧. ಜಲವರ್ಣ

೨:೨. ತೈಲವರ್ಣ

೩. **ಪ್ರಕೃತಿ ಚಿತ್ರಗಳು**

೩:೧. ಜಲವರ್ಣ

೩:೨. ಅಕ್ರಿಲಿಕ್ ವರ್ಣ

೩:೩. ತೈಲವರ್ಣ

೩:೪. ಮಿಶ್ರ ಮಾಧ್ಯಮ

೪. **ಶಿಲ್ಪವರ್ಣಚಿತ್ರಗಳು**

೪:೧. ಜಲವರ್ಣ

೪:೨. ಇಂಕ್

೪:೩. ತೈಲವರ್ಣ

೫. **ಆಧುನಿಕ ನೆಲೆಯ ವರ್ಣಚಿತ್ರಗಳು**

೫:೧. ಅಕ್ರಿಲಿಕ್ ವರ್ಣ

೫:೨. ಇಂಕ್

೫:೩. ತೈಲವರ್ಣ (ಆಧುನಿಕ, ನೈಜ, ಧಾರ್ಮಿಕ ಚಿತ್ರಗಳು)

೫:೪. ಡ್ರೈ ಪೇಸ್ಟಲ್

೫:೫. ಮಿಶ್ರ ಮಾಧ್ಯಮ

**ಭಾಗ ೩. ಭಿತ್ತಿಚಿತ್ರ/ಶಿಲ್ಪ ಮತ್ತು ಶಿಲ್ಪಗಳ ವರ್ಗೀಕರಣ**

೧. **ಭಿತ್ತಿಚಿತ್ರಗಳು**

೧:೧. ಎಕ್ರಿಲಿಕ್

೧:೨. ಪೋಸ್ಟರ್

೨. **ಭಿತ್ತಿಶಿಲ್ಪಗಳು**

೨:೧. ಸುಡಾವೆ ಮಣ್ಣು

೨:೨. ಮೆಟಲ್

೨:೩. ಸಿಮೆಂಟ್

೩. ಶಿಲ್ಪಗಳು

೩:೧. ಸಿಮೆಂಟ್

೪. ಸ್ತಬ್ಧಚಿತ್ರಗಳು

ಈ ಮೇಲಿನ ವಿಭಾಗದಂತೆ ಚಿತ್ರಗಳನ್ನು ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗುವುದು.

********



ಅಧ್ಯಾಯ : ಮೂರು

# ವಿ.ಬಿ.ಹಿರೇಗೌಡರ : ರೇಖಾಚಿತ್ರಗಳು

ವಿಷ್ಣು ಧರ್ಮೋತ್ತರ ಪುರಾಣದಲ್ಲಿ "ರೇಖಾಂ ಪ್ರಶಂಸತಾಚಾರ್ಯಃ"[೧] ಎನ್ನುವ ಸಂಸ್ಕೃತ ಮಾತೊಂದು ಇದೆ. ದೃಶ್ಯಕಲಾವಿದನ ಪ್ರಮಿತಿಯನ್ನು ಅಳೆಯಲು ಅವನು ಮೂಡಿಸಿರುವ ರೇಖೆಗಳೇ ಸಾಕು. ರೇಖೆಗಳು ದೃಶ್ಯಕಲೆಯ ತಾಯಿ ಬೇರು ಇದ್ದಂತೆ. ರೇಖೆಗಳೇ ಚಿತ್ರ, ಶಿಲ್ಪ, ವಾಸ್ತುಶಿಲ್ಪಕ್ಕೆ ಮೂಲ. ಚಿತ್ರವೊಂದರ ನಿರ್ಮಾಣ ರೇಖೆಯಿಂದ ಮೊದಲ್ಗೊಂಡು ವರ್ಣಲೇಪನವಾದ ಮೇಲೂ ತನ್ನ ಅಸ್ತಿತ್ವವನ್ನು ಸದಾಕಾಲ ಕಾಪಿಟ್ಟುಕೊಂಡಿರುತ್ತದೆ.

ರೇಖೆ ಮಾನವ ಇತಿಹಾಸದಷ್ಟೇ ಪ್ರಾಚೀನವಾದುದು. 'ಗೆರೆ ರೇಖೆಯಕ್ಕು' ಎಂದಿದ್ದಾನೆ. ಮಂಗರಾಜ ತನ್ನ ನಿಘಂಟಿನಲ್ಲಿ.[೨] ಮಾನವ ಉಗಮದೊಂದಿಗೆ ರೇಖೆಯೂ ಉಗಮವಾಗಿರುವುದು. ರೇಖೆಗಳಿಲ್ಲದ ಮಾಧ್ಯಮವಿಲ್ಲ. ಈ ಹಿನ್ನೆಲೆಯಲ್ಲಿ ಕಲಾವಿದನೋರ್ವನ ಬೌದ್ಧಿಕ ಶ್ರಮ, ದೃಶ್ಯಪ್ರಜ್ಞೆ ಅನಾವರಣಗೊಳ್ಳುವುದೇ ರೇಖಾಚಿತ್ರಗಳ ಮೂಲಕ ಎನ್ನುವುದು ಇಂದಿನ ಸಂದರ್ಭದಲ್ಲಿ ಮಹತ್ವ ಕಳೆದುಕೊಳ್ಳುವ ಆತಂಕ ಕಲಾಶಿಕ್ಷಣ ಕ್ಷೇತ್ರವನ್ನು ಬಾಧಿಸತೊಡಗಿರುವುದು ದಿಟ. ಏಕೆಂದರೆ ಹಿರೇಗೌಡರು ಹೇಳುವಂತೆ ಇಂದಿನ ಕಲಾವಿದ್ಯಾರ್ಥಿಗಳಲ್ಲಿ ಅಷ್ಟೇ ಏಕೆ ಹಿರಿಯ ತಲೆಮಾರಿನ ಕಲಾವಿದರಲ್ಲೂ ಕೂಡ ರೇಖಾಚಿತ್ರ ಮಾಧ್ಯಮ ಅವಜ್ಞೆಗೆ ಒಳಗಾಗಿದೆ. ಅದಕ್ಕೆ ಕಾರಣಗಳನ್ನು ಹುಡುಕತೊಡಗಿದಾಗ ಆಶ್ಚರ್ಯವೆನಿಸುವ ಸಂಗತಿಗಳು ಕಲಾಕ್ಷೇತ್ರವನ್ನು ದಿಗ್ಭ್ರಮೆಗೊಳಿಸುತ್ತವೆ. ಮೂಲವಾಗಿ ರೇಖಾಚಿತ್ರಗಳಿಗೆ ಮಾರುಕಟ್ಟೆಯ ಬೆಂಬಲವಿಲ್ಲದಿರುವುದು ಒಂದು ಕಾರಣವಾದರೆ, ಎರಡನೆಯದು ಜನರ ಮಾನಸದಲ್ಲಿ ವರ್ಣಚಿತ್ರಕ್ಕೆ ಇರುವಷ್ಟು ಮಾನ್ಯತೆ ರೇಖಾ ಚಿತ್ರಕ್ಕೆ ಇರದೇ ಇರುವುದು ಕೂಡ ಕಾರಣವಾಗಿದೆ. ಇವೆರಡೂ ಅಂಶಗಳು ವೃತ್ತಿಪರತೆಗೆ ಸಂಬಂಧಪಟ್ಟಿದ್ದರೂ ಕಲಾ ವಿದ್ಯಾರ್ಥಿಗಳು ತಮ್ಮ ಅಧ್ಯಯನ ಸಂದರ್ಭದಲ್ಲಿಯೇ ರೇಖಾಚಿತ್ರವನ್ನು ಅವಜ್ಞೆಗೊಳಪಡಿಸಿ, ಕೇವಲ ವರ್ಣಚಿತ್ರ ರಚನೆಗೆ ಹೆಚ್ಚು

---
೦೧. ಬಿ.ವಿ.ಕೆ.ಶಾಸ್ತ್ರೀ (ಸಂ) : ರೇಖಾಚಿತ್ರ, ಪುಟ V
೦೨. -ಅದೇ-

ಆಸ್ಥೆಯನ್ನು ತೋರ್ಪಡಿಸುವ ಬಗೆಯಿಂದ ಇಂದು ದೇಶದಲ್ಲಿ ರೇಖಾ ಚಿತ್ರಕಲಾವಿದರು ಅಪರೂಪವಾಗುತ್ತಿದ್ದಾರೆ.

ಈ ಆರೋಪಕ್ಕೆ ಹೊರತಾಗಿರುವರು ವಿ.ಬಿ.ಹಿರೇಗೌಡರು. ಕರ್ನಾಟಕದ ಕೇಲವೇ ಕೆಲವು ರೇಖಾಚಿತ್ರಕಾರರಲ್ಲಿ ಇವರೂ ಕೂಡ ಒಬ್ಬರು. ಅಷ್ಟೇ ಅಲ್ಲದೇ ಒಬ್ಬ ವರ್ಣಚಿತ್ರಕಾರರಾಗಿಯೂ ನಮ್ಮ ನಡುವೆ ಗೋಚರಿಸುತ್ತಾರೆ. ಇವರ ರೇಖಾಚಿತ್ರಗಳಲ್ಲಿ ಕಾಣುವ ತನ್ಮಯತೆ, ಲಾಲಿತ್ಯ, ಬಹು ಛಾಯೆಗಳು ಅವರ ವರ್ಣಚಿತ್ರಗಳಲ್ಲೂ ಹೇರಳವಾಗಿ ಗೋಚರವಾಗುವ ಬಗೆ ಅನೂಹ್ಯವಾದುದು. ಇದರಿಂದಾಗಿಯೇ ಹಿರೇಗೌಡರು ಕನ್ನಡ ಕಲಾವಿದರ ಮಧ್ಯೆ ವಿಶಿಷ್ಟ ವ್ಯಕ್ತಿತ್ವದ ಕಲಾವಿದರಾಗಿ, ಕಲಾಶಿಕ್ಷಕರಾಗಿ, ಆಡಳಿತಗಾರರಾಗಿ ಅಸ್ತಿತ್ವದಲ್ಲಿದ್ದಾರೆ.

ಆಕ್ಸ್‌ಫರ್ಡ್ ಯೂನಿವರ್ಸಲ್ ಡಿಕ್ಷನರಿಯ ಪ್ರಕಾರ ರೇಖಾ ಚಿತ್ರಗಳೆಂದರೆ "ಲೇಖನಿ, ಪೆನ್ಸಿಲ್ ಅಥವಾ ಕ್ರೇಯಾನ್‌ನಿಂದ ರೂಪಿಸುವುದು" ಎಂದು ಹೇಳುತ್ತಾ, ಮುಂದೆ "ವರ್ಣ ಚಿತ್ರಣದಿಂದ ಭಿನ್ನವಾದ ರೀತಿಯಲ್ಲಿ ರೂಪಣೆ" ಎನ್ನುತ್ತದೆ.[೩] ಹೀಗೆ ಲೇಖನಿ, ಪೆನ್ಸಿಲ್, ಅಥವಾ ಕ್ರೇಯಾನ್‌ನಿಂದ ಸಾವಿರಾರು ರೇಖಾಚಿತ್ರಗಳನ್ನು ರಚಿಸಿರುವ ಹಿರೇಗೌಡರು ವರ್ಣಚಿತ್ರಗಳಿಗಿಂತ ಹೆಚ್ಚು ಸಂಖ್ಯೆಯಲ್ಲಿ ನಿರಂತರವಾಗಿ ರಚಿಸಿದ್ದು ರೇಖಾ ಚಿತ್ರಗಳು. ಕೇವಲ ರೇಖಾಚಿತ್ರಗಳ ಕುರಿತೇ ಪ್ರತ್ಯೇಕವಾದ ಅಧ್ಯಯನ ನಡೆಸುವಷ್ಟು ಸಾಮಗ್ರಿ ಅವರಲ್ಲಿದ್ದರೂ ಈ ಅಧ್ಯಯನ ಒಂದು ಬಗೆಯಲ್ಲಿ ಕನ್ನೆ ನೆಲವಿದ್ದಂತೆ. ಹತ್ತಾರುಸಾವಿರ ರೇಖಾಚಿತ್ರಗಳಲ್ಲಿ ಕೆಲವೇ ಕೆಲವು ರೇಖಾಚಿತ್ರಗಳನ್ನು ಆಯ್ದುಕೊಂಡು ಇಲ್ಲಿ ಅಧ್ಯಯನಕ್ಕೆ ಒಳಪಡಿಸುವ ಹಿನ್ನೆಲೆಯಲ್ಲಿ ಈ ಕೆಳಗಿನಂತೆ ವರ್ಗೀಕರಣ ಮಾಡಿಕೊಳ್ಳಲಾಗಿದೆ.

**ರೇಖಾಚಿತ್ರಗಳ ವರ್ಗೀಕರಣ**

**೧. ಭಾವಚಿತ್ರಗಳು**

೧:೧. ಪೆನ್ಸಿಲ್

೧:೨. ಶಾಯಿ

೧:೩. ಕ್ರೆಯಾನ್

**೨. ಪೂರ್ಣಭಾವಚಿತ್ರಗಳು**

೨:೧. ಶಾಯಿ

**೩. ಪ್ರಕೃತಿಚಿತ್ರಗಳು**

೩:೧. ಪೆನ್ಸಿಲ್

೩:೨. ಶಾಯಿ

೩:೩. ಕ್ರೆಯಾನ್

**೪. ಶಿಲ್ಪರೇಖಾಚಿತ್ರಗಳು**

೪:೧. ಶಾಯಿ

೪:೨. ಕ್ರೆಯಾನ್

**೫. ಆಧುನಿಕ ನೆಲೆಯ ರೇಖಾಚಿತ್ರಗಳು**

೫.೧. ಪೆನ್ಸಿಲ್ ೫:೨. ಶಾಯಿ

---

೦೩. ಜಿ.ಸು.ಕೃಷ್ಣಸೆಟ್ಟಿ : ಚಿತ್ರಚಿತ್ತ : ಪುಟ ೯

ಮೇಲಿನ ವರ್ಗೀಕರಣದಂತೆ ಹಿರೇಗೌಡರು ಬಹು ಮಾಧ್ಯಮದಲ್ಲಿ ರಚಿಸಿರುವ ರೇಖಾಚಿತ್ರಗಳನ್ನು ಕೇವಲ ಮಾಧ್ಯಮದ ದೃಷ್ಟಿಯಿಂದ ಅಧ್ಯಯನಗೈಯದೇ ರಚನಾ ವಿಧಾನ, ತಂತ್ರಗಾರಿಕೆ, ವಸ್ತು-ವಿಷಯ, ಉದ್ದೇಶ, ಪ್ರಾಕೃತಿಕ, ಸಾಮಾಜಿಕ, ಚಾರಿತ್ರಿಕ ಘಟನೆಗಳಿಗೆ ಅಥವಾ ಸ್ಥಳಗಳಿಗೆ ಹಿರೇಗೌಡರು ತಮ್ಮ ತುಡಿತಗಳಿಗೆ ಹೇಗೆ ಮೂರ್ತರೂಪ ನೀಡಿದ್ದಾರೆ ಎನ್ನುವುದನ್ನು ಕೂಡ ಇಲ್ಲಿ ಒರೆಗೆ ಹಚ್ಚಲಾಗಿದೆ. ತನ್ಮೂಲಕ ಹಿರೇಗೌಡರ ದೃಶ್ಯ ಪ್ರಕ್ರಿಯೆ, ಪ್ರಜ್ಞೆಯ ಮತ್ತು ಅಭಿವ್ಯಕ್ತಿಸುವ ಬಗೆಗಳನ್ನು, ಹಾಗೂ ಕಲಾಕೃತಿಯ ಕುರಿತು ಅವರದೇ ಅಭಿಪ್ರಾಯಗಳೊಂದಿಗೆ, ಸಂಶೋಧನಾತ್ಮಕವಾಗಿಯೂ ಗಂಭೀರವಾಗಿ ಅಧ್ಯಯನ ಮಾಡಲಾಗಿದೆ.

********

ಭಾಗ ೧. ಭಾವಚಿತ್ರಗಳು

ಭಾವಚಿತ್ರಕಲೆಯ ಚರಿತ್ರೆ ಬಹಳ ಪುರಾತನವಾದದು. ಅತ್ಯಂತ ಪ್ರಾಚೀನ ಅಂದರೆ ಪ್ರಾಗೈತಿಹಾಸಿಕ ಸಂದರ್ಭದಲ್ಲಿಯೇ ಆದಿ ಮಾನವರ, ಪ್ರಾಣಿಗಳ ಪೂರ್ಣ ಚಿತ್ರಗಳೊಂದಿಗೆ ಭಾವಚಿತ್ರಗಳನ್ನು ರಚಿಸಿ ತನ್ನ ಮನದ ಉತ್ಕಟವಾದ ಭಾವಗಳನ್ನು ಪ್ರಕಟಿಸಿರುವುದು ಜನಜನಿತ. ನಂತರದ ಸಂದರ್ಭದಲ್ಲಿ ನಾಗರಿಕತೆ ಹಂತ ಹಂತವಾಗಿ ಸ್ಪಷ್ಟತೆಯತ್ತ ಸಾಗಿದಾಗ ಭಾವಚಿತ್ರ ಅನೇಕ ಮಾಧ್ಯಮಗಳಲ್ಲಿ ಪ್ರಕಟವಾಗಿರುವುದು ನಮ್ಮ ಚರಿತ್ರೆಯ ಪುಟಗಳನ್ನು ತೆರೆದಾಗ ಭಾವಚಿತ್ರದ ಮಹತ್ವ ಗೊತ್ತಾಗುತ್ತದೆ. ಉದಾಹರಣೆಗೆ ಸಿಂಧೂ, ಹರಪ್ಪಾ-ಮೆಹೆಂಜೋದಾರ ನಾಗರಿಕತೆಗಳಲ್ಲಿ ಆವೆ ಮಣ್ಣಿನಲ್ಲಿ ಭಾವಚಿತ್ರಗಳ ರಚನೆಗಳನ್ನು ಕಾಣಬಹುದಾಗಿದೆ. ನಂತರದ ಕಾಲಮಾನಗಳಲ್ಲಿ ಭಾವಚಿತ್ರ ಧಾರ್ಮಿಕ, ಸಾಮಾಜಿಕ ಐತಿಹಾಸಿಕ ಇನ್ನೂ ಮುಂತಾದ ನೆಲೆಗಳಲ್ಲಿ ಅನಿವಾರ್ಯ ದೃಶ್ಯಾತ್ಮಕ ಪ್ರಕ್ರಿಯೆಯಾಗಿ ರೂಪಣಗೊಂಡ ಬಗೆ ಅನೂಹ್ಯವಾದುದು.

ಒಂದು ಕಾಲದಲ್ಲಿ ರಾಜ ಮಹಾರಾಜರಿಗಷ್ಟೆ ದಕ್ಕಬಹುದಾಗಿದ್ದ ಭಾವಚಿತ್ರಗಳು, ಕಾಲಕ್ರಮೇಣ ಯಾಂತ್ರೀಕರಣಗೊಂಡ ಮೇಲೆ ಜನಸಾಮಾನ್ಯರಿಗೂ ಕೈಗೆಟಕುವ ಒಂದು ವಾಣಿಜ್ಯ ಕಲೆಯಾಗಿ ರೂಪಣಗೊಂಡು ತನ್ನದೇಯಾದ ಪ್ರತ್ಯೇಕ ಅಸ್ತಿತ್ವವನ್ನು ಕಂಡುಕೊಂಡರೆ, ಕಲಾವಿದರನೇಕರಿಗೆ ಅಧ್ಯಯನ, ಹವ್ಯಾಸ ಇನ್ನಿತರ ನೆಲೆಗಳ ಕಲಾಕೌಶಲ್ಯವಾಗಿದೆ.

ಭಾವಚಿತ್ರವೆಂದರೆ ಕೇವಲ ಚಿತ್ರವಾಗದೇ ಆ ವ್ಯಕ್ತಿಯ ಭಾವ ಸ್ಪಷ್ಟವಾಗಿ ಪ್ರಕಟವಾದಾಗ ಮಾತ್ರ 'ಭಾವಚಿತ್ರ'ವಾಗುತ್ತದೆ. ಅಂತಹ ವಿಶಿಷ್ಟ ಭಾವಚಿತ್ರ/ಪೂರ್ಣಭಾವಚಿತ್ರಗಳನ್ನು ರೇಖಾಚಿತ್ರಗಳಲ್ಲಿ ಅಷ್ಟೇ ಅಲ್ಲದೇ ವರ್ಣಮಯವಾಗಿ ಚಿತ್ರಿಸಿದ ಹಿರೇಗೌಡರು ತಮ್ಮ ಬದುಕಿನುದ್ದಕ್ಕೂ ಸಾವಿರಾರು ಮನುಷ್ಯ ಭಾವಕ್ಕೆ ಸಂಬಂಧಿಸಿದ ಚಿತ್ರಗಳನ್ನು ರಚಿಸಿದ್ದರೂ ಅಧ್ಯಯನದ ವ್ಯಾಪ್ತಿಗೆ ತಕ್ಕಂತೆ ಪ್ರತಿ ಮಾಧ್ಯಮದಲ್ಲಿ ಕೆಲವೇ ಕೆಲವು ಭಾವಚಿತ್ರಗಳನ್ನು ಆಯ್ದುಕೊಂಡು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

೧.೧. ಪೆನ್ಸಿಲ್ ಮಾಧ್ಯಮ

**೧. ಜೋಳದರಾಶಿ ದೊಡ್ಡನಗೌಡರ (೧೯೭೯)**

ಕರ್ನಾಟಕ ಗಮಕ ಕಲಾಕ್ಷೇತ್ರದಲ್ಲಿ ದೊಡ್ಡ ಹೆಸರು ಮಾಡಿದವರು ಜೋಳದ ರಾಶಿ ದೊಡ್ಡನಗೌಡರು. ರಚನೆಗೊಂಡ ಭಾವಚಿತ್ರವನ್ನು ಗಮನಿಸಿದರೆ ಅವರ ಅಜಾನುಬಾಹು ಶರೀರದ ಕಲ್ಪನೆಯನ್ನು ತಕ್ಷಣಕ್ಕೆ ನೋಡುಗನಲ್ಲೂ ಒಡಮೂಡಿಸುವುದು ಉತ್ಪ್ರೇಕೆಯಲ್ಲ. ಶರೀರಕ್ಕೆ ತಕ್ಕ ಹಾಗೆ ಭಾವ ಚಹರೆಯನ್ನು ಸೆರೆಹಿಡಿಯುವುದು ಸುಲಭ ಕಾರ್ಯವಲ್ಲ. ಕಾಗದದ ಬಲಬದಿಯಲ್ಲಿ ಒಮ್ಮುಖದ ಭಾವವನ್ನು ಚಿತ್ರಿಸಿರುವ ಹಿರೇಗೌಡರು ಮುಖದ ಮೇಲಿನ ಸ್ನಾಯುಗಳ ಏರಿಳಿತಗಳನ್ನು ಪೂರಕ ದಿಕ್ಕಿನಲ್ಲಿಯೇ ರೇಖೆಗಳ ಮೂಲಕ ತೋರ್ಪಡಿಸಿರುವುದರಿಂದ ಭಾವಕ್ಕೆ ಜೀವ ಸಾಧ್ಯತೆ ಮೂಡಿದೆ. ಕೇಶ ವಿನ್ಯಾಸದಲ್ಲಿ ಹೆಚ್ಚಿನ ರೇಖೆಗಳ ಕಸರತ್ತು ತೋರ್ಪಡಿಸದೇ ಅಲ್ಪ ರೇಖೆಗಳಿಂದಲೇ ಸಜೀವ ಮೆರಗನ್ನು ನೀಡಿದ್ದಾರೆ. ಹಿನ್ನೆಲೆಯಲ್ಲಿ ಹಿರೇಗೌಡರ ಅತ್ಯಂತ ಆತ್ಮೀಯವೆನಿಸುವ ಪೆನ್ಸಿಲ್‌ನ ಹರಿವ ರೇಖೆಗಳು, ಆವುಗಳ ಮಧ್ಯೆ ನೆರಳನ್ನು ತುಂಬಿಸುವ ಬಗೆಯಲ್ಲಿ ರಚಿಸಿದ ರೇಖೆಗಳಿಂದ, ಅಷ್ಟೇ ಅಲ್ಲದೇ ಮಾನವ ಅಂಗರಚನಾ ಶಾಸ್ತ್ರದ ದೃಷ್ಟಿಯಿಂದ ಪಕ್ವಯುತವಾದ ರಚನೆ ಇಲ್ಲಿದೆ.

**೨. ಡಾ. ಕೆ. ಪಂಚಾಕ್ಷರಿ (೧೯೮೩)**

ರಂಗಕರ್ಮಿಗಳು ಮತ್ತು ವೃತ್ತಿಯಲ್ಲಿ ವೈದ್ಯರಾಗಿರುವ ಡಾ.ಕೆ.ಪಂಚಾಕ್ಷರಿಯವರು ಹಿರೇಗೌಡರ ಅತ್ಯಂತ ಸನಿಹದ ಗೆಳೆಯರು. ದೊಡ್ಡನಗೌಡರ ಚಿತ್ರದಲ್ಲಿರುವಂತೆ ಇಲ್ಲಿ ಹೆಚ್ಚು ರೇಖೆಗಳಿಲ್ಲ. ಅತ್ಯಂತ ಅಲ್ಪ ರೇಖೆಗಳಿಂದಲೇ ಭಾವ ಚೈತನ್ಯ ತುಂಬವ ಪರಿ ಇದೆ. ಕೆಲವೇ ಸಮಯದಲ್ಲಿ ರಚಿಸಲ್ಪಟ್ಟ ಈ ಚಿತ್ರ ಮುಕ್ಕಾಲು ಪಾಲು ಭಾವವನ್ನು ಕಾಗದದ ಎಡ ಪಾರ್ಶ್ವಕ್ಕೆ ಸಂಯೋಜಿಸಲಾಗಿದೆ. ಹಿನ್ನೆಲೆಯಲ್ಲಿ ಕಾಗದ ಅವಕಾಶವನ್ನು ಹಾಗೆಯೇ ಉಳಿಸಿಕೊಂಡರೂ ಸೂಕ್ತವಾದ ರಚನಾ ತಂತ್ರಗಾರಿಕೆಯನ್ನು ಹೊಂದಿದೆ.

**೩. ಡಾ. ಮಲ್ಲಿಕಾರ್ಜುನ ಮನ್ಸೂರ (೧೯೮೫)**

ಪದ್ಮವಿಭೂಷಣ ಗೌರವಕ್ಕೆ ಭಾಜನರಾದ, ಅಂತರಾಷ್ಟ್ರೀಯ ಮಟ್ಟದ ಹೆಸರಾಂತ ಹಿಂದೂಸ್ತಾನಿ ಗಾಯಕರಾದ ಡಾ. ಮಲ್ಲಿಕಾರ್ಜುನ ಮನ್ಸೂರರವರು ಸಂಗೀತ ಕಛೇರಿ ನೀಡುವಾಗ ಸೆರೆ ಹಿಡಿದ ಈ ಭಾವಚಿತ್ರವನ್ನು ಹಿರೇಗೌಡರು ಅತ್ಯಂತ ಸಲೀಸಾಗಿ ರಚಿಸಿದ್ದಾರೆ. ಛಾಯಾಗ್ರಹಣದಲ್ಲಿ ಮಾತ್ರ ಇಂತಹ ಚಿತ್ರವನ್ನು ಸೆರೆ ಹಿಡಿವ ಸಾಧ್ಯತೆಗಳನ್ನು ಹೊರತು ಪಡಿಸಿದರೆ ಕಲಾವಿದರನೇಕರು ಇಂತಹ ಚಲನಾತ್ಮಕ ಸಂದರ್ಭವನ್ನು ಸೆರೆ ಹಿಡಿಯುವದು ತುಂಬ ಅಪರೂಪವೆನ್ನಬಹುದು. ಏಕೆಂದರೆ ರೂಪದರ್ಶಿಯಲ್ಲಿ ಚಲನೆಯೇ ಪ್ರಮುಖವಾಗಿರುವುದುರಿಂದ ಸ್ಪಷ್ಟ ರೂಪವನ್ನು ಕ್ಯಾಮೆರಾದಂತೆ ಮಾನಸಿಕವಾಗಿ ಸೆರೆ ಹಿಡಿದು ಚಿತ್ರಿಸುವದಕ್ಕೆ ತುಂಬ ಅನುಭವ ಇರಬೇಕಾಗುತ್ತದೆ. ಅಂತಹ ಅನುಭವದಿಂದ ರಚಿತವಾದ ಈ ಕೃತಿಯಲ್ಲಿ ಮನ್ಸೂರರ ವೃದ್ಧಾಪ್ಯದ ಚಹರೆಗಳು ಅಲ್ಪ ರೇಖೆಗಳನ್ನು



೧. ಜೋಳದರಾಶಿ ದೊಡ್ಡನಗೌಡರ, ೧೯೭೯

೨. ಡಾ.ಕೆ.ಪಂಚಾಕ್ಷರಿ, ೧೯೮೩



೩. ಡಾ.ಮಲ್ಲಿಕಾರ್ಜುನ ಮನ್ಸೂರ
೧೯೮೫

ಸ್ಪರ್ಶಿಸುವುದರ ಮುಖೇನ ಚಿತ್ರಕ್ಕೊಂದು ಸ್ಪಷ್ಟ ಭಾವ ದೊರಕಿದೆ. ಚಿತ್ರ ಚೌಕಟ್ಟಿನೊಳಗೆ ಮನ್ಸೂರರ ಸ್ವರದ ಆಳವನ್ನು, ತರಂಗವನ್ನು ಸೂಚಿಸುವಂತೆ ಅವರ ಬಲಗೈ ಹಸ್ತದ ಬೆರಳ ರಚನೆ ಚಿತ್ರಕ್ಕೆ ಸಾಕಷ್ಟು ಬೆಂಬಲವನ್ನು ನೀಡಿದೆ. ಅದು ರಚಿತವಾಗದಿದ್ದರೆ ಮನ್ಸೂರರ ಸಂಗೀತ ಕಛೇರಿಯ ಸಂದರ್ಭವನ್ನು ಸೂಚಿಸುತ್ತಿರಲಿಲ್ಲವೆಂಬುದು ದಿಟ. ಹಿನ್ನೆಲೆಯಲ್ಲಿ ತಂಬೂರಿ ಸಾಥ ನೀಡುತ್ತಿರುವ ಕಲಾವಿದೆಯೋರ್ವಳನ್ನು ಸೂಚನಾತ್ಮಕವಾಗಿ ತೋರಿಸುವುದರೊಂದಿಗೆ ಹಾಗೂ ಹಿನ್ನೆಲೆಯಲ್ಲಿ ಸಪ್ತಸ್ವರಗಳನ್ನು ದೃಶ್ಯಾತ್ಮಕವಾಗಿ ಸೂಚಿಸಬಹುದಾದ ಲಾಲಿತ್ಯಪೂರ್ಣವಾಗಿ ಹರಿವ ರೇಖೆಗಳು ಸಹ ಸಂಗೀತ ಕಛೇರಿಯ ಪರಿಸರವನ್ನು ಒಟ್ಟು ಚಿತ್ರದಲ್ಲಿ ಬಿಂಬಿಸುವ ಪ್ರಯತ್ನ ಫಲ ನೀಡಿದೆ.

**ಉಪಸಂಹಾರ**

ಇಲ್ಲಿ ಮೂರು ಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಹಿರೇಗೌಡರು ಪೆನ್ಸಿಲ್ ಮಾಧ್ಯಮದ ಭಾವರೇಖಾಚಿತ್ರಗಳನ್ನು ರಚಿಸುವಾಗ ಅನುಸರಿಸುವ ತಂತ್ರ ಅಕಾಡೆಮಿಕ್ ನೆಲೆಯದ್ದು. ಅಂದರೆ ಹಿರೇಗೌಡರ ಭಾವ ರೇಖಾಚಿತ್ರಗಳು ಕೇವಲ ಅವರ ವೈಯಕ್ತಿಕ ತೃಪ್ತಿಗೆ ಸೀಮಿತವಾಗದೇ ಮುಂದಿನ ಪೀಳಿಗೆಗೆ ಮಾರ್ಗದರ್ಶಿಯಾಗಬಲ್ಲ ಅರ್ಹತೆಗಳನ್ನು ಹೊಂದಿದ ಕೃತಿಗಳು ಎಂದು ಹೇಳಬಹುದು. ಸ್ಥಿರವಾದ ರೂಪದರ್ಶಿಗಳನ್ನು ಚಿತ್ರಿಸುವ ಕ್ರಮವೇ ಬೇರೆ, ಚಲನೆಯುಕ್ತ ರೂಪದರ್ಶಿಗಳನ್ನು ಅನುಸರಿಸುವ ತಂತ್ರವೇ ಬೇರೆ, ಈ ಎರಡೂ ಸಂದರ್ಭಗಳನ್ನು ಮಾನಸಿಕವಾಗಿ ಸ್ವೀಕರಿಸಿ ತಕ್ಷಣದ ದೃಶ್ಯಾತ್ಮಕ ಅಭಿವ್ಯಕ್ತಿ ಪ್ರತಿಕ್ರಯಿಸುವ, ಅದರಿಂದುಂಟಾ ಪರಿಣಾಮಗಳಿಗೆ ಇಲ್ಲಿನ ಮೂರು ಚಿತ್ರಗಳು ಉತ್ತಮ ಉದಾಹರಣೆ ಯಾಗಬಹುದಲ್ಲದೇ ಅನನ್ಯ ಭಾವವನ್ನು ಪ್ರಕಟಿಸುತ್ತವೆ.

********

೧:೨. ಶಾಯಿ ಮಾಧ್ಯಮ

ಹಿರೇಗೌಡರು ಪೆನ್ಸಿಲ್ ಮಾಧ್ಯಮವನ್ನು ದುಡಿಸಿಕೊಂಡು ಭಾವಚಿತ್ರಗಳನ್ನು ರಚಿಸಿದಂತೆ ಇಲ್ಲಿಯೂ ಕೂಡ ಶಾಯಿ ಮಾಧ್ಯಮವನ್ನು ಲೇಖನಿಯ ಮುಖೇನವಾಗಿ ಸಮರ್ಥವಾಗಿ ದುಡಿಸಿಕೊಂಡು ರಚಿಸಿದ ಬಹಳಷ್ಟು ಭಾವಚಿತ್ರಗಳುಂಟು. ಅಂತಹ ಕೆಲವಾರು ಭಾವಚಿತ್ರಗಳನ್ನು ಇಲ್ಲಿ ಆಯ್ಕೆ ಮಾಡಿಕೊಂಡು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

೧. ಪಂಡಿತ ಟಿ.ವಿ.ಚವ್ಹಾಣ (೧೯೮೧)

ಮಲ್ಲಿಕಾರ್ಜುನ ಮನ್ಸೂರರ ಭಾವಚಿತ್ರದಂತೆ ಇದೂ ಕೂಡ ಸಂಗೀತ ಕಛೇರಿ ನೀಡುತ್ತಿರುವ ಪಂಡಿತ ಟಿ.ವಿ.ಚವ್ಹಾಣರ ಭಾವಚಿತ್ರ. ಹಿಂದೂಸ್ತಾನಿ ಮೌಖಿಕ ಸಂಗೀತಕ್ಕೂ ಹಾಗೂ ಹಿಂದೂಸ್ತಾನಿ ಸಂಗೀತ ಪರಿಕರಗಳನ್ನು ಒಳಗೊಂಡ ಕಛೇರಿಗಳಿಗೆ ಅಂಗಾಂಗ ವ್ಯತ್ಯಾಸಗಳು ಕಂಡುಬರುತ್ತವೆ. ಅದನ್ನು ಈ ಚಿತ್ರದಲ್ಲಿ ಸ್ಪಷ್ಟವಾಗಿ ಮೊದಲ ಹಂತದಲ್ಲಿ ಗುರುತಿಸಬಹುದಾಗಿದ್ದು, ಅಂಗಾಂಗಗಳ ಚಲನಶೀಲತೆ ಅಲ್ಪವಾಗಿ ಇರುವುದರಿಂದ ಈ ಚಿತ್ರವನ್ನು ಸೆರೆಹಿಡಿಯುವುದು ಇದ್ದುದರಲ್ಲಿಯೇ ಸುಲಭವೆನ್ನಬಹುದೆಂಬ ಅಭಿಪ್ರಾಯವನ್ನು ದೃಶ್ಯಾತ್ಮಕವಾಗಿ ನೀಡಬಹುದಾಗಿದೆ. ಇನ್ನು ಎರಡನೆಯ ಹಂತದ್ದು ಚಿತ್ರ ರಚನೆಯ ಕುರಿತಂತೆ- ಇಲ್ಲಿ ಎಳೆಯಲ್ಪಟ್ಟ ಪ್ರತಿಯೊಂದು ಸಣ್ಣ-ಮುಟ್ಟ ರೇಖೆಗಳೂ ಸಹ ಬಹು ವೇಗದ ಬೀಸುಗಳನ್ನು ಹೊಂದಿದ್ದು, ಅಲ್ಪ ರೇಖೆಗಳಿಂದಲೇ ಈ ಚಿತ್ರ ಪೂರ್ಣಗೊಂಡು ಭಾವ ಸ್ಫುರಣವನ್ನು ಪ್ರಕಟಿಸಿದೆ. ಹಿರೇಗೌಡರ ಎಂದಿನ ಲಾಲಿತ್ಯ ಪೂರ್ಣ ರೇಖೆಗಳು ಹಿನ್ನೆಲೆಯಲ್ಲಿ ಹರಿದಾಡಿದ್ದು, ಕಾಗದದ ಮಧ್ಯ ಭಾಗಕ್ಕೆ ಸಂಯೋಜಿಸಲ್ಪಟ್ಟ ರೂಪದರ್ಶಿಯ ಅಂಗಾಂಗ ಪ್ರಬುದ್ಧತೆ ಈ ಚಿತ್ರದಲ್ಲಿ ಗೋಚರವಾಗುವ ಸತ್ಯ.



೧. ಪಂಡಿತ ಟಿ.ವಿ.ಚವ್ಹಾಣ, ೧೯೮೧




೨. ಬಾಲಕ, ೧೯೮೪




೩. ಪಿ.ಟಿ.ರೆಡ್ಡಿ, ೧೯೮೬



೪. ವಯೋವೃದ್ಧ, ೧೯೮೬

೨. ಬಾಲಕ, (೧೯೮೪)

ಭಾವಚಿತ್ರ ರಚನೆಗೆ ಬಹುತೇಕ ಕಲಾವಿದರ ಆಯ್ಕೆ ಸುಂದರ ಸ್ತ್ರೀ ಅಥವಾ ವಯಸ್ಕ ಪುರುಷ/ಮಹಿಳೆ. ಏಕೆಂದರೆ ರಚನಾ ಸಾಧ್ಯತೆ ಹೆಚ್ಚು. ಆದರೆ ಮಕ್ಕಳ ಚಿತ್ರವನ್ನು ರಚಿಸುವುದು ಕಷ್ಟ ಸಾಧ್ಯ. ಏಕೆಂದರೆ ದುಂಡು ಮೊಗವನ್ನು, ದೇಹದಲ್ಲಿ ಸ್ನಾಯುಗಳ ಮುಗ್ಧ ರಚನಾ ವಿನ್ಯಾಸವನ್ನು ಸೆರೆಹಿಡಿಯುವ ಕಲಾವಿದರನೇಕರು ಹಿಂದೇಟು ಹಾಕುವುದು ಜನಜನಿತ. ಆದರೆ ಹಿರೇಗೌಡರು ವಯಸ್ಕ ರೂಪದರ್ಶಿಗಳೊಂದಿಗೆ ಮಕ್ಕಳ ಭಾವಚಿತ್ರಗಳನ್ನು ಸಹ ರಚಿಸಿರುವುದಕ್ಕೆ ಈ ಚಿತ್ರ ಒಂದು ನಿದರ್ಶನ ಮಾತ್ರ. ಚವ್ಹಾಣರ ಭಾವಚಿತ್ರದಲ್ಲಿ ಕಡಿಮೆ ರೇಖೆಗಳು ಮೂಡಿದ್ದರೆ ಈ ಚಿತ್ರದಲ್ಲಿ ಬಹುರೇಖೆಗಳ ಸಾಂಗತ್ಯ ಭಾವದಲ್ಲಿದ್ದಂತೆ ಹಿನ್ನೆಲೆಯಲ್ಲೂ ಒಡಮೂಡಿವೆ. ಹಸನ್ಮುಖಿಯಾಗಿರುವ ಭಾವ, ಇದಕ್ಕೆ ಪೂರಕವಾಗಿ ಆರ್ಥಿಕವಾಗಿ ಕೆಳಸ್ತರದ ಕುಟುಂಬದ ಹುಡುಗ ಎಂಬ ಭಾವ ಬಾಲಕ ಧರಿಸಿರುವ ವೇಷಭೂಷಣ, ಕೇಶ ವಿನ್ಯಾಸ, ಮುಖಚಹರೆಯಲ್ಲಿ ಪ್ರಕಟವಾಗಿದೆ. ಹಿನ್ನೆಲೆಯಲ್ಲಿ 'ಮುತ್ತು' ಎಂಬ ಅಕ್ಷರ ವಿನ್ಯಾಸ, ಅಲ್ಲಿಂದ ಹೊರಟ ಗೌಡರ ಎಂದಿನ ಹಿನ್ನೆಲೆಯ ರೇಖಾ ಲಾಲಿತ್ಯ ಅನಂತದೆಡೆಗೆ ಸಾಗಿದೆ.

೩. ಪಿ.ಟಿ.ರೆಡ್ಡಿ, (೧೯೮೬)

ಹೈದರಾಬಾದಿನ ಹೆಸರಾಂತ ಕಲಾವಿದರಾದ ಪಿ.ಟಿ.ರೆಡ್ಡಿಯವರನ್ನು ಹಿರೇಗೌಡರ ತಮ್ಮ ಲೇಖನಿಯಲ್ಲಿ ದೃಶ್ಯಾತ್ಮಕವಾಗಿ ಕಂಡುಕೊಂಡ ಭಾವವಿದು. ಹಿಂದಿನ ಎರಡೂ ಚಿತ್ರಗಳಿಗಿಂತ ಈ ಭಾವಚಿತ್ರ ರಚನಾ ತಂತ್ರದ ದೃಷ್ಟಿಯಿಂದ ಭಿನ್ನವಾಗಿರುವುದನ್ನು ಇಲ್ಲಿನ ರೇಖೆಗಳು ಹರಿದಾಡಿದ ಬಗೆಯಲ್ಲಿ ಕಾಣಬಹುದಾಗಿದೆ. ಈ ಭಾವಚಿತ್ರದಲ್ಲಿ ನೆರಳಿನ ಭಾಗವನ್ನು ಪೂರ್ಣವಾಗಿ ರೇಖೆಗಳಿಂದ ಆವೃತ್ತಗೊಳಿಸುವ ಮತ್ತು ರೂಪದರ್ಶಿಯ ಪ್ರತಿಯೊಂದು ಭಾಗವನ್ನು ತುಂಬ ಸೂಕ್ಷ್ಮ ಕುಶಲತೆಯಿಂದ ರಚಿಸುವ ಆಸಕ್ತಿಯನ್ನು ಕಾಣಹುದಾಗಿದೆ. ಮುಖಭಾವದಲ್ಲಿ ರೆಡ್ಡಿಯವರ ವಯೋಮಾನವನ್ನು ಗುರುತಿಸಲು ಸುಕ್ಕುಗಳನ್ನು ಅತ್ಯಂತ ತನ್ಮಯತೆಯಿಂದ ರಚಿಸಿದಂತೆ ರೂಪದರ್ಶಿಯ ದೇಹಭಾಗದಲ್ಲಿ ಉಡುಪಿನಲ್ಲೂ ಸಹ ಅದೇ ತನ್ಮಯತೆಯನ್ನು ಕಾಯ್ದುಕೊಳ್ಳಲಾಗಿದೆ. ಹಿನ್ನೆಲೆಯಲ್ಲಿ ಷಟ್‌ಕೋನವುಳ್ಳ ಕಲಾವಿನ್ಯಾಸವೊಂದನ್ನು ಸೂಚ್ಯವಾಗಿ ಚಿತ್ರಿಸಿದ್ದು, ಎಂದಿನಂತೆ ಹಿರೇಗೌಡರ ರೇಖಾ ಲಾಲಿತ್ಯದ ಹರಿವು ಕಾಗದದ ಅವಕಾಶದ ಅಂಚಿಗೆ ತಲುಪುತ್ತದೆ.

೪. ವಯೋವೃದ್ಧ (೧೯೮೬)

ಆರ್ಥಿಕವಾಗಿ ಕೆಳಸ್ತರದ ವಯೋವೃದ್ಧನ ಭಾವಚಿತ್ರದಲ್ಲಿ ಪಿ.ಟಿ.ರೆಡ್ಡಿಯವರ ಭಾವಚಿತ್ರದಲ್ಲಿನ ರೇಖಾ ನಿರ್ವಹಣೆ ಇಲ್ಲಿಯೂ ಕೂಡ ಪುನರಾವರ್ತನೆಯಾಗಿದೆ. ಭಾವಸ್ಫುರಣೆಗೆ ಹೆಚ್ಚು ಒತ್ತು ನೀಡುವ ಕಾರಣವಾಗಿ ೯೦%ರಷ್ಟು ಭಾಗವನ್ನು ರೇಖೆಗಳಿಂದ ಆವೃತ್ತಗೊಳಿಸಿ, ಕೇವಲ ೧೦%ರಷ್ಟು ಬೆಳಕಿನ ಭಾಗವನ್ನು ತೋರಿಸಿದ್ದರೂ ವೃದ್ಧಾಪ್ಯದದಲ್ಲೂ ಸಮೃದ್ಧ ಜೀವನಾನಂದದ ಭಾವ ಇಲ್ಲಿ ಪ್ರಕಟಗೊಳ್ಳುತ್ತದೆ. ಅಷ್ಟದಿಕ್ಕುಗಳಿಗೂ ಹರಿದಾಡಿದ ಇಲ್ಲಿನ ರೇಖೆಗಳು ವೃದ್ಧಾಪ್ಯದ ಸುಕ್ಕುಗಳನ್ನು



೫. ಪಿ.ಆರ್.ರಾಜು, ೧೯೯೪



೬. ಶ್ರೀ ಪಂಡಿತಾರಾಧ್ಯ ಸ್ವಾಮಿಗಳು, ಸಾಣೇಹಳ್ಳಿ, ೧೯೯೨

ಸ್ಪಷ್ಟವಾಗಿಸಿವೆ. ಹಿನ್ನೆಲೆಯಲ್ಲಿ ಹಿರೇಗೌಡರ ಎಂದಿನ ರೇಖಾ ಲಾಲಿತ್ಯ ಇಲ್ಲಿ ಗೌಣವಾಗಿದ್ದರೂ ಕೂಡ ಅವಕಾಶ ಭಾವಚಿತ್ರಕ್ಕೆ ಪೂರಕವಾಗಿದೆ.

**೫. ಪಿ.ಆರ್.ರಾಜು** (೧೯೯೪)

ಹೈದರಾಬಾದಿನ ಹೆಸರಾಂತ ಹಿರಿಯ ಕಲಾವಿದರ ಭಾವಚಿತ್ರವಿದು. ರೆಡ್ಡಿಯವರ ಭಾವಚಿತ್ರದಲ್ಲಿನ ಸಂಯೋಜನಾ ಕ್ರಮಕ್ಕಿಂತ ಭಿನ್ನವಾದ, ಅಂದರೆ ಒಮ್ಮುಖದ ರಚನಾ ಕ್ರಮದಲ್ಲೂ ರಚನಾ ತಂತ್ರಗಾರಿಕೆ ಏಕರೂಪವಾಗಿದೆ. ಅತ್ಯಂತ ಅಲ್ಪ ರೇಖೆಗಳಿಂದಲೇ ಮುಖದಲ್ಲಿ ಭಾವ ಸ್ಫುರಣೆಗೆ ಒತ್ತು ನೀಡಲಾಗಿದೆ. ಕುತ್ತಿಗೆಯ ಭಾಗದಲ್ಲಿ ಹೆಚ್ಚು ದಟ್ಟ ಛಾಯೆಯನ್ನು ತೋರ್ಪಡಿಸಿದ್ದು, ಅದಕ್ಕೆ ವಿರುದ್ಧವಾಗಿ ಉಡುಪಿನಲ್ಲಿ ಸಂಕ್ಷಿಪ್ತ ನೆರಳಿನ ಛಾಯೆಯನ್ನು ರಚಿಸಲಾಗಿದೆ. ಹಿನ್ನೆಲೆಯ ಅವಕಾಶದಲ್ಲಿ ಯಾವುದೇ ಬಗೆಯ ವಿನ್ಯಾಸಗಳು ಮೂಡದೇ ಭಾವರೂಪದ ಸ್ಪಷ್ಟತೆಗೆ ಏಕಾಗ್ರತೆಯೂ ಒದಗಿಬಂದಿದೆ.

**೬. ಶ್ರೀ ಪಂಡಿತಾರಾಧ್ಯ ಸ್ವಾಮಿಗಳು, ಸಾಣೇಹಳ್ಳಿ** (೧೯೯೬)

ಲಲಿತಕಲೆಗಳ ಕುರಿತು ಅಪಾರ ಕಾಳಜಿವುಳ್ಳ ಸಾಣೇಹಳ್ಳಿಯ ಪಂಡಿತಾರಾಧ್ಯ ಶ್ರೀಗಳು ಕಾರ್ಯಕ್ರಮವೊಂದರ ವೇದಿಕೆಯಲ್ಲಿ ಆಸೀನರಾದ ಸಂದರ್ಭದಲ್ಲಿ ಹಿರೇಗೌಡರು ಸೆರೆಹಿಡಿದ ಭಾವಚಿತ್ರವಿದು. ಚಿತ್ರ ೪ರ ರಚನಾ ಕ್ರಮಕ್ಕಿಂತ ಭಿನ್ನವಾದ ಈ ಭಾವಚಿತ್ರ ಸರಳವಾದ ರಚನಾ ಕ್ರಮವನ್ನು ಹೊಂದಿರುವಂಥದು. ಮಗ್ನ ಭಾವ ಸ್ಫುರಣೆಯ ಹಿನ್ನೆಲೆಯಲ್ಲಿ ಸಂಕ್ಷಿಪ್ತವಾದ ರೇಖೆಗಳು ಅಲ್ಲಲ್ಲಿ ಸೂಚ್ಯವಾಗಿರುವುದರಿಂದ ಚಿತ್ರ ೪ರ ದಟ್ಟ ಛಾಯೆ ಇಲ್ಲಿಯೂ ಮೂಡಿದ್ದು, ಎಡಭಾಗದಿಂದ ಬಂದ ಬೆಳಕಿನ ಕಿರಣಗಳನ್ನು ಆಧರಿಸಿದ ಛಾಯೆಯಲ್ಲಿ ನೆರಳಿನ ಛಾಯೆಯನ್ನು ಕ್ರಮೇಣವಾಗಿ ಮಿಶ್ರ ಮಾಡಿದ ತಂತ್ರ ಇಲ್ಲಿದೆ. ಅಂಗಾಂಗಗಳು ಪ್ರಬುದ್ಧವಾಗಿ ಪ್ರಕಟಗೊಳ್ಳಲು ಬಾಹ್ಯ ರೇಖಾ ರಚನೆಯೊಂದಿಗೆ ಪ್ರಬುದ್ಧ ನಿರ್ಣಯವನ್ನು ಆಧರಿಸಿ ಲೇಪಿಸಲಾದ ನೆರಳಿನ ಕಾರ್ಯತಂತ್ರದಿಂದಾಗಿ ಈ ಚಿತ್ರ ಸಾತ್ವಿಕ ಭಾವವನ್ನು ಹೊಂದಿದೆ.

**೭. ಡಿ.ಕೆ.ಚೌಟ** (೨೦೦೩)

ಡಿ.ಕೆ.ಚೌಟ ಕರ್ನಾಟಕ ಚಿತ್ರಕಲಾ ಪರಿಷತ್‌ನ ಕಾರ್ಯದರ್ಶಿಗಳಾಗಿದ್ದ ಸಂದರ್ಭದಲ್ಲಿ ರಚಿತವಾದ ಈ ಚಿತ್ರ, ಚಿತ್ರ ೯ರ ರಚನಾ ಕ್ರಮಕ್ಕಿಂತ ಭಿನ್ನವಾದದ್ದು. ಅತ್ಯಂತ ಸರಳ, ಸಂಕ್ಷಿಪ್ತ ರೇಖೆಗಳಿಂದ ರಚಿತವಾದ ಒಮ್ಮುಖದ ನೆಲೆಯಲ್ಲಿ ಭಾವ ಸ್ಫುರಣಗೊಳಿಸುತ್ತಿರುವ ಈ ಚಿತ್ರದಲ್ಲಿ ರೇಖೆಗಳು ಲಾಲಿತ್ಯಪೂರ್ಣವಾಗಿ ಅಂಗಾಂಗ ಸೃಷ್ಟಿಸಿವೆ. ಮುಖ ಮತ್ತು ದೇಹದ ಮೇಲೆ ನೆರಳಿನ ಛಾಯೆಯನ್ನು ಕೇವಲ ಒಂದೊಂದೆ ರೇಖೆಯನ್ನು ದುಡಿಸಿಕೊಳ್ಳುವುದರ ಮುಖೇನ ಸೂಚ್ಯ ರಚನಾ ತಂತ್ರಗಾರಿಕೆಯನ್ನು ಈ ಭಾವಚಿತ್ರದಲ್ಲಿ ಕಾಣಬಹುದು.



೭. ಡಿ.ಕೆ.ಚೌಟ, ೨೦೦೩



೮. ವಯೋವೃದ್ಧ, ೨೦೦೫



೯. ವಯೋವೃದ್ಧ, ೨೦೦೫



೧೦. ಸಾಲುಮರದ ತಿಮ್ಮಕ್ಕ, ೨೦೦೫



೧೧. ವಯೋವೃದ್ಧ, ೨೦೦೬

೮. ವಯೋವೃದ್ಧ (೨೦೦೫)

ಅತ್ಯಂತ ವಿವರವಾಗಿ ಚಿತ್ರಿಸಿರುವ ಈ ಭಾವಚಿತ್ರದಲ್ಲಿ ವೃದ್ಧನ ಮುಖದ ಲಕ್ಷಣಗಳನ್ನು ಸೂಕ್ಷವಾಗಿ ಚಿತ್ರಿಸಿದ್ದು, ಟೊಪ್ಪಿಗೆ, ಚಸ್ಮಾ, ಇವೆಲ್ಲವುಗಳನ್ನು ನೆರಳು ಬೆಳಕಿನ ಸ್ಪಷ್ಟಛಾಯೆಗಳ ಮುಖಾಂತರ ರೂಪುಗೊಂಡಿವೆ. ಅದಕ್ಕೆ ಪೂರಕವಾಗಿ ಹಿರೇಗೌಡರು ಭಾವಚಹರೆಯನ್ನು ತುಂಬ ಸೂಕ್ಷ್ಮ ನೆರಳು ಬೆಳಕುಗಳ ಸೆಳಕುಗಳ ಸಹಾಯದಿಂದ ಚಿತ್ರಿಸಿದ್ದಾರೆ. ತಕ್ಷಣದ ನೋಟಕ್ಕೆ ನೆರಳಿನ ಛಾಯೆಯಲ್ಲಿ ರೂಪಗೊಂಡ ಭಾವಚಿತ್ರದಂತೆ ಕಂಡು ಬಂದರೂ ಅಲ್ಲಲ್ಲಿ ಪ್ರಖರ ಬೆಳಕಿನ ಸ್ಪರ್ಶಗಳು ಮುಖದಲ್ಲಿ ಸ್ನಾಯುಗಳನ್ನು, ಚರ್ಮದ ಉಬ್ಬುತಗ್ಗುಗಳನ್ನು ಸ್ಪಷ್ಟೀಕರಣಗೊಳಿಸಿ ಭಾವಚಿತ್ರವನ್ನು ಆಕರ್ಷಕವಾಗಿ ರೂಪಿಸಿದೆ.

೯. ವಯೋವೃದ್ಧ, (೨೦೦೫)

ಇದೊಂದು ಭಾವಚಿತ್ರವಾದರೂ ಭಾವದ ಹಿಂದೆ ಒಂದು ಘಟನೆಯನ್ನು ವಿವರಿಸುವಂತೆ ಸಂಯೋಜಿತಗೊಂಡು ರಚನೆಯಾಗಿದೆ. ಅಷ್ಟದಿಕ್ಕುಗಳಲ್ಲಿ ಒಂದರ ಮೇಲೊಂದು ಹರಿದಾಡಿದ ರೇಖೆಗಳು ಭಾವಸ್ಫುರಣೆಗೆ ಅನುವಾಗುವಂತೆ ಅಲ್ಲಲ್ಲಿ ವೃದ್ಧಾಪ್ಯದ ಚರ್ಮದ ಸುಕ್ಕುಗಳು ಪ್ರಮಾಣ ಬದ್ಧವಾಗಿ ಮೂಡಿವೆ. ಆದರೆ ಕೇಶ ವಿನ್ಯಾಸದಲ್ಲಿ ಅತ್ಯಂತ ಸೂಚ್ಯವಾಗಿ ಅಲ್ಪ ರೇಖೆಗಳನ್ನು ಮೂಡಿಸುವುದರೊಂದಿಗೆ ವೃದ್ಧನ ಕೇಶಗಳು ಶ್ವೇತ ವರ್ಣದವು ಎಂಬುದನ್ನು ಸಹ ಇಲ್ಲಿ ತೋರ್ಪಡಿಸಲು ಹಿರೇಗೌಡರು ಯತ್ನಿಸಿದ್ದು ಕಂಡುಬರುತ್ತದೆ. ಬಲಪಾರ್ಶ್ವದ ಹಿನ್ನೆಲೆಯ ಅವಕಾಶದಲ್ಲಿ ವೃದ್ಧನ ಭೂತಕಾಲದ ಬದುಕಿನ ನಡೆಯನ್ನು ಸೂಚಿಸುವ ಹೆಜ್ಜೆಗಳು ದಟ್ಟಛಾಯೆಯ ಮಧ್ಯೆ ಸೂಚ್ಯವಾಗಿ ಚಿತ್ರಿಸಲ್ಪಟ್ಟಿವೆ. ಹೀಗಾಗಿ ಇತರ ಭಾವ ಚಿತ್ರಗಳಿಗಿಂತ ಈ ಭಾವಚಿತ್ರ ಭೂತಕಾಲದ ಘಟನಾತ್ಮಕ ವಿವರವನ್ನು ಪೂರ್ಣವಾಗಿಲ್ಲದಿದ್ದರೂ ಅಲ್ಪವಾದರೂ ಪ್ರಕಟಿಸುವ ಆಶಯವನ್ನು ಹೊಂದಿದೆ.

೧೦. ಸಾಲುಮರದ ತಿಮ್ಮಕ್ಕ (೨೦೦೫)

ಸಾಲು ಮರದ ತಿಮ್ಮಕ್ಕನ ಪ್ರಕೃತಿ ಪ್ರಿಯತೆ ಹಿರೇಗೌಡರ ಲೇಖನಿಯಲ್ಲಿ ದೃಶ್ಯ ಕಾವ್ಯವಾಗಿ ಮೂಡಿದ ಒಂದು ಅಪರೂಪದ ಚಿತ್ರ. ಸಾಲುಮರಗಳನ್ನು ನೆಟ್ಟು ಪೋಷಿಸಿದ ಬಡ ಜೀವ (ಆರ್ಥಿಕವಾಗಿ) ಆದರೆ ಹಚ್ಚ ಹಸಿರು ಮನಸ್ಸಿನ ಸಾಲು ಮರದ ತಿಮ್ಮಕ್ಕನ ಭಾವದಲ್ಲಿ ಬಸವಳಿದ, ಜೊತೆಗೆ ಸಂತೃಪ್ತಿಯೂ ಕೂಡ ಪ್ರಕಟವಾಗಲು ಇಲ್ಲಿ ರೇಖೆಗಳು ಅಷ್ಟ ದಿಕ್ಕುಗಳಲ್ಲಿ ಹರಿದಾಡಿವೆ. ಸ್ನಾಯುಗಳ ವಿವರಣೆಯಲ್ಲಿ ಹಿರೇಗೌಡರು ರೇಖೆಗಳನ್ನು ವಕ್ರ-ವಕ್ರವಾಗಿ ಬಳಸುವ ಬಗೆಯಿಂದ ಇಂತಹ ಭಾವ ಸ್ಫುರಣ ಸಾಧ್ಯತೆಯನ್ನು ಗುರುತಿಸಬಹುದು. ಅವಳ ಉಡುಪಿನಲ್ಲೂ ವಿವಿಧ ಬಗೆಯ ವಿನ್ಯಾಸಗಳನ್ನು ಮೂಡಿಸಿರುವ ಹಿರೇಗೌಡರು, ಹಿನ್ನೆಲೆಯ ಅವಕಾಶದಲ್ಲಿ ತಿಮ್ಮಕ್ಕನ ಸಾರ್ಥಕ ಬದುಕಿನ ಮಹೂರ್ತದ ಕೆಲವು ಭೌತಿಕ ರಚನೆಗಳನ್ನು ಸೂಚ್ಯವಾಗಿ, ಜೊತೆಗೆ ಅವರ ಎಂದಿನ ರೇಖಾ ಲಾಲಿತ್ಯದ ಹರಿವುಗಳನ್ನು ಸಂದರ್ಭೋಚಿತವಾಗಿ ದುಡಿಸಿಕೊಳ್ಳುವುದರ ಮೂಲಕ ಚಿತ್ರಕ್ಕೆ ಭಾವ ತುಂಬುವ ಸಾರ್ಥಕ ಭಾವವನ್ನೂ ಹೊಂದಿರುವುದನ್ನು ಕಾಣಬಹುದು.

೧೧. ವಯೋವೃದ್ಧ, (೨೦೦೬)

ಕಾಗದದ ಬಹು ಭಾಗವನ್ನು ಆಕ್ರಮಿಸಿಕೊಂಡಿರುವ, ಒಮ್ಮುಖವಾಗಿರುವ, ಜೀವಕಳೆಯನ್ನು ತುಂಬಿಕೊಂಡಿರುವ ಈ ಭಾವಚಿತ್ರದಲ್ಲಿ ಚಿತ್ರ ೯ರಂತೆ ರಚನಾ ಕ್ರಮವಿಲ್ಲ. ಸೂಕ್ಷ್ಮಾತಿಸೂಕ್ಷ್ಮ ಮತ್ತು ಸೂಚ್ಯವಾದ, ನಯವಾದ ರೇಖೆಗಳನ್ನು ಸಂದರ್ಭೋಚಿತವಾಗಿ ದುಡಿಸಿಕೊಂಡ ತಂತ್ರಗಾರಿಕೆ ಇಲ್ಲಿದೆ. ಒಂದು ಬಗೆಯಲ್ಲಿ ಸಾಧಕನ/ಯೋಗಿಯ ಭಾವವನ್ನು ಹೊಂದಿರುವ ಈ ಚಿತ್ರದಲ್ಲಿ ನೇತ್ರದ ಬಳಿ. ಮತ್ತು ಮೂಗಿನ ಬಳಿ ಮೇಲೆ ತಿಳಿಸಿದಂತೆ ಸೂಕ್ಷ್ಮ ರೇಖೆಗಳನ್ನು ಕಾಣಬಹುದಾಗಿದೆ. ಆದರೆ ಕೇಶ ವಿನ್ಯಾಸದಲ್ಲಿ ಅತ್ಯಲ್ಪವಾಗಿ ಮೂಡಿದ ರೇಖೆಗಳು ಕೇಶಗಳನ್ನು ಶ್ವೇತ ವರ್ಣವಾಗಿಸುತ್ತವೆ. ಯಾವುದೇ ಬಗೆಯ ದಟ್ಟ ರಚನೆಗೆ ಹಿನ್ನೆಲೆ ಮತ್ತು ಭಾವದಲ್ಲಿ ಅವಕಾಶವಿಲ್ಲದ ಸರಳ, ಸುಂದರ ರಚನೆ ಇದು.

**ಉಪಸಂಹಾರ**

ಇಲ್ಲಿ ಶಾಯಿ ಮಾಧ್ಯಮದಿಂದ ರಚಿಸಲಾದ ೧೧ ಕಲಾಕೃತಿಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಶಾಯಿ ಲೇಖನಿಯಿಂದ ಭಾವವೊಂದರ ಅಭಿವ್ಯಕ್ತಿಯ ಸಾಧ್ಯತೆಗಳ ಅಧ್ಯಯನ ಇಲ್ಲಿ ಕಂಡುಬುತ್ತದೆ. ಇಲ್ಲಿಯೂ ಸಹ ಸ್ಥಿರ ರೂಪದರ್ಶಿಯ ಮತ್ತು ಚಲನಾತ್ಮಕ ರೂಪದರ್ಶಿಗಳ ಎರಡು ಬಗೆಯ ಭಾವಚಿತ್ರಗಳು ಇದ್ದು ಎರಡೂ ನೆಲೆಯಲ್ಲಿ ಭಾವಚಿತ್ರಗಳನ್ನು ಹೇಗೆ ರಚಿಸಿಬೇಕೆಂಬ ಬೋಧನಾಂಶ ಲಭ್ಯವಾಗುತ್ತದೆ. ಸ್ಥಿರ ರೂಪದರ್ಶಿಗಳನ್ನು ಹಿರೇಗೌಡರು ಚಿತ್ರಿಸುವಾಗ ವಿವರಕ್ಕೆ ಆದ್ಯತೆ ನೀಡಿದರೆ, ಚಲನಯುಕ್ತವಾದ ರೂಪದರ್ಶಿಯ ಭಾವಚಿತ್ರ ರಚಿಸುವಾಗ ವೇಗೋತ್ಕರ್ಷದ ರೇಖೆಗಳನ್ನು ಸೂಚ್ಯವಾಗಿಸಿಕೊಂಡು ಭಾವಸ್ಫುರಣೆಯ ಅಭಿವ್ಯಕ್ತಿಗೆ ಹಲವು ಸೂತ್ರಗಳನ್ನು ಕೊಡಮಾಡುವ ಹಿರೇಗೌಡರ ಇಲ್ಲಿನ ೧೧ ಕಲಾಕೃತಿಗಳು ವಿಭನ್ನ ಬಗೆಯ ಸಂಯೋಜನೆ ತಂತ್ರ, ರಚನಾ ತಂತ್ರಗಳನ್ನು ಹೊಂದಿದ ಅನನ್ಯ ಕಲಾಕೃತಿಗಳಾವೆ.

********

**೧:೩. ಕ್ರೆಯಾನ್**

ಹಿರೇಗೌಡರು ಪೆನ್ಸಿಲ್, ಶಾಯಿ ಮಾಧ್ಯಮಗಳನ್ನು ದುಡಿಸಿಕೊಂಡು ಭಾವಚಿತ್ರಗಳನ್ನು ರಚಿಸಿದಂತೆ ಇಲ್ಲಿಯೂ ಕೂಡ ಕ್ರೆಯಾನ್ ಮಾಧ್ಯಮವನ್ನು ಸಮರ್ಥವಾಗಿ ದುಡಿಸಿಕೊಂಡು ರಚಿಸಿದ ಭಾವಚಿತ್ರಗಳುಂಟು. ಅಂತಹ ಮೂರು ಭಾವಚಿತ್ರಗಳನ್ನು ಇಲ್ಲಿ ಆಯ್ಕೆ ಮಾಡಿಕೊಂಡು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

**೧. ಕೆ.ಬಿ.ಕುಲಕರ್ಣಿ** (೧೯೮೫)



ಕರ್ನಾಟಕ ಕಂಡ ಹಿರಿಯ ಹಾಗೂ ಪ್ರತಿಭಾನ್ವಿತ ಕಲಾವಿದರಲ್ಲಿ ಕೆ.ಬಿ.ಕುಲಕರ್ಣಿಯವರೂ ಒಬ್ಬರು. ಅವರ ಭಾವಚಿತ್ರವನ್ನು ಕ್ರೆಯಾನ್‌ನಿಂದ ಚಿತ್ರಿಸಿದ ಹಿರೇಗೌಡರು ಮಾಧ್ಯಮದ ಸಾಧ್ಯತೆಯನ್ನು ಆಳವಾಗಿ ಅರಿತುಕೊಂಡು ಛಾಯೆಗಳನ್ನು ಮೂರು ಭಾಗಗಳನ್ನಾಗಿ ವಿಂಗಡಿಸಿಕೊಂಡು (ದಟ್ಟ, ಮಧ್ಯಮ ಮತ್ತು ತೆಳು) ರಚಿಸಿದ ಈ ಭಾವಚಿತ್ರದಲ್ಲಿ ಕುಲಕರ್ಣಿಯವರ ಭಾವವನ್ನು ಸ್ಪಷ್ಟವಾಗಿ ಗುರುತಿಸಿದ್ದಾರೆ. ಸ್ನಾಯುಗಳನ್ನು ರಚಿಸುವಾಗ ಅದಕ್ಕೆ ಪೂರಕವಾಗಿಯೇ ಕ್ರೆಯಾನನ ಬೀಸುಗಳನ್ನು ಹಾಕಿರುವುದರಿಂದ ಸ್ಪಷ್ಟ ಭಾವ ಪ್ರಕಟವಾಗಿದೆ. ಮುಖ ಮತ್ತು ಕೇಶಭಾಗದಲ್ಲಿ ಕ್ರೆಯಾನನ ಬೀಸುಗಳು ಸೂಚ್ಯವಾಗಿ ಮೂಡಿದರೆ ಕುತ್ತಿಗೆ ಮತ್ತು ಉಡುಪಿನಲ್ಲಿ ಅಲ್ಲಪ ದಟ್ಟತೆಯನ್ನು ಸೃಷ್ಟಿಸಿದ್ದಾರೆ. ಹಿನ್ನೆಲೆಯಲ್ಲಿ ಗೌಡರ ಎಂದಿನ ಲಾಲಿತ್ಯ ಪೂರ್ಣ ಬೀಸುಗಳು ಸೂಚ್ಯವಾಗಿವೆ.

**೨. ಮಲ್ಲಿಕಾರ್ಜುನ ಜಾಧವ್** (೧೯೮೫)

ಮಲ್ಲಿಕಾರ್ಜುನ ಜಾಧವ್ ಅವರು ಹಿರೇಗೌಡರ ಸಹೋದ್ಯೋಗಿ. ಅಷ್ಟೇ ಅಲ್ಲ ಬೌದ್ಧಿಕ ವಿನಿಮಯ ಮಾಡಿಕೊಳ್ಳುವ ಜ್ಞಾನಿ ಮಿತ್ರ. ಅಲ್ಪ ಪಾರ್ಶ್ವನೋಟದ ರಚನೆಯನ್ನು ಕ್ರೆಯಾನ್



೧. ಕೆ.ಬಿ.ಕುಲಕರ್ಣಿ, ೧೯೮೫



೨. ಜೆ.ಮಲ್ಲಿಕಾರ್ಜುನ, ೧೯೮೫



೩. ಶಾಲಾ ಬಾಲಕಿ, ೧೯೮೫

ಸಾಧ್ಯತೆಗೆ ಅನುಗುಣವಾಗಿ ಸ್ನಾಯುಗಳಿಗೆ ಪೂರಕವಾಗಿ ದುಡಿಸಿಕೊಂಡ ಬಗೆ ಇಲ್ಲಿದೆ. ಕೇಶದಲ್ಲಿ ಛಾಯೆಯ ದಟ್ಟತೆ ಇದ್ದರೆ ಮುಖದಲ್ಲಿ ಮಂದಹಾಸವನ್ನು ಸೂಚಿಸುವ ತೆಳುವಾದ ಛಾಯೆಗಳು ಮೂಡಿವೆ. ಆದರೆ ಹಿಂದಿನ ಭಾವಚಿತ್ರದಂತೆ ಇಲ್ಲಿಯೂ ಉಡುಪಿನಲ್ಲಿ ದಟ್ಟ ಛಾಯೆಯು ಪುನರಾವರ್ತನೆಯಾಗಿದೆ. ಹಿನ್ನೆಲೆಯಲ್ಲಿ ಮಂದವಾದ ಛಾಯೆ ಏಕಪ್ರಕಾರವಾಗಿ ಮೂಡಿದೆ.

**೩. ಶಾಲಾಬಾಲಕಿ** (೧೯೮೫)

ಹಿಂದಿನ ಎರಡೂ ಭಾವಚಿತ್ರಗಳಿಗಿಂತ ಭಿನ್ನವಾದ ರಚನೆಯಿದು. ಚಪ್ಪಟೆಯಾಗಿರುವ ಕ್ರೆಯಾನಿನ ಸಾಧ್ಯತೆಗಳನ್ನು ದಟ್ಟ ಬೀಸುಗಳ ಮುಖಾಂತರವಾಗಿ, ಜೊತೆಗೆ ಕ್ರೆಯಾನಿನ ತುದಿಯಿಂದ ರೇಖೆಗಳನ್ನು ಕೇಶದಲ್ಲಿ ದುಡಿಸಿಕೊಳ್ಳುವುದರ ಮೂಲಕ ಬಹು ಬಗೆಯ ಸಾಧ್ಯತೆಗಳನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ಬಾಲಕಿಯ ಪೂರ್ಣ ಪಾರ್ಶ್ವದ ರಚನೆ ಇದಾಗಿದ್ದು, ಮುಖದಲ್ಲಿ ಸೂಕ್ಷ್ಮವಾದ ತೆಳುವಾದ ಛಾಯೆ ಸೂಚ್ಯವಾಗಿ ಮೂಡಿದ್ದನ್ನು ಹೊರತುಪಡಿಸಿದರೆ ಬೇರೆ ಯಾವುದೇ ಬಗೆಯ ಛಾಯೆಗಳ ಓರಣ ಇಲ್ಲಿ ಗೌಣ. ಸಂಕ್ಷೇಪಯುಕ್ತವಾದ, ಆದರೆ ದಟ್ಟವಾದ ಕ್ರೆಯಾನಿನ ಬೀಸುಗಳು ಬಾಲಕಿಯ ಉಡುಪಿನ ವಿನ್ಯಾಸವನ್ನು ನಿರ್ಧರಿಸಿವೆ. ಹಿನ್ನೆಲೆಯಲ್ಲಿ ಹಿರೇಗೌಡರ ಎಂದಿನ ರೇಖಾ ಲಾಲಿತ್ಯದಂತೆ ಕ್ರೆಯಾನಿನ ತೆಳುವಾದ ಛಾಯೆ ಹರಿದಾಡಿದೆ. ಒಟ್ಟಿನಲ್ಲಿ ಈ ಭಾವಚಿತ್ರ ಹೆಚ್ಚು ಶ್ರಮವಿಲ್ಲದ, ಅಲ್ಪ ಸಮಯದಲ್ಲಿ ಬಾಲಕಿಯ ಮುಗ್ಧ ಭಾವವನ್ನು ಕಂಡುಂಡ ಕೃತಿ.

**ಉಪಸಂಹಾರ**

ಹಿರೇಗೌಡರು ತಮ್ಮ ಬದುಕಿನುದ್ದಕ್ಕೂ ಸಾವಿರಾರು ಭಾವಚಿತ್ರಗಳನ್ನು ರಚಿಸಿದ್ದರೂ, ಅಧ್ಯಯನದ ವ್ಯಾಪ್ತಿಗೆ ತಕ್ಕಂತೆ ಮೂರು ಮಾಧ್ಯಮದಲ್ಲಿ ಕೆಲವು ಕಲಾಕೃತಿಗಳನ್ನು ಮಾತ್ರ ಆಯ್ದುಕೊಂಡು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಹಿರೇಗೌಡರ ಪೆನ್ಸಿಲ್, ಶಾಯಿ ಮತ್ತು ಕ್ರೆಯಾನ್ ಮಾಧ್ಯಮಗಳನ್ನು ಅದರ ಸಾಧ್ಯತೆಗಳನ್ನು ಅರಿತುಕೊಂಡು ಅದಕ್ಕೆ ಪೂರಕವಾಗಿಯೇ ಭಾವಚಿತ್ರಗಳನ್ನು ರಚಿಸುವ ಬಗೆಯನ್ನು ಇಲ್ಲಿನ ಎಲ್ಲ ಭಾವಚಿತ್ರಗಳಲ್ಲಿ ಕಾಣಬಹುದಾಗಿದೆ. ಹಿರೇಗೌಡರು ಕೆಲವು ಭಾವಚಿತ್ರಗಳಲ್ಲಿ (ಕ್ರೆಯಾನ್ : ಚಿತ್ರ ೩, ಶಾಯಿ : ಚಿತ್ರ ೮, ೯, ೧೧)ಹಿನ್ನೆಲೆಯಲ್ಲಿ ಏಕಪ್ರಕಾರವಾದ ಅವರ ಎಂದಿನ ರೇಖಾ ಲಾಲಿತ್ಯವನ್ನು ತೋರ್ಪಡಿಸಿದರೆ, ಇನ್ನು ಕೆಲವು ಭಾವಚಿತ್ರಗಳಲ್ಲಿ (ಶಾಯಿ : ೩, ೧೧) ಚಿತ್ರದಲ್ಲಿ ರೂಪದರ್ಶಿಗೆ ಸಂಬಂಧಪಟ್ಟ ಘಟನೆಗಳು ಅಥವಾ ಅವರ ಕ್ಷೇತ್ರ ಸಾಧನೆಯ ಕುರಿತ ಸೂಚ್ಯವಾದ ವಿನ್ಯಾಸವನ್ನು ರಚಿಸುವುದರ ಮೂಲಕವಾಗಿಯೂ ದೃಶ್ಯವನ್ನು ಕಾವ್ಯವಾಗಿಸುವ ಹಾಗೂ ಭಾವಚಿತ್ರದ ಅಸ್ತಿತ್ವಕ್ಕೆ ವಿಸ್ತೃತ ಅರ್ಥ ಕೊಡುವ ಪ್ರಯತ್ನವನ್ನು ಮಾಡಿದ್ದಾರೆ. ಅಷ್ಟೇ ಅಲ್ಲದೇ ಪ್ರತಿಯೊಂದು ಭಾವಚಿತ್ರದಲ್ಲೂ ನವೀನ ತಂತ್ರಗಾರಿಕೆಯನ್ನು ಅನ್ವೇಷಿಸುವ ಪ್ರಯೋಗಗಾರಿಕೆಯನ್ನು ಮಾಡುವುದರ ಮೂಲಕ ಒಬ್ಬ ಪ್ರಯೋಗಶೀಲ ಕಲಾಶಿಕ್ಷಕರಾಗಿ, ಕಲಾವಿದರಾಗಿ ಗೋಚರವಾಗುತ್ತಾರೆ.

********

## ಭಾಗ ೨. ಪೂರ್ಣಭಾವ ಚಿತ್ರಗಳು

ಭಾವಚಿತ್ರಕ್ಕಿರುವ ಚಾರಿತ್ರಿಕ ಹಿನ್ನೆಲೆ ಪೂರ್ಣಭಾವಚಿತ್ರಕ್ಕೂ ಇದೆ. ಪ್ರಾಗೈತಿಹಾಸಿಕ ಚಿತ್ರಗಳ ಕಾಲದಿಂದ ಮುಂದುವರೆದ ಕಾಲಮಾನಗಳಲ್ಲಿ ಪೂರ್ಣಭಾವಚಿತ್ರಕ್ಕೆ ಸಾಕಷ್ಟು ಪ್ರೋತ್ಸಾಹ ರಾಜಾಶ್ರಯಗಳಲ್ಲಿ, ಚರ್ಚುಗಳಲ್ಲಿ ಕಂಡುಬರುತ್ತದೆ. ಪೂರ್ಣಭಾವಚಿತ್ರ ರಚನೆಯಲ್ಲಿ ಪಾಶ್ಚಾತ್ಯ ಕಲಾವಿದರಾದ ರೆಂಬ್ರಾಂಟ, ಲಿಯೋನಾರ್ಡೋ ಡಾ ವಿನ್ಸಿ ಹಾಗೆಯೇ ಭಾರತದಲ್ಲಿ ರವಿವರ್ಮ, ಎಸ್.ಎಮ್. ಪಂಡಿತ, ಬಿ.ಕೆ.ಹುಬ್ಬಳ್ಳಿ, ಕೆ.ಬಿ.ಕುಲಕರ್ಣಿ, ಎಂ.ಎ.ಚೆಟ್ಟಿ, ಕೆ.ಎನ್. ರಾಮಚಂದ್ರನ್, ಜೆ.ಎಸ್.ಖಂಡೇರಾವ್, ಜಾನ್ ಫರ್ನಾಂಡಿಸ್‌ರು ಪ್ರಮುಖರು. ಇವರುಗಳಲ್ಲಿ ಪ್ರಸ್ತುತ ಸಮಕಾಲೀನ ಸಂದರ್ಭದಲ್ಲಿ ವಿ.ಬಿ.ಹಿರೇಗೌಡರ ಕೂಡ ಪೂರ್ಣಭಾವ ಚಿತ್ರಗಳನ್ನು ರಚಿಸಿದವರಲ್ಲಿ ಒಬ್ಬರಾಗಿದ್ದಾರೆ.

ಭಾವಚಿತ್ರದಂತೆ ಪೂರ್ಣಭಾವಚಿತ್ರಕಲೆಯೂ ಅಕಾಡೆಮಿಕ್ ಸಂದರ್ಭದಲ್ಲಿ ಅತ್ಯಂತ ಗಂಭೀರವಾದ ಅಧ್ಯಯನದ ಕಲಾಪ್ರಕಾರ. ಹಿರೇಗೌಡರು ಅಕಾಡೆಮಿಕ್ ಶಿಸ್ತಿನಲ್ಲಿ ಪೂರ್ಣಭಾವಚಿತ್ರದ ತರಬೇತಿಯನ್ನು ವಿದ್ಯಾರ್ಥಿಗಳಿಗೆ ನೀಡುವ ಸಂದರ್ಭದಲ್ಲಿ ಅನೇಕ ಪ್ರಾತ್ಯಕ್ಷಿಕೆಗಳನ್ನು ನೆರವೇರಿಸಿಕೊಟ್ಟಿದ್ದಾರೆ. ಅಷ್ಟೇ ಅಲ್ಲದೇ ರಾಜ್ಯದ ಕಲಾಶಾಲೆಗಳಲ್ಲಿ ಹಲವಾರು ಪ್ರಾತ್ಯಕ್ಷಿಕೆಗಳನ್ನು ನೀಡಿ ರಾಜ್ಯದ ಗಮನಾರ್ಹ ಕಲಾವಿದರಲ್ಲಿ ಒಬ್ಬರೆನಿಸಿಕೊಂಡಿದ್ದಾರೆ. ಅವರು ರಚಿಸಿದ ಕೆಲವು ಪೂರ್ಣಭಾವ ಚಿತ್ರದ ಶಾಯಿ ಮಾಧ್ಯಮದ ರೇಖಾಚಿತ್ರಗಳನ್ನು ಆಯ್ದುಕೊಂಡು ಇಲ್ಲಿ ಅಧ್ಯಯನ ಮಾಡಲಾಗಿದೆ.

### ೧. ಮಹಿಳೆ (೧೯೭೪)

ಹಿರೇಗೌಡರು ತಾವು ಕಾರ್ಯನಿರ್ವಹಿಸುತ್ತಿದ್ದ ಕಲಾಶಾಲೆಯಲ್ಲಿ ಪ್ರಾತ್ಯಕ್ಷಿಕೆ ನೀಡಿದ ಯುವತಿಯ ಭಾವಚಿತ್ರ ಇದಾಗಿದ್ದು, ಸ್ಕೆಚ್‌ಪೆನ್‌ನಿಂದ ರಚಿತವಾಗಿದೆ. ಚಿತ್ರದ ಪ್ರತಿಯೊಂದು ಭಾಗದಲ್ಲೂ

ಕೂಲಂಕುಶವಾದ ಲೇಖನಿಯ ರೇಖಾ ನಿರ್ಣಯ ಪ್ರಬುದ್ಧತೆಯಿಂದ ಕೂಡಿದ ಉತ್ತಮ ಕೃತಿಯಿದು. ರೂಪದರ್ಶಿಯ ಬಲಭಾಗದಿಂದ ಬಂದ ಬೆಳಕನ್ನು ಲಕ್ಷ್ಯದಲ್ಲಿಟ್ಟುಕೊಂಡು ನೆರಳಿನ ಭಾಗವನ್ನು ಅಡ್ಡ-ಉದ್ದದ ವಕ್ರ, ನೇರ ರೇಖೆಗಳಿಂದ ತುಂಬಲಾಗಿದೆ. ಮುಖದಲ್ಲಿ ಸಂಕ್ಷೇಪಯುಕ್ತ ಮಧ್ಯಮ ಛಾಯೆಯನ್ನು ಸಂದರ್ಭೋಚಿತವಾಗಿ ದುಡಿಸಿಕೊಂಡಿರುವುದರಿಂದ ಭಾವಸ್ಫುರಣೆ ಮೃದುತ್ವದಿಂದ ಕೂಡಿದೆ. ಕೇಶದಲ್ಲಿ ಅಲ್ಲಲ್ಲಿ ಬೆಳಕಿನ ಛಾಯೆಯನ್ನು ಪಕ್ವಯುತವಾಗಿ ದುಡಿಸಿಕೊಂಡಿರುವುದರಿಂದ ಇಡೀ ರೂಪದರ್ಶಿ ವ್ಯಕ್ತಿತ್ವ ಆಕರ್ಷಕವಾಗಿ ಮೂಡಿದೆ. ಒಟ್ಟು ಚಿತ್ರದಲ್ಲಿ ನೋಡುಗರ ಗಮನಸೆಳೆಯುವ ತಂತ್ರವೆಂದರೆ ರೂಪದರ್ಶಿ ಧರಿಸಿರುವ ಉಡುಪು. ಅವಳು ಕುಳಿತ ಭಂಗಿ, ದೇಹದ ಬಾಗುವಿಕೆಗೆ ಪೂರಕವಾಗಿ ಉಡುಪಿನಲ್ಲಿ ಮೂಡಿದ ಮಡಿಸುವಿಕೆಗಳು ರಚನೆಗಳು ಕಲಾವಿದರ ಪ್ರಬುದ್ಧತೆಯನ್ನು ಬಿಂಬಿಸುತ್ತವೆ. ರೂಪದರ್ಶಿಯ ಅಂಗಾಂಗ ರಚನೆ, ಅವಳು ಕುಳಿತಿರುವ ಪ್ರಕೃತಿಸಹಜ ಪೀಠ, ಹಿನ್ನೆಲೆಯಲ್ಲಿ ಸೂಚ್ಯವಾಗಿ ರಚನೆಗೊಂಡ ಸಸ್ಯಗಳು ಇಡೀ ರೂಪದರ್ಶಿಗೆ ಬೆಂಬಲವಾಗಿರುವುದರಿಂದ ಒಟ್ಟು ಭಾವಚಿತ್ರ ಸೌಮ್ಯ ಭಾವದ ನೆಲೆಯಲ್ಲಿದೆ.

**೨. ಬಾಲಕ** (೧೯೮೧)

ಹಿರೇಗೌಡರು ವೃದ್ಧರು, ಯುವಕರನ್ನು ಮಾತ್ರ ತಮ್ಮ ಕಲಾಕೃತಿ ರಚನೆಗೆ ಸೀಮಿತಗೊಳಿಸದೇ ಎಲ್ಲ ವಯೋಮಾನದವರನ್ನು ದುಡಿಸಿಕೊಂಡಿರುವದಕ್ಕೆ ಈ ಪೂರ್ಣಭಾವಚಿತ್ರ ಒಂದು ನಿದರ್ಶನ ಮಾತ್ರ. ಆರ್ಥಿಕವಾಗಿ ಕೆಳಸ್ತರದ ಭಾವವನ್ನು ಹೊಂದಿದ ಈ ಬಾಲಕ ಮೈತುಂಬ ಹೊದಿಕೆಯನ್ನು ಹೊದ್ದುಕೊಂಡಿದ್ದು, ಮುಖ ಮಾತ್ರ ಹೊರಗಿದೆ. ಮುಖದಲ್ಲೂ ಸಹ ಸೂಚ್ಯವಾದ ಮಧ್ಯಮ ಛಾಯೆಗಳನ್ನು, ಸಾಂದರ್ಭಿಕವಾಗಿ ಅಲ್ಲಲ್ಲಿ ದಟ್ಟಛಾಯೆಯನ್ನು ಬಳಸುವುದರ ಮೂಲಕ ಬಾಲಕನ ವಯೋಮಾನವನ್ನು ಹಿರೇಗೌಡರು ೧೪-೧೫ವರ್ಷಕ್ಕೆ ಮಿತಿಗೊಳಿಸುತ್ತಾರೆ. ಹಿರೇಗೌಡರ ಆಸಕ್ತಿ ಬಹುಬಗೆಯದ್ದು ಎಂಬುದನ್ನು ಈ ಕಲಾಕೃತಿಯಲ್ಲಿ ಗುರುತಿಸಬಹುದಾಗಿದ್ದು, ಅದು ವಿಶೇಷವಾಗಿ ಬಟ್ಟೆಯ ರಚನೆಯಲ್ಲಿ ಕಾಣಬಹುದಾಗಿದೆ. ಹಿಂದಿನ ಚಿತ್ರದಲ್ಲಿ ಕಂಡ ಬಟ್ಟೆಯ ರಚನಾ ವಿನ್ಯಾಸದಂತೆ ಇಲ್ಲಿಯೂ ಸಹ ಅದಕ್ಕಿಂತ ತುಸು ಭಿನ್ನವಾಗಿ ಹೊದಿಕೆಯ ಮಡಿಸುವಿಕೆಗಳು ರಚನೆಗೊಂಡಿವೆ. ಆ ಮಡಿಸುವಿಕೆಗ ತಕ್ಕಂತೆ ಛಾಯೆಯನ್ನು ಆವೃತ್ತಗೊಳಿಸಿರುವ ಕಿರಿದಾದ ರೇಖೆಗಳು ಅಷ್ಟದಿಕ್ಕುಗಳಲ್ಲಿ ಹರಿದಾಡಿವೆ. ಹಿನ್ನೆಲೆಯಲ್ಲಿ ಹಿರೇಗೌಡರ ಎಂದಿನ ರೇಖಾ ಲಾಲಿತ್ಯ ಒಂದು ಬಗೆಯಲ್ಲಿ ಕ್ಯೂಬಿಕ್ ಶೈಲಿ ರಚನೆಗೊಂಡರೆ ಇನ್ನೊಂದು ಭಾಗದಲ್ಲಿ (ಬಲಗಡೆ) ಪ್ರಾಕೃತಿಕ ವಿನ್ಯಾಸಗಳು ರಚನೆಗೊಂಡಿವೆ. ಅದೇ ಹಿನ್ನೆಲೆಯಲ್ಲಿ ಸೂಚ್ಯವಾಗಿ ಬಾಲಕನ ಹೆಸರನ್ನು(ವಿನಾಯಕ)ಕೂಡ ಹಿರೇಗೌಡರು ಕ್ಯೂಬಿಕ್ ಶೈಲಿಯಲ್ಲಿ ರಚಿಸಿದ್ದರೂ ಭಾವಚಿತ್ರಕ್ಕೆ ಬಾಧಕವೆನಿಸಿಲ್ಲ.

**೩. ವೃದ್ಧ** (೧೯೮೨)

ಈ ಭಾವಚಿತ್ರವೂ ಸಹ ಹಿರೇಗೌಡರು ತಮ್ಮ ಕಾಲೇಜಿನ ವಿದ್ಯಾರ್ಥಿಗಳಿಗೆ ಪ್ರಾತ್ಯಕ್ಷಿಕೆ ಸಂದರ್ಭದಲ್ಲಿ ರಚಿಸಿದ್ದು. ಅಲ್ಪ ಸಮಯದಲ್ಲಿ ಅರೆನಗ್ನ ವೃದ್ಧನನ್ನು ಅತ್ಯಂತ ಸೂಚ್ಯವಾದ ರೇಖೆಗಳಿಂದ ರಚಿತವಾದ



೩. ವೃದ್ಧ, ೧೯೮೨



೪. ಟಿಬೇಟಿಯನ್ ಮಹಿಳೆ, ೧೯೮೪

ಈ ಚಿತ್ರ ಹಿರೇಗೌಡರ ಮಾನವ ಅಂಗಾಂಗ ಶಾಸ್ತ್ರದ ಪ್ರಮಿತಿಗೆ ಹಿಡಿದ ಕನ್ನಡಿ ಎಂದರೆ ಅತಿಶಯೋಕ್ತಿಯೇನಲ್ಲ. ನೆರಳಿನ ಛಾಯೆಯನ್ನು ಅಲ್ಪವಾಗಿ ದುಡಿಸಿಕೊಂಡಿದ್ದರೂ ಅಂಗಾಂಗಳ ಸ್ನಾಯುಗಳು ಸ್ಪಷ್ಟರೂಪ ಪಡೆದಿವೆ. ರೂಪದರ್ಶಿಗೆ ಬಾಹ್ಯ ರೇಖೆಯನ್ನು ಎಳೆದಿದ್ದರೂ ಕೂಡ ಅದು ಪ್ರತ್ಯೇಕವಾಗಿ ಗೋಚರವಾಗುವುದಿಲ್ಲ. ದೇಹದ ಒಟ್ಟು ಭಾಗವಾಗಿ ಕಾಣುವ ಆ ರೇಖಾ ನಿಪುಣತೆಗೆ ಪಕ್ವತೆ ಇರುವುದು ದಿಟ. ರೂಪದರ್ಶಿಯ ಮುಖದಲ್ಲಿ ಅಲ್ಪ ಪ್ರಮಾಣದ ದಟ್ಟ ಛಾಯೆ ಆವರಿಸಿಕೊಂಡಿದ್ದರೂ ವೃದ್ಧಾಪ್ಯದ ಭಾವಸ್ಫುರಣ ಸ್ಪಷ್ಟ ಅನುಭವವನ್ನು ನೀಡುತ್ತದೆ.

**೪. ಟಿಬೇಟಿಯನ್ ಮಹಿಳೆ (೧೯೯೪)**

ಹಿರೇಗೌಡರು ಕಛೇರಿಯಲ್ಲಿದ್ದಾಗ, ಮನೆಯಲ್ಲಿದ್ದಾಗ ಅಥವಾ ಪ್ರಯಾಣದ ಸಂದರ್ಭದಲ್ಲೂ ರೇಖಾ ಚಿತ್ರಗಳನ್ನು ರಚಿಸುವಲ್ಲಿ ಕ್ರಿಯಾಶೀಲರಾಗಿರುವುದಕ್ಕೆ ರೈಲಿನಲ್ಲಿ ಪ್ರಯಾಣಿಸುತ್ತಿರುವ ಟಿಬೇಟಿಯನ್ ಮಹಿಳೆಯು ಚಿತ್ರ ನಿದರ್ಶನ. ಧ್ಯಾನಸ್ಥಳಾಗಿರುವ ಈ ಮಹಿಳೆಯ ರೇಖಾಚಿತ್ರದ ಮುಖದಲ್ಲಿ ಯಾವುದೇ ಬಗೆಯ ಛಾಯೆಗಳನ್ನು ಕಾಣದಿದ್ದರೂ ಛಾಯೆ ಇರಬಹುದಾದ ಸ್ಥಳದಲ್ಲಿ ಕೇವಲ ರೇಖೆಗಳಿಂದ ಛಾಯೆಯನ್ನು ಸೂಚ್ಯವಾಗಿಸಿದ್ದರೂ ಭಾವಕ್ಕೆ ಯಾವುದೇ ಬಗೆಯ ಕೊರತೆ ಇಲ್ಲ. ಆದರೆ ಅವಳು ತೊಟ್ಟ ಉಡುಪಿನಲ್ಲಿ ದಟ್ಟ ಛಾಯೆಗಳು ಅಲ್ಲಲ್ಲಿ ಮೂಡಿದ ಬಗೆಯಿಂದ ಗಾಂಭಿರ್ಯದ ಭಾವವನ್ನು ಈ ಚಿತ್ರ ಪ್ರಕಟಿಸುತ್ತದೆ. ಹಿನ್ನೆಲೆಯಲ್ಲಿ ಹಿರೇಗೌಡರ ಎಂದಿನ ರೇಖಾ ಲಾಲಿತ್ಯ ಗೌಣವಾಗಿ ರೈಲಿನ ಕಿಡಕಿ, ಕುಳಿತಿರುವ ಪೀಠ ತೋರಿಸುವುದರೊಂದಿಗೆ ಮೇಲ್ಭಾಗದಲ್ಲಿ ಅವಳ ಧಾರ್ಮಿಕ ಬದುಕಿನ ಹೆಜ್ಜೆಗಳು, ಅವರ ಆರಾಧನಾ ಮಂದಿರವನ್ನು ಹಾಗೂ ಪ್ರಕೃತಿ ನಿರ್ಮಿತಿಗಳನ್ನು ಸೂಚ್ಯವಾಗಿಸಿದ್ದಾರೆ. ಹಿಂದಿನ ಮೂರು ಚಿತ್ರಗಳಲ್ಲಿ ಹಿನ್ನೆಲೆಯಲ್ಲಿ ಈ ಬಗೆಯ ವಿವರಣೆಗಳು ಗೌಣವಾಗಿದ್ದರೆ, ಈ ಚಿತ್ರದಲ್ಲಿ ಹಿರೇಗೌಡರು ರೂಪದರ್ಶಿಯ ಬದುಕಿನ ಮರ್ಮವನ್ನು ಬಹಿರಂಗಪಡಿಸುವ ಇರಾದೆಯನ್ನು ಹೊಂದಿರುವುದನ್ನು ಕಾಣಬಹುದಾಗಿದೆ.

**ಉಪಸಂಹಾರ**

ಹಿರೇಗೌಡರ ಶಾಯಿಮಾಧ್ಯಮದ ನಾಲ್ಕು ಪೂರ್ಣ ಭಾವಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ನಾಲ್ಕೂ ಪೂರ್ಣಭಾವಚಿತ್ರಗಳು ವಿಭಿನ್ನ ವಯೋಮಾನದವರ ಚಿತ್ರಗಳು. ಪ್ರತಿ ಚಿತ್ರದಲ್ಲೂ ಕಾಣುವ ಸ್ಪಷ್ಟ ಸದ್ಗುಣವೆಂದರೆ ವಯೋಮಾನಕ್ಕೆ ತಕ್ಕುದಾದ ಭಾವ ಮತ್ತು ಅಂಗಾಂಗ ರಚನೆಗಳು ಗಮನಾರ್ಹವೆನಿಸುತ್ತವೆ. ಜೊತೆಗೆ ಇನ್ನೊಂದು ವೈಶಿಷ್ಟ್ಯವನ್ನು ಕಾಣಬಹುದಾದರೆ– ಅದು, ಆಯಾ ವಯೋಮಾನದವರ ಅಂಗಾಂಗಳಿಗೆ –ಭಾವಗಳಿಗೆ ಪೂರಕವಾದ ರೇಖೆ ಮತ್ತು ಛಾಯೆಗಳನ್ನು ದುಡಿಸಿಕೊಳ್ಳುವಿಕೆ ಬಗೆ. ಚಿತ್ರ ೧, ೨, ೩ ಇವುಗಳು ಸ್ಕೆಚ್ ಪೆನ್‌ನಿಂದ ರಚಿತವಾಗಿದ್ದರೂ ಚಿತ್ರ ೧ರಲ್ಲಿ ಕಾಣಿಸಿಕೊಂಡ ಛಾಯೆಗಳು ಪೆನ್ಸಿಲ್ ಛಾಯೆಯಂತೆ ಕಂಡು ಬರುತ್ತವೆ. ಇಂತಹ ಛಾಯೆಗಳನ್ನು ಸೃಷ್ಟಿಸ ಬೇಕಾದರೆ ಪೆನ್ನನ್ನು ತಾಂತ್ರಿಕವಾಗಿ ನಿರ್ವಹಿಸುವ ಬಗೆಯನ್ನು ಸ್ಪಷ್ಟವಾಗಿ ಕಂಡುಕೊಂಡಿರಬೇಕು. ಆದರೆ ಚಿತ್ರ ೪ ರೋಟ್ರಿಂಗ್ ಪೆನ್‌ನ್ನು ಬಳಸಿಕೊಂಡು ರಚಿಸಿರುವ

ಹಿನ್ನೆಲೆಯಲ್ಲಿ ಉಳಿದ ಮೂರು ಚಿತ್ರಗಳಲ್ಲಿ ಕಂಡುಬರುವ ಮಧ್ಯಮ ಹಾಗೂ ತೆಳು ಛಾಯೆಗಳು ಇಲ್ಲಿ ಕಂಡುಬರುವುದಿಲ್ಲ. ಅದಕ್ಕೆ ಕಾರಣ ಬಳಸುವ ಲೇಖನಿಯ ತಾಂತ್ರಿಕ ಸಾಧ್ಯತೆಗಳು. ಇಂತಹ ಸಾಧ್ಯತೆಗಳನ್ನು ನಮ್ಮ ಮುಂದಿನ ಪೀಳಿಗೆಯವರು ಅರಿಯಬೇಕಾದರೆ ಹಿರೇಗೌಡರ ರೇಖಾ ಚಿತ್ರಗಳನ್ನು ಅಧ್ಯಯನ ಮಾಡುವುದು ಅವಶ್ಯವೆನಿಸುತ್ತದೆ. ಇಂತಹ ತಂತ್ರಗಾರಿಕೆಯಿಂದ ಹಿರೇಗೌಡರ ಪೂರ್ಣಭಾವಚಿತ್ರಗಳು ಅನನ್ಯತೆಯ ನೆಲೆಯಲ್ಲಿ ತಮ್ಮ ಅಸ್ತಿತ್ವವನ್ನು ಕಾಪಿಟ್ಟುಕೊಳ್ಳುತ್ತವೆ.

********

ಭಾಗ ೩. ಪ್ರಕೃತಿ ಚಿತ್ರಗಳು

ಪ್ರಕೃತಿ ಅಧ್ಯಯನದ ಮೂಲವನ್ನು ಹುಡುಕುತ್ತ ಹೋದರೆ ಅದು ಸಿಗುವುದು ಪ್ರಾಗೈತಿಹಾಸಿಕ ಸಂದರ್ಭದಲ್ಲಿಯೇ. ಕಾಲ ಬದಲಾದಂತೆಲ್ಲ ಅದರ ಸ್ವರೂಪ ಬಹುವಿಧದಲ್ಲಿ ವಿಸ್ತೃತಗೊಳ್ಳುತ್ತ ಚಿತ್ರಕಲೆಯ ಶೈಕ್ಷಣಿಕ ಸಂದರ್ಭದ ಪ್ರಮುಖ ಅಧ್ಯಯನ ಪ್ರಕಾರವಾಗಿ ಬೆಳೆದುಬಂದಿದೆ. ಪ್ರಕೃತಿ ಚಿತ್ರಣ ರಚನೆಯಿಂದ ಆಗುವ ಪ್ರಮುಖ ಪ್ರಯೋಜನ ಯಥಾದರ್ಶನ ಪ್ರಜ್ಞೆ, ಈ ಯಥಾದರ್ಶನ ಪ್ರಜ್ಞೆ ಕಲಾವಿದ್ಯಾರ್ಥಿಗೆ ಅಥವಾ ವೃತ್ತಿಪರ ಕಲಾವಿದರಿಗೆ ಇಲ್ಲವಾದಲ್ಲಿ ಅವರು ಪ್ರಬುದ್ಧವಾದ ಕಲಾಕೃತಿ ರಚನೆ ಮಾಡಲು ಸಾಧ್ಯವಿಲ್ಲ. ಏಕೆಂದರೆ ಪ್ರಕೃತಿಯಲ್ಲಿನ ವಸ್ತುಗಳ ಮುನ್ನೆಲೆ ಪರಿಣಾಮ, ಹಿನ್ನೆಲೆ ಪರಿಣಾಮ ಅರಿತಾಗ ಮಾತ್ರ ಚಿತ್ರವೊಂದರ ರಚನೆ ಸಾಧ್ಯ.

ಯಥಾದರ್ಶನ ಪ್ರಜ್ಞೆ ಬಹುತೇಕವಾಗಿ ಎಲ್ಲರಿಗೂ ಇರುತ್ತದೆ. ಬಾಲ್ಯದಿಂದಲೇ ಎಲ್ಲರೂ ಪ್ರಕೃತಿಯನ್ನು ಸಹಜ ಕ್ರಿಯೆಯಿಂದ ಆಸ್ವಾದಿಸುತ್ತಾರೆ. ಆದರೆ ಅದನ್ನು ದೃಶ್ಯಾತ್ಮಕವಾಗಿ ಪ್ರಸ್ತುಪಡಿಸುವುದು ಕಲಾಸಕ್ತರಿಗೆ ಮಾತ್ರ ಸಾಧ್ಯ. ನೈಜ ಚಿತ್ರವಾಗಿರಲಿ ಅಥವಾ ವಸ್ತು ಚಿತ್ರಣವಾಗಿರಲಿ ಆಧುನಿಕ ಕಲಾಕೃತಿ ರಚನೆ ಮಾಡುವ ಸಂದರ್ಭದಲ್ಲೂ ಯಥಾದರ್ಶನ ಸಿದ್ಧಾಂತ ಪಾಲನೆ ಆಗುತ್ತದೆ. ಈ ಹಿನ್ನೆಲೆಯಲ್ಲಿ ಯಥಾದರ್ಶನ ಪ್ರಜ್ಞೆ ವೃದ್ಧಿಯಾಗಬೇಕಾದರೆ, ಪ್ರಕೃತಿ ಚಿತ್ರಗಳನ್ನು ನಿರಂತರವಾಗಿ ರಚಿಸಬೇಕೆನ್ನುವ ಹಿರೇಗೌಡರು ತಮ್ಮ ಬದುಕಿನಲ್ಲಿ ಸಾವಿರಾರು ಪ್ರಕೃತಿ ಚಿತ್ರಗಳನ್ನು ರಚಿಸಿದ್ದರೂ, ಮಹಾಪ್ರಬಂಧದ ವ್ಯಾಪ್ತಿಗೆ ಆಯ್ದ ಕೆಲವು ರೇಖಾಚಿತ್ರಗಳನ್ನು ಅಧ್ಯಯನಕ್ಕೆ ಇಲ್ಲಿ ಒಳಪಡಿಸಲಾಗಿದೆ.

ಪ್ರಕೃತಿ ನಿರ್ಮಿತ ಹಂಪಿಯ ಬೃಹದಾಕಾರದ ಬಂಡೆಗಳು ಮಳೆ, ಬಿಸಿಲು, ಚಳಿಗೆ ಮೈಯೊಡ್ಡಿ ನಿಂತು ಕಲಾವಿದರಿಗೆ ಸ್ಫೂರ್ತಿ ತುಂಬುವ ರೂಪದರ್ಶಿಗಳಾಗಿವೆ. ಇಂತಹ ರೂಪದರ್ಶಿಗಳ ಜೊತೆಗೆ



೧. ಬಾಬಾಬುಡನ್‌ಗಿರಿ, ೧೯೮೪



೨. ಬಾಬಾಬುಡನ್‌ಗಿರಿ, ೧೯೮೪

ಹಿರೇಗೌಡರು ವಿಜಯನಗರದ ಅರಸರು ನಿರ್ಮಿಸಿದ ಕೋಟೆಕೊತ್ತಲಗಳು, ದೇವಾಲಯಗಳು ಇನ್ನೂ ಮುಂತಾದ ಚಾರಿತ್ರಿಕ ಹಾಗೂ ಆಧುನಿಕ ನಿರ್ಮಾಣಗಳ ಕುರಿತು ಅನೇಕ ರೇಖಾಚಿತ್ರಗಳನ್ನು ಪೆನ್ಸಿಲ್, ಶಾಯಿ, ಕ್ರೆಯಾನ್ ಮಾಧ್ಯಮಗಳಲ್ಲಿ ರಚಿಸಿದ್ದಾರೆ.

**೩:೧. ಪೆನ್ಸಿಲ್ ಮಾಧ್ಯಮ**

ಪೆನ್ಸಿಲ್‌ನಲ್ಲಿ ಎರಡು ಬಗೆಗಳಿಗೆ. ಒಂದು ಕಟ್ಟಿಗೆಯ ಕವಚವನ್ನು ಹೊಂದಿದ ಪೆನ್ಸಿಲ್, ಇನ್ನೊಂದು ಕವಚ ರಹಿತ ಪೆನ್ಸಿಲ್ (ಲೆಡ್ ಪೆನ್ಸಿಲ್). ಇಲ್ಲಿನ ಕಲಾಕೃತಿ ಹಿರೇಗೌಡರು ಎರಡನೇ ಬಗೆಯ ಲೆಡ್ ಪೆನ್ಸಿಲ್‌ನಿಂದ ರಚಿಸಿರುವದರಿಂದ ಕ್ರೆಯಾನ್‌ನಂತೆ ಇಲ್ಲಿ ವಿವಿಧ ಬಗೆಯ ಛಾಯೆಗಳನ್ನು ಕಾಣಬಹುದಾಗಿದೆ.

ಇಲ್ಲಿನ ಎರಡೂ ಪ್ರಕೃತಿ ಚಿತ್ರಗಳು ಬಾಬಾಬುಡನ್‌ಗಿರಿಯ ಪರಿಸರವನ್ನು ಪ್ರತಿನಿಧಿಸುತ್ತವೆ. ಪಶ್ಚಿಮ ಘಟ್ಟದ ಅತೀ ಎತ್ತರದ ಪರ್ವತ ಶ್ರೇಣಿಯಾಗಿರುವುದರಿಂದ ಅಲ್ಲಿ ನಿರಂತರವಾಗಿ ಮೋಡಮುಸುಕಿದ ವಾತಾವರಣವಿರುತ್ತದೆ. ಅಂತಹ ವಾತಾವರಣವನ್ನು ಸಮರ್ಥವಾಗಿ ಗ್ರಹಿಸಿ ದೃಶ್ಯಾತ್ಮಕ ಪ್ರಕ್ರಿಯೆ ನೀಡಿದ ಹಿರೇಗೌಡರು ಈ ಎರಡೂ ಚಿತ್ರಗಳನ್ನು ಬಹುತೇಕವಾಗಿ ಛಾಯೆಗಳಿಂದಲೇ ಪೂರ್ಣಗೊಳಿಸಿದ್ದಾರೆ. ಇಲ್ಲಿ ರೇಖೆಗಳು ಗೌಣವಾದರೂ ಪ್ರಾಕೃತಿಕ ರೂಪಾಂಶಗಳು ಅಲ್ಲಿನ ಪರಿಸರದಲ್ಲಿ ಹೇಗೆ ಕಾಣಬಹುದು ? ಅವುಗಳನ್ನು ದೃಶ್ಯಾತ್ಮಕವಾಗಿ ಹೇಗೆ ಗ್ರಹಿಸಬೇಕೆಂಬ ಬೋಧನೆಯ ಸಾರ ನೋಡುಗರಿಗೆ ಪ್ರಾಪ್ತವಾಗುತ್ತದೆ.

ಚಿತ್ರ ೧ರಲ್ಲಿ ಬಹು ಸಂಕ್ಷಿಪ್ತ ನಿರ್ವಹಣೆ ಇದ್ದರೂ ಒಟ್ಟು ಚಿತ್ರ ಪೂರ್ಣವೆನಿಸುತ್ತದೆ. ಹಿನ್ನೆಲೆಯಲ್ಲಿ ಪರ್ವತ ಶ್ರೇಣಿ. ಪರ್ವತ ಶ್ರೇಣಿಗಳನ್ನು ಕೇವಲ ಏಕಪ್ರಕಾರವಾಗಿ ಚಿತ್ರಿಸದೇ ಸೃಷ್ಟಿಯಲ್ಲಿರುವಂತೆ ಉಬ್ಬು-ತಗ್ಗುಗಳನ್ನು ಅಲ್ಲಲ್ಲಿ ಛಾಯೆಗಳಿಂದ ತುಂಬಿಸಿದ್ದಾರೆ. ಹೀಗಾಗಿ ಆ ಪರ್ವತಗಳು ತ್ರಿಮಾನ ಕಲ್ಪನೆಯನ್ನು ಹುಟ್ಟುಹಾಕುತ್ತವೆ. ಮುನ್ನೆಲೆಯಲ್ಲಿ ಮೂರು ಮರಗಳನ್ನು ಅತ್ಯಂತ ಸೂಚ್ಯವಾದ ರೇಖೆ ಮತ್ತು ಛಾಯೆಗಳಿಂದ ಚಿತ್ರಿಸಿದ್ದಾರೆ. ಎಡ ಪಾರ್ಶ್ವದಲ್ಲಿ ಭೂ ಮೈವಳಿಕೆಯನ್ನು ದೂರದಲ್ಲಿ ಜ್ಯಾಮಿತಿಕ ನಿರ್ಮಿತಿಗಳಂತಹ ರಚನೆಯನ್ನು ಮಾಡುವುದರ ಮೂಲಕ ಯಥಾದರ್ಶನ ಸಿದ್ಧಾಂತವನ್ನು ಈ ಕೃತಿಯ ಮೂಲಕ ಪ್ರಕಟಗೊಳಿಸುತ್ತಾರೆ.

ಚಿತ್ರ೨ರಲ್ಲಿಯೂ ಕೂಡ ಹಿನ್ನೆಲೆಯಲ್ಲಿ ಪರ್ವತಶ್ರೇಣಿ, ಮುನ್ನೆಲೆಯಲ್ಲಿ ಮಾನವ ನಿರ್ಮಿತಿಗಳನ್ನು ಚಿತ್ರಿಸಲಾಗಿದೆ. ಬಲಭಾಗದಲ್ಲಿ ಕಡಿದಾದ ಬೆಟ್ಟದಂತಹ ರಚನೆ ಅದರ ಕೆಳಭಾಗದಲ್ಲಿ ರಸ್ತೆಯಂತಹ ರಚನೆಗಳು ಯಥಾದರ್ಶನ ಕೋನದಿಂದ ರಚಿಸಲ್ಪಟ್ಟಿವೆ. ಚಿತ್ರ ೧ಕ್ಕಿಂತ ಈ ಚಿತ್ರದಲ್ಲಿ ಛಾಯೆಗಳನ್ನು ಬಹು ವಿಧಗಳನ್ನಾಗಿಸಿ ದುಡಿಸಿಕೊಂಡು ಒಟ್ಟು ಚಿತ್ರದ ಪರಿಕಲ್ಪನೆಯಲ್ಲಿ ಉಬ್ಬು-ತಗ್ಗುಗಳ ಹಾಗೂ ಮುನ್ನೆಲೆ-ಹಿನ್ನೆಲೆಗಳ ಪ್ರಾಮುಖ್ಯತೆಯನ್ನು ಕಾಣಬಹುದಾಗಿದೆ.

ಒಟ್ಟಿನಲ್ಲಿ ಪೆನ್ಸಿಲ್ ಮಾಧ್ಯಮದ ಬಹುಸಾಧ್ಯತೆಗಳನ್ನು ಇಲ್ಲಿ ಸಮರ್ಥವಾಗಿ ದುಡಿಸಿಕೊಂಡಿರುವುದರಿಂದ ವಾತಾವರಣದಲ್ಲಿನ ಬದಲಾವಣೆಗಳನ್ನು ಸ್ಪಷ್ಟವಾಗಿ ಗ್ರಹಿಸಿರುವ ಹಿರೇಗೌಡರು ತಮ್ಮ ಅನನ್ಯ ಅನುಭವವನ್ನು ಒರೆಗೆ ಹಚ್ಚುವ ಪ್ರಯತ್ನವನ್ನು ಮಾಡಿದ್ದಾರೆ.

*******

೩:೨. ಶಾಯಿ ಮಾಧ್ಯಮ

ಪೆನ್ಸಿಲ್ ಮಾಧ್ಯಮಕ್ಕೂ ಶಾಯಿ ಮಾಧ್ಯಮಕ್ಕೂ ವಿಭಿನ್ನ ಸ್ತರದ ತಾಂತ್ರಿಕ ಸಾಧ್ಯತೆಗಳನ್ನು ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ಹೇಳಲಾಗಿದೆ. ಹಿರೇಗೌಡರು ತಮ್ಮ ವೃತ್ತಿ ಜೀವನದ ಸಂದರ್ಭದಲ್ಲಿ ಕಲಾಶಾಲೆಯಿಂದ ಬಾದಾಮಿ,ಐಹೊಳೆ, ಪಟ್ಟದಕಲ್ಲು, ಹಳೇಬೀಡು-ಬೇಲೂರು, ಹಂಪಿಗಳಲ್ಲಿ ಏರ್ಪಡಿಸುತ್ತಿದ್ದ ಯೋಜನಾ ಪ್ರವಾಸದ ಪರಿವೀಕ್ಷಣೆಗೆ ಹೋದಾಗ ವಿದ್ಯಾರ್ಥಿಗಳಿಗೆ ಪ್ರಾತ್ಯಕ್ಷಿಕೆ ನೀಡಿದ ಚಿತ್ರಗಳ ಜೊತೆಗೆ, ಅನ್ಯಕಾರ್ಯ ನಿಮಿತ್ತವಾಗಿ ವಿವಿಧ ಸ್ಥಳಗಳಿಗೆ ಪ್ರವಾಸಕ್ಕೆ ಹೋದಾಗ ರಚಿಸಿದ ಪ್ರಕೃತಿ ಚಿತ್ರಗಳನ್ನು ಶಾಯಿಯಿಂದ (ಇಂಕ್ ಪೆನ್) ರಚಿಸಿದ ಆಯ್ದ ಕೆಲವು ಪ್ರಕೃತಿ ಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

೧. ಹಂಪಿಯ ಬಂಡೆಗಳು, (೧೯೮೫)

ಕಲಾವಿದರಿಗೆ ಕಲೆಯ ಸ್ಫೂರ್ತಿ ನೀಡುವ ಹಂಪಿ ಬಂಡೆಗಳು ಸಾವಿರಾರು ವರ್ಷಗಳ ಪ್ರಾಕೃತಿಕ ಮತ್ತು ಚಾರಿತ್ರಿಕ ವಿಸ್ಮಯಗಳನ್ನು ತಿಳಿಸುವ ಶಾಸನಗಳು. ಇಂತಹ ಶಾಸನಗಳನ್ನು ಹಿರೇಗೌಡರು ಬಹಳಷ್ಟು ಸಂಖ್ಯೆಯಲ್ಲಿ ರಚಿಸಿದ್ದಾರೆ. ಅವುಗಳಲ್ಲಿ ಒಂದಾದ ಈ ಚಿತ್ರದಲ್ಲಿ ಪ್ರಮುಖವಾಗಿ ಗೋಚರವಾಗುವ ರೂಪಾಂಶಗಳು ಬಂಡೆಗಳು. ಕಾಗದದ ಅವಕಾಶವನ್ನು ಬೆಳಕಿನ ಛಾಯೆಯಾಗಿ ಹಾಗೆಯೇ ಉಳಿಸಿಕೊಂಡು ನೆರಳಿನ ಭಾಗದಲ್ಲಿ ಮಾತ್ರ ರೇಖೆಗಳಿಂದ ತುಂಬಿಸಿರುವ ಕ್ರಮವನ್ನು ಇಲ್ಲಿ ಅನುಸರಿಸಿದ್ದಾರೆ. ಬಂಡೆಗಳ ಬುಡದಲ್ಲಿನ ಗಿಡಗಂಟೆಗಳು, ಬಂಡೆಗಳ ಮೇಲಿನ ಛಾಯೆಯನ್ನು ಚಿಕ್ಕ ಚಿಕ್ಕ ರೇಖೆಗಳನ್ನು ಒಂದರ ಮೇಲೊಂದು ಎಳೆದಿರುವುದರಿಂದ ರೂಪಾಂಶಗಳು ತ್ರಿಮಾನದ ಅನುಭವವನ್ನು ನೀಡುತ್ತವೆ. ರೂಪಾಂಶಗಳನ್ನು ನೈಜ ನೆಲೆಯಲ್ಲಿಯೇ ಚಿತ್ರಿಸಿದ ಹಿರೇಗೌಡರು ಈ ಚಿತ್ರದ ಸಂಯೋಜನೆಯಲ್ಲಿ ಆಧುನಿಕ ಚಿಂತನಾ ಕ್ರಮವನ್ನು ಅನುಸರಿಸಿದ್ದು, ಕಾಗದದ ಅವಕಾಶವನ್ನು



೧. ಹಂಪಿಯ ಬಂಡೆಗಳು, ೧೯೮೫



೨. ಕಾವಲು ಗೋಪುರ, ಹಂಪಿ, ೧೯೮೫



೩. ಹೇಮಾವತಿ ಅಣೆಕಟ್ಟು, ೧೯೯೦



೪. ಸ್ವಾಗತ ಗಜವೃಂದ, ಧರ್ಮಸ್ಥಳ, ೧೯೯೧

(ಎಡ ಪಾರ್ಶ್ವದ ಮಧ್ಯೆ) ಹಾಗೆಯ ಬಿಟ್ಟಿರುವುದರಿಂದ ಮುಂದಿನ ಬಂಡೆಗಳಿಗೆ ಹಿಂದಿನ ಚಾರಿತ್ರಿಕ ಅವಶೇಷದ ನಡುವಿನ ದೂರದ ಅನುಭವವನ್ನು ನೀಡುತ್ತದೆ. ಆಕಾಶದಲ್ಲಿ ಯಾವುದೇ ಬಗೆಯ ಮೋಡಗಳ ಚಿತ್ತಾರವಿಲ್ಲದೇ ಇದ್ದರೂ ಚಿತ್ರವು ಚಳಿಗಾಲದ ವಾತಾವರಣವನ್ನು ಪ್ರತಿನಿಧಿಸುತ್ತದೆ.

**೨. ಕಾವಲು ಗೋಪುರ, ಹಂಪಿ** (೧೯೮೫)

ವಿಜಯನಗರ ಅರಸರಿಂದ ನಿರ್ಮಿತವಾದ ಹಂಪಿಯ ಕಮಲ್ ಮಹಲ್ ಆವರಣದಲ್ಲಿರುವ ಚಾರಿತ್ರಿಕ ಸ್ಮಾರಕವಾದ ಕಾವಲುಗೋಪುರವನ್ನು ಕಾಗದದ ಎಡಭಾಗದಲ್ಲಿ ಚಿತ್ರಿಸಿ ಇನ್ನುಳಿದ ಅವಕಾಶದಲ್ಲಿ ಕೋಟೆಯ ಗೋಡೆ ದೂರದ ಬೆಟ್ಟಗಳನ್ನು ಸಂಯೋಜಿಸಲಾಗಿದೆ. ಕಾವಲುಗೋಪುರ ಈ ಚಿತ್ರದ ಪ್ರಧಾನ ರೂಪಾಂಶ. ಈ ರೂಪಾಂಶದಲ್ಲಿ ಗೋಪುರದಲ್ಲಿನ ಪ್ರತಿಯೊಂದು ಸೂಕ್ಷ್ಮ ವಾಸ್ತು ವಿನ್ಯಾಸವನ್ನು ರಚಿಸಲಾಗಿದೆ. ಗೋಪುರದಲ್ಲಿ ಅಲ್ಲಲ್ಲಿ ಕಾಲನ ತುಳಿತಕ್ಕೆ ನಾಶವಾದ ಭಾಗವನ್ನು ಸಹ ಇಲ್ಲಿ ಕಾಣಬಹುದಾಗಿದೆ. ಗೋಪುರದ ಎತ್ತರವನ್ನು ಸೂಚಿಸುವುದಕ್ಕೆ ಕೆಳಗೆ ಮಾನವಾಕೃತಿಯನ್ನು ರಚಿಸಲಾಗಿದೆ. ಹಿನ್ನೆಲೆಯಲ್ಲಿ ಬಂಡೆಗಳನ್ನು ಸೂಚ್ಯವಾಗಿ ಚಿತ್ರಿಸಲಾಗಿದ್ದು ಪಕ್ವತೆಯಿಂದ ಕೂಡಿದ ಯಥಾದರ್ಶನದ ಕೋನದಿಂದಾಗಿ ಈ ಕಲಾಕೃತಿ ಮಹತ್ವದ್ದೆನಿಸುತ್ತದೆ.

**೩. ಹೇಮಾವತಿ ಅಣೇಕಟ್ಟು** (೧೯೯೦)

ಹಿರೇಗೌಡರ ಆಸಕ್ತಿ ಕೇವಲ ಪ್ರಾಕೃತಿಕ ಮತ್ತು ಚಾರಿತ್ರಿಕ ಸ್ಮಾರಕಗಳಿಗೆ ಸೀಮಿತಗೊಳ್ಳದೇ ಇತರ ಕುತೂಹಲಕರವೆನಿಸುವ ಆಧುನಿಕ ನಿರ್ಮಾಣಗಳತ್ತ ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸಿರುವುದಕ್ಕೆ ಹೇಮಾವತಿ ಅಣೆಕಟ್ಟಿನ ಚಿತ್ರ ಸೂಕ್ತ ನಿದರ್ಶನ. ರಾಜ್ಯದ ಪ್ರಮುಖ ಜಲಾಶಯಗಳಲ್ಲಿ ಒಂದಾದ ಹೇಮಾವತಿ ಅಣೆಕಟ್ಟಿನ ಆರು ಗೇಟುಗಳನ್ನು ಒಳಗೊಂಡ, ಅಷ್ಟೇ ಅಲ್ಲದೇ ಆ ಗೇಟುಗಳ ಪ್ರತಿಯೊಂದು ತಾಂತ್ರಿಕ ವಿನ್ಯಾಸವನ್ನು ವಿವರಪೂರ್ವಕವಾಗಿ ಚಿತ್ರಿಸಿರುವುದನ್ನು ಕಾಣಬಹುದು. ಅಣೆಕಟ್ಟಿನ ಬಲಭಾಗದಲ್ಲಿ ನಿಂತು ಚಿತ್ರಿಸಿರುವುದರಿಂದ ಪ್ರಕೃತಿ ಸಹಜವಾಗಿ ಎಡ ಪಾರ್ಶ್ವಕ್ಕೆ ಅಣೆಕಟ್ಟಿನ ಪ್ರತಿಯೊಂದು ಭಾಗವೂ ಕಿರಿದಾಗುತ್ತದೆ. ಇಂತಹ ಸೂಕ್ಷ್ಮ ಯಥಾದರ್ಶನ ಕೋನದ ಗ್ರಹಿಕೆಯುಳ್ಳ ಈ ಕಲಾಕೃತಿಯಲ್ಲಿ ನಿರ್ಮಿತಿಯ ಎತ್ತರ-ಅಗಲಗಳನ್ನು ಸೂಚಿಸಲು ಕಾಗದದ ಬಲಭಾಗದಲ್ಲಿ ರಚಿಸಿರುವ ಮಾನವಾಕೃತಿಗಳು ಬೆಂಬಲ ನೀಡಿವೆ.

**೪. ಸ್ವಾಗತ ಗಜವೃಂದ, ಧರ್ಮಸ್ಥಳ** (೧೯೯೧)

ಈ ಚಿತ್ರ ಎರಡು ಬಗೆಯಲ್ಲಿ ತನ್ನ ಅಸ್ತಿತ್ವವನ್ನು ಪ್ರತಿಪಾದಿಸುತ್ತದೆ. ಒಂದು ಪಿಕ್ಟೋರಿಯಲ್ ಸಂಯೋಜನೆ ನೆಲೆಯಲ್ಲಿ, ಇನ್ನೊಂದು ವಾಸ್ತುವಿನ ಭಾಗವಾಗಿ ಜೀವಿಗಳ ಸಂಯೋಜನೆ. ಧರ್ಮಸ್ಥಳದ ಮಂಜುನಾಥ ಸ್ವಾಮಿ ದೇವಳದ (ವಾಸ್ತುವಿನ) ಹಿನ್ನೆಲೆಯಲ್ಲಿ ಗಜವೃಂದ ಕ್ಷೇತ್ರಕ್ಕೆ ಬಂದ ಭಕ್ತವೃಂದವನ್ನು ಆಶೀರ್ವದಿಸುತ್ತಿರುವ ಸನ್ನಿವೇಶವನ್ನು ಹೊಂದಿದೆ. ಇಲ್ಲಿ ವಾಸ್ತು ಮತ್ತು ಜೀವಿಗಳ ಸನ್ನಿವೇಶ ಎರಡೂ ಪರಸ್ಪರ ಮಹತ್ವದ ರೂಪಾಂಶಗಳಾಗಿಯೇ ಗೋಚರವಾಗುತ್ತವೆ. ಹಿರೇಗೌಡರ ಬಹುತೇಕ



೫. ಹಂಪಿಯ ಅವಶೇಷಗಳು, ೧೯೯೧



೬. ಧರ್ಮಸ್ಥಳದ ಪ್ರವೇಶದ್ವಾರ, ೧೯೯೧

ಚಿತ್ರಗಳಲ್ಲಿ ನೀಲಾಕಾಶ ಭೂ ಮೇಲ್ಮೈ ಕಂಡು ಬಂದರೆ ಈ ಚಿತ್ರದಲ್ಲಿ ನೀಲಾಕಾಶ ಅಗೋಚರವಾಗಲು ಮುಖ್ಯ ಕಾರಣ ಗಜವೃಂದ. ಹೀಗಾಗಿ ಇದೊಂದು ಹತ್ತಿರದ (ಕ್ಲೋಸ್ ಅಪ್) ಕಲ್ಪನೆಯಲ್ಲಿ ಚಿತ್ರಿಸಿದ ಕಲಾಕೃತಿ.

**೫. ಹಂಪಿಯ ಅವಶೇಷಗಳು** (೧೯೯೧)

ವಿಸ್ತಾರವಾದ ಭೂ ಪ್ರದೇಶದ ಮಧ್ಯೆ ಹಂಪಿಯ ಚಾರಿತ್ರಿಕ ಸ್ಮಾರಕವನ್ನು ಕೇಂದ್ರೀಕರಿಸಿರುವ ಕೃತಿ ಇದು. ಭೂಪ್ರದೇಶದಲ್ಲಿನ ಬಂಡೆಗಳು, ಗಿಡಗಂಟೆಗಳನ್ನು ಯಥಾದರ್ಶನದ ಕೋನದಿಂದ ಚಿತ್ರಿಸಲಾಗಿದೆ. ಕಾಗದದ ಅರ್ಧ ಮೇಲ್ಭಾಗದಲ್ಲಿ ಅಳಿದುಳಿದ ಅವಶೇಷವನ್ನು ರಚಿಸಿದ್ದು, ಇದರ ಮುಂಭಾಗದಲ್ಲಿ ಹಾದುಹೋಗಿರುವ ನೀರು ಸರಬರಾಜು ಕೊಳವೆಯು ಅವಕಾಶದ ಎಡ ಭಾಗದಿಂದ ಅವಶೇಷದ ದ್ವಾರದ ಮೂಲಕವಾಗಿ ಒಳಭಾಗಕ್ಕೆ ಹೋದಂತೆ ಚಿತ್ರಿತಗೊಂಡಿದೆ. ಕಾಗದದ ಬಲ ಭಾಗದಲ್ಲಿ ಮಾನವಾಕೃತಿಗಳು ಸಹಜ ಕ್ರಿಯೆಯಲ್ಲಿರುವಂತೆ ರಚಿತಗೊಂಡಿದ್ದು ಒಟ್ಟು ಚಿತ್ರಣದ ಯಥಾದರ್ಶನದ ಕಲ್ಪನೆಯನ್ನು ಸಮರ್ಥವಾಗಿ ಬಿಂಬಿಸುತ್ತವೆ. ಇಲ್ಲಿ ಮುಂಭಾಗದ ಬಂಡೆಗಳನ್ನು ರೇಖಾ ಪ್ರಧಾನವಾದ ಛಾಯೆಗಳಿಂದ ತುಂಬಿಸಿ, ಅವಶೇಷದ ಎಡಭಾಗದಲ್ಲಿ ಗಿಡಗಂಟೆಗಳನ್ನು ದಟ್ಟತೆಯಿಂದ ಕೂಡಿರುವಂತೆ ಹಾಗೆಯೇ ಒಳಭಾಗದಲ್ಲೂ ಅಲ್ಪ ದಟ್ಟತೆ ಇರುವುದರಿಂದ ಅವಶೇಷ ಸ್ಪಷ್ಟವಾಗಿ ಕಾಣುತ್ತದೆ.

**೬. ಧರ್ಮಸ್ಥಳದ ಪ್ರವೇಶದ್ವಾರ** (೧೯೯೧)

ಧರ್ಮಸ್ಥಳದ ಪ್ರವೇಶದಲ್ಲಿ ಹೆದ್ದಾರಿಗಿರುವ ಪ್ರವೇಶದ್ವಾರ, ಅದರ ಅಕ್ಕಪಕ್ಕ ನಿರ್ಮಿಸಿರುವ ಮಂಟಪಗಳನ್ನು ಚಿತ್ರಿಸಿರುವ ಈ ಕೃತಿಯಲ್ಲಿ ಪಾರಂಪರಿಕ ವಿನ್ಯಾಸಗಳನ್ನು ಯಥಾದರ್ಶನದ ಕೋನದಿಂದ ಚಿತ್ರಿಸಿರುವ ಬಗೆಯನ್ನು ಕಾಣಬಹುದಾಗಿದೆ. ವಾಸ್ತುವಿನಲ್ಲಿನ ಸೂಕ್ಷ್ಮ ಪಾರಂಪರಿಕ ವಿನ್ಯಾಸಗಳನ್ನು ವಿವರವಾಗಿ ಗ್ರಹಿಸಿರುವ ಹಿರೇಗೌಡರು ಕಾಗದದ ಅವಕಾಶಕ್ಕೆ ತಕ್ಕ ಹಾಗೆ ಇಲ್ಲಿ ದುಡಿಸಿಕೊಂಡಿದ್ದಾರೆ. ಎಡಬಲಗಳಲ್ಲಿರುವ ಮಂಟಪಗಳು, ಅದಕ್ಕೆ ಹೊಂದಿಕೊಂಡಂತಿರುವ ಗಿಡ ಗಂಟೆಗಳು, ರಸ್ತೆಯಂಚಿಗೆ ನಿರ್ಮಿಸಿರುವ ತಡೆಗೋಡೆಗಳನ್ನು ಯಥಾದರ್ಶನದ ಕೋನಕ್ಕೆ ಧಕ್ಕೆ ಬಾರದ ಹಾಗೆ ಚಿತ್ರಿಸಿರುವ ಕ್ರಮವನ್ನು ಇಲ್ಲಿ ಕಾಣಬಹುದು. ನೆರಳು ಬೆಳಕಿನ ವ್ಯತ್ಯಾಸಗಳನ್ನು ಪರಿಣಾಮಕಾರಿಯಾಗಿ ಮತ್ತು ಸೂಚ್ಯವಾಗಿ ಮೂಡಿದ ಬಗೆಯಿಂದ ಈ ಕೃತಿ ಮಹತ್ವವನ್ನು ಪಡೆಯುತ್ತದೆ.

**೭. ಧರ್ಮಸ್ಥಳದ ಸ್ನಾನಘಟ್ಟ** (೧೯೯೫)

ಮಲೆನಾಡಿನ ಮಲೆಗಳ ಮಧ್ಯೆ ಹರಿಯುವ ನೇತ್ರಾವತಿ ನದಿಗೆ ಹೊಂದಿಕೊಂಡು ಇರುವ ಧರ್ಮಸ್ಥಳದ ಸ್ನಾನಘಟ್ಟ. ಬಹು ವಿಸ್ತಾರ ಪ್ರದೇಶವನ್ನು ಆಯ್ದುಕೊಂಡು ರಚಿಸಲಾದ ಪ್ರಕೃತಿ ಚಿತ್ರ. ಕಾಗದದ ಎಡ ಪಾರ್ಶ್ವದಲ್ಲಿ ಸ್ನಾನಘಟ್ಟದ ಮೆಟ್ಟಿಲುಗಳು ಮಧ್ಯದ ಕೆಳಭಾಗದಲ್ಲಿ ನೀರಿನ



೭ ಧರ್ಮಸ್ಥಳದ ಸ್ನಾನಘಟ್ಟ, ೧೯೯೫



೮. ರಾಯಚೂರಿನ ಕೋಟೆ, ೧೯೯೫



೯. ಬಾದಾಮಿ ಬೆಟ್ಟ, ೧೯೯೬



೧೦. ಗುಂಬಜ, ೧೯೯೬

ತೊರೆ, ಹಿಂದಕ್ಕೆ ಹೋದಂತೆಲ್ಲ ಗಿಡಮರಗಳ ರಚನೆಗಳು ಈ ಚಿತ್ರದಲ್ಲಿ ಮೂಡಿವೆ. ವಾಸ್ತು ಚಿತ್ರಣ ಇಲ್ಲಿ ಗೌಣ. ಪ್ರಾಕೃತಿಕ ಅಧ್ಯಯನವೇ ಪ್ರಾಮುಖ್ಯತೆ ಸಾಧಿಸುತ್ತದೆ. ನೀರತೊರೆ, ಗಿಡ ಮರಗಳಿಗೆ ರೇಖೆಗಳಿಂದ ಆವೃತ್ತವಾದ ಛಾಯೆ, ಆ ಛಾಯೆಯಲ್ಲೂ ಅಲ್ಲಲ್ಲಿ ದಟ್ಟತೆ ಹೀಗೆ ಏರಿಳಿತಗಳೊಂದಿಗೆ ಯಥಾದರ್ಶನದ ಕೋನದ ಸುಸ್ಪಷ್ಟ ನಿಲುವಿನೊಂದಿಗೆ ಒಟ್ಟು ಚಿತ್ರಣ ಸಾರ್ಥಕವೆನಿಸುತ್ತದೆ.

**೮. ರಾಯಚೂರಿನ ಕೋಟೆ** (೧೯೫೫)

ನಿಜಾಮರಿಂದ ಕಟ್ಟಲ್ಪಟ್ಟ ರಾಯಚೂರಿನ ಕೋಟೆ, ಅದರ ಸುತ್ತುವರೆದಿರುವ ಕಲ್ಲಿನ ದೈತ್ಯ ಬಂಡೆಗಳನ್ನು ಒಳಗೊಂಡ ರೇಖಾಪ್ರಧಾನವಾದ ಕಲಾಕೃತಿ ಇದು. ಮುನ್ನೆಲೆಯಲ್ಲಿ ಕಲ್ಲಿನ ಬಂಡೆಗಳನ್ನು ವಕ್ರ ರೇಖೆಗಳ ತುಣುಕುಗಳಿಂದ ನೆರಳಿನ ಭಾಗದಲ್ಲಿ ದಟ್ಟ ಛಾಯೆಯನ್ನು ಸೃಷ್ಟಿಸಿರುವ, ಬೆಳಕಿನ ಭಾಗದಲ್ಲಿ ಕಾಗದದ ಅವಕಾಶವನ್ನು ಹಾಗೆಯೇ ಬಿಟ್ಟಿರುವ (ಒಂದು ಕಟ್ ಲೈಟ್ ಮಾದರಿಯಲ್ಲಿ) ತಂತ್ರವನ್ನು ಇದು ಒಳಗೊಂಡಿದೆ. ಇದೇ ಬಗೆಯ ರಚನಾ ತಂತ್ರವನ್ನು ಹಿನ್ನೆಲೆಯಲ್ಲಿ ಚಿತ್ರಿತಗೊಂಡಿರುವ ಕೋಟೆಯ ಅವಶೇಷಗಳಲ್ಲೂ ಕಾಣಬಹುದಾಗಿದೆ. ಕಲಾಕೃತಿಯ ಒಟ್ಟಂದಕ್ಕೆ ಪೂರಕವಾಗುವಂತೆ ನೆರಳಿನ ಭಾಗದಲ್ಲಿ ರಚನಾ ಕೌಶಲ್ಯ ಕಂಡು ಬಂದರೆ ಬೆಳಕಿನ ಭಾಗದಲ್ಲಿ ಕಾಗದದ ಅವಕಾಶವನ್ನು ಹಾಗೆಯೇ ದುಡಿಸಿಕೊಂಡಿರುವುದರಿಂದ ಕೃತಿ ಪ್ರಾಕೃತಿಕ ಹಾಗೂ ಮಾನವ ನಿರ್ಮಿತ ವಸ್ತುಗಳು ಸ್ಪಷ್ಟತೆಯ ನೆಲೆಯಲ್ಲಿ ಪ್ರಕಟಗೊಳ್ಳುತ್ತವೆ.

**೯. ಬಾದಾಮಿ ಬೆಟ್ಟ** (೧೯೫೬)

ಚಾಲುಕ್ಯರು ಆಳಿದ ಬಾದಾಮಿ ಪರಿಸರದಲ್ಲಿ ಅನೇಕ ಪಾರಂಪರಿಕ ಸ್ಮಾರಕಗಳು ನಿರ್ಮಾಣಗೊಂಡಿವೆ. ಹಿರೇಗೌಡರು ಆ ಪರಿಸರದ ಕುರಿತು ಅನೇಕ ಕಲಾಕೃತಿಗಳನ್ನು ರಚಿಸಿದ್ದು, ಅವುಗಳಲ್ಲಿ ಈ ಒಂದು ಕೃತಿಯನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಚಿತ್ರದಲ್ಲಿ ಬಹು ವಿಸ್ತಾರವಾದ ಪ್ರಾಕೃತಿಕ ಮತ್ತು ಮಾನವ ನಿರ್ಮಿತ ನಿರ್ಮಿತಿಗಳನ್ನು ಒಂದೇ ನೋಟದಲ್ಲಿ, ಯಥಾದರ್ಶನದ ಪ್ರಬುದ್ಧ ಕೋನದಿಂದ ರಚಿಸಲಾಗಿದೆ. ಛಾಯೆಗಳು ಅಲ್ಪ ಪ್ರಮಾಣದಲ್ಲಿ ಮೂಡಿದರೆ, ಭೌತಿಕ ವಸ್ತುಗಳ ಹೊರ ರೇಖೆಗಳಿಂದ ಅವುಗಳಿಗೆ ಸ್ಪಷ್ಟ ರೂಪ ನೀಡಲಾಗಿದೆ. ಕಾಗದದ ಮೇಲ್ಭಾಗದಲ್ಲಿ ಶಿವಾಲಯ ಸೂಚ್ಯವಾಗಿ ಚಿತ್ರಿಸಲ್ಪಟ್ಟಿದ್ದರೆ, ಅದಕ್ಕೆ ಆಸರೆಯಾಗಿರುವ ಬಂಡೆಯನ್ನು ಎಡಭಾಗದಲ್ಲಿ ಛಾಯೆಗಳಿಂದಲೂ ಬಲಭಾಗದಲ್ಲಿ ರೇಖಾಂಶಗಳಿಂದಲೂ ರೂಪಿಸಲಾಗಿದೆ. ಕೆಳಗಿನ ಭಾಗದಲ್ಲಿ ಬಾದಾಮಿಯ ಹಳೆಯ ಊರಿನ ಮನೆಗಳು ಬಲಭಾಗದಲ್ಲಿ ಪುಷ್ಕರಣಿಯ ಮೆಟ್ಟಿಲುಗಳನ್ನು ರೇಖಾ ಪ್ರಧಾನವಾಗಿ ಚಿತ್ರಿಸಲಾಗಿದೆ. ಸೂಚ್ಯವಾಗಿರುವ ತೆಂಗಿನ ಮತ್ತು ಇತರೆ ಗಿಡ ಮರಗಳೊಂದಿಗೆ ಕೆಳಭಾಗದಲ್ಲಿ ಮೂರು ಮಾನವಾಕೃತಿಗಳು ಒಟ್ಟು ಪರಿಸರದ ಯಥಾದರ್ಶನ ವಾತಾವರಣಕ್ಕೆ ಪೂರಕ ಭಾವಸ್ಪರ್ಶ ನೀಡಿವೆ.

**೧೦. ಗುಂಬಜ** (೧೯೫೬)

ವಿಜಾಪುರದ ಆದಿಲ್‌ಶಾಹಿ ಮನೆತನದವರು ನಗರದಾದ್ಯಂತ ಅನೇಕ ಮಸೀದಿಗಳನ್ನು, ಗುಂಬಜಗಳನ್ನು ನಿರ್ಮಿಸಿದ್ದಾರೆ. ಅದರಲ್ಲಿ ಒಂದಾದ ಜೋಡ ಗುಂಬಜಗಳಲ್ಲಿ ಒಂದು ಗುಂಬಜವನ್ನು



೧೧. ಬಾದಾಮಿ ಕೋಟೆ, ೧೯೯೬



೧೨. ಮಹಾನವಮಿ ದಿಬ್ಬ, ಹಂಪಿ, ೧೯೯೬

ಆಯ್ದು ಚಿತ್ರಿಸಿದೆ. ಎಡಭಾಗದಲ್ಲಿ ಚಿತ್ರಿತಗೊಂಡ ಗುಂಬಜನ ಎದುರಿರುವ ಗುಂಬಜನ ಅಲ್ಪ ಭಾಗವನ್ನು ಚಿತ್ರಿಸಿರುವುದರಿಂದ ಪೂರ್ಣವಾಗಿ ಚಿತ್ರಿತಗೊಂಡಿರುವ ಗುಂಬಜನ ಎತ್ತರಗಲಗಳು ಅನುಭವಕ್ಕೆ ನಿಲುಕುತ್ತದೆ. ಗುಂಬಜನ ಎಲ್ಲ ಬಗೆಯ ಅಲಂಕಾರಿಕ ವಿನ್ಯಾಸಗಳು ವಿವರಪೂರ್ಣವಾಗಿ ಛಾಯೆಗಳ ಮುಖಾಂತರ ಚಿತ್ರಿತಗೊಂಡಿವೆ. ಭೂಮಿಯ ಆಳದಲ್ಲಿ ಹುದುಗಿ ಹೋಗಿರುವಂತೆ ಚಿತ್ರಿತಗೊಂಡಿರುವ ಗುಂಬಜನ್ನು ಸುತ್ತುವರೆದಿರುವ ಗಿಡಗಂಟೆಗಳು ಸೂಚ್ಯ ರಚನಾ ತಂತ್ರವಿದೆ. ಬಹುತೇಕ ಕಲಾವಿದರು ಪ್ರಕೃತಿ ಚಿತ್ರ ರಚನಾ ಸಂದರ್ಭದಲ್ಲಿ ಮಾನವಾಕೃತಿಗಳನ್ನು ಮಾತ್ರ ದುಡಿಸಿಕೊಂಡರೆ, ಹಿರೇಗೌಡರು ವಾಸ್ತವ ಸಂದರ್ಭದಲ್ಲಿ ಕಂಡುಬರುವ ಕಾಗೆಗಳನ್ನು ಸಹ ಗುಂಬಜನ ಮೇಲ್ಗಡೆ ಚಿತ್ರಿಸಿ ವಾಸ್ತುವಿನ ಒಟ್ಟಂದಕ್ಕೆ ಯಥಾದರ್ಶನ ಪ್ರಜ್ಞೆ ವಾತಾವರಣವನ್ನು ತಂದೊಡ್ಡಿದ್ದಾರೆ.

**೧೧. ಬಾದಾಮಿ ಕೋಟೆ (೧೯೯೬)**

ಬಾದಾಮಿಯ ಮೇಣಬಸದಿಗಳ ಬೃಹತ್ ಬಂಡೆಗಳ ಮೇಲೆ ಟಿಪ್ಪು ಸುಲ್ತಾನನಿಂದ ನಿರ್ಮಾಣಗೊಂಡ ಕೋಟೆಯ ಚಿತ್ರವಿದು. ರಾಯಚೂರಿನ ಕೋಟೆಯ ಚಿತ್ರ ರಚನಾ ತಂತ್ರಕ್ಕೂ ಈ ಚಿತ್ರದ ರಚನಾ ತಂತ್ರಕ್ಕೂ ವ್ಯತ್ಯಾಸವಿದೆ. ಕೋಟೆ, ಬಂಡೆಗಳ ಮೇಲಿನ ಛಾಯೆಯಲ್ಲಿ ರೇಖೆಗಳ ದಟ್ಟತೆಯಿದೆ. (ರಾಯಚೂರಿನ ಕೋಟೆಯ ಚಿತ್ರದ ಛಾಯೆಯಲ್ಲಿ ರೇಖೆಗಳು ಬಿಡಿ ಬಿಡಿಯಾಗಿವೆ) ನೆರಳು ಬೆಳಕನ್ನು ಹಂತ ಹಂತವಾಗಿ ಮಿಶ್ರ ಮಾಡಿರುವ ತಂತ್ರ ಈ ಚಿತ್ರದಲ್ಲಿದ್ದು ಕಾಗದದ ಎಡಭಾಗದಲ್ಲಿ ಒಟ್ಟು ರೂಪಾಂಶಗಳು ಸಂಯೋಜನೆಗೊಂಡ ಬಗೆ ಇದೆ. ಇನ್ನುಳಿದ ಕಾಗದದ ಅವಕಾಶದಲ್ಲಿ ಹಿರೇಗೌಡರ ಎಂದಿನ ರೇಖಾ ಲಾಲಿತ್ಯದ ಹರಿವು ಇದೆ. ಬಂಡೆಗಳೇ ಪ್ರಧಾನವಾಗಿ ಚಿತ್ರಿತಗೊಂಡ ಈ ಕೃತಿಯಲ್ಲಿ ಕೋಟೆ ಅತ್ಯಂತ ಕಿರಿದಾಗಿ ರಚನೆಗೊಂಡಿದ್ದು, ಕೋಟೆಯ ಮೇಲ್ಗಡೆ ಮಾನವಾಕೃತಿಗಳ ಮೇಳವು ಕೃತಿಯ ಒಟ್ಟಂದವನ್ನು ಹೆಚ್ಚಿಸಿದೆ.

**೧೨. ಮಹಾನವಮಿ ದಿಬ್ಬ (೧೯೯೬)**

ವಿಜಯನಗರದ ದಸರಾ ಉತ್ಸವದ ಮಂಟಪಕ್ಕೆ 'ಮಹಾನವಮಿ ದಿಬ್ಬ'ವೆಂದು ಕರೆಯುವುದು ವಾಡಿಕೆ. ಮಹಾನವಮಿ ಎಡ ಪಾರ್ಶ್ವದ ನೋಟದಿಂದ ರಚಿತವಾದ ಕೃತಿಯಿದು. ಹೀಗಾಗಿ ಮಹಾನವಮಿ ದಿಬ್ಬದ ಸುತ್ತಲಿನ ಪರಿಸರವೆಲ್ಲ ಈ ಚಿತ್ರದ ಆಶಯಗಳಾಗಿವೆ. ೯೦ರದಶಕದ ಉತ್ಖನನದಲ್ಲಿ ದೊರೆತ ಕಪ್ಪು ಕಲ್ಲಿನ ಪುಷ್ಕರಣಿ, ಪುಷ್ಕರಣಿಗೆ ನೀರೊದಗಿಸುವ ಕಲ್ಲಿನ ಕಾಲುವೆ, ಅರಮನೆ, ಹಿನ್ನೆಲೆಯಲ್ಲಿ ಬಂಡೆಗಳಿಂದ ಆವೃತ್ತವಾದ ಬೆಟ್ಟ, ಇತರೆ ಅವಶೇಷಗಳೆಲ್ಲವೂ ಇಲ್ಲಿ ಕಂಡುಬರುತ್ತವೆ. ಇಲ್ಲಿ ಮಹಾನವಮಿ ದಿಬ್ಬದ ಶಿಲ್ಪ ಸೌಂದರ್ಯವಿಲ್ಲ. ಆದರೆ ದಿಬ್ಬದ ನಿರ್ಮಾಣದ ಹಂತಗಳು ಮಾತ್ರ ಕಾಣಸಿಗುತ್ತವೆ. ಇಲ್ಲಿನ ವಸ್ತುಗಳಿಗೆ ಅತ್ಯಂತ ಸೂಚ್ಯವಾದ ನೆರಳು ಬೆಳಕಿನ ಲೇಪನವಿದ್ದರೆ, ಆ ವಸ್ತುಗಳ ಬಳಿ ಕುತೂಹಲದಿಂದ ನೋಡುವ ಪ್ರವಾಸಿಗರ ಆಕೃತಿಗಳು ಇಡೀ ಚಿತ್ರಣದ ಯಥಾದರ್ಶನದ ನಿರ್ಮಿತಿಗಳ ಉದ್ದಗಲಗಳ ವ್ಯತ್ಯಾಸವನ್ನು ಅಳೆದು ತೋರಿಸುತ್ತವೆ. ಹಿರೇಗೌಡರ ಬಹುತೇಕ ಪ್ರಕೃತಿ ಚಿತ್ರಗಳು ವಿಶಾಲವಾದ ಭೂಪ್ರದೇಶವನ್ನೊಳಗೊಂಡಿರುತ್ತವೆ ಎಂಬುದಕ್ಕೆ ಈ ಕೃತಿ ಒಂದು ನಿದರ್ಶನ.



೧೩. ಹಳೇಬೀಡು ದೇವಾಲಯದ ಆವರಣ, ೧೯೯೬



೧೪. ಕಮಲ್ ಮಹಲ್, ಹಂಪಿ, ೧೯೯೭

### ೧೩. ಹಳೇಬೀಡು ದೇವಾಲಯದ ಆವರಣ, (೧೯೯೬)

ಹೊಯ್ಸಳ ಶಿಲ್ಪಕಲೆಯ ರಾಜಧಾನಿ ಎನ್ನಬಹುದಾದ, ವಿಷ್ಣುವರ್ಧನನು ನಿರ್ಮಿಸಿದ ಹಳೇಬೀಡಿನ ದೇವಾಲಯದ ಆವರಣದ ಚಿತ್ರವಿದು. ಕೃತಿಯ ಮುಖ್ಯ ಆಶಯ ಪ್ರಾಕೃತಿಕ ರಚನೆಯನ್ನು ಹೊಂದಿದ್ದು, ಹಳೇಬೀಡಿನ ದೇವಾಲಯಗಳ ಸಮುಚ್ಚಯವು ಹಿನ್ನೆಲೆಯಲ್ಲಿ ಪ್ರಕಟಗೊಂಡಿರುವುದರಿಂದ ದೇವಾಲಯಗಳ ಆವರಣದ ಪರಿಸರವನ್ನು ಉದ್ದೇಶಿಸಿ ರಚಿತವಾಗಿದೆ. ಹಿರೇಗೌಡರ ರಚನಾ ಆಸಕ್ತಿ ಈ ಕೃತಿಯಲ್ಲಿ ಎಲ್ಲ ವಸ್ತುಗಳಲ್ಲೂ ಅಡಗಿರುವುದನ್ನು ಹಿನ್ನೆಲೆ–ಮುನ್ನೆಲೆ–ಇಕ್ಕೆಲಗಳಲ್ಲಿಯೂ ಸಹ ನೆರಳು ಬೆಳಕಿನ ಚಿತ್ತಾರವನ್ನು ಮೂಡಿಸಿರುವುದರಲ್ಲಿ ಕಾಣಬಹುದು. ಕಾಗದದ ಕೆಳಭಾಗದ ಹಿನ್ನೆಲೆಯಲ್ಲಿ ದೇವಾಲಯದ ಕಂಬಗಳು ಸಣ್ಣ ಗೋಪುರಗಳ ವಿನ್ಯಾಸವನ್ನು ವಿವರವಾಗಿ ಚಿತ್ರಿಸಿರುವ ಬಗೆಯಿದೆ. ಮುನ್ನೆಲೆಯಲ್ಲಿ ಈ ಹಿಂದೆ ಹೇಳಿರುವ ಹಾಗೆ ಕೃತಿಯ ಮುಖ್ಯ ಆಶಯವಾಗಿರುವ ಮರದ ವಿನ್ಯಾಸದಲ್ಲಿ ಪ್ರತಿಯೊಂದು ಟೊಂಗೆಗಳನ್ನು ನೆರಳು ಬೆಳಕಿನ ಛಾಯೆಗಳಿಂದ ವಿವರಪೂರ್ಣವಾಗಿ ಚಿತ್ರಿಸಲಾಗಿದೆ.

### ೧೩. ಕಮಲ್ ಮಹಲ್, ಹಂಪಿ (೧೯೯೬)

ವಿಜಯನಗರದ ವಾಸ್ತುಶಿಲ್ಪಕ್ಕೆ ವಿಶ್ವ ಮಾನ್ಯತೆ ತಂದುಕೊಟ್ಟ ಕಮಲ್ ಮಹಲ್ ಚಿತ್ರ ಕಲಾವಿದರ ಪಾಲಿಗೆ ಯಥಾದರ್ಶನ ಪ್ರಜ್ಞೆಯನ್ನು ಪರೀಕ್ಷಿಸುವ ಒಂದು ಪರೀಕ್ಷಾ ಕೇಂದ್ರವೆಂದರೆ ಅತಿಶಯೋಕ್ತಿಯೇನಲ್ಲ. ಬಹುತೇಕ ಕಲಾವಿದರು ಹಂಪಿಯ ಹೆಬ್ಬಂಡೆಗಳನ್ನು ರಚಿಸಲು ತೋರಿಸುವ ಉತ್ಸಾಹವನ್ನು ಈ ಕಮಲ್ ಮಹಲ್‌ನ್ನು ಚಿತ್ರಿಸುವುದರಲ್ಲಿ ತೋರಿಸುವುದು ಅಪರೂಪ. ಏಕೆಂದರೆ ಅಷ್ಟಕೋನಗಳಿಂದ ನಿರ್ಮಾಣವಾದ ಮಹಲಿನ ಯಥಾದರ್ಶನದ ಕೋನಗಳನ್ನು ಕಂಡರಿಸುವುದು ಕಷ್ಟ ಸಾಧ್ಯ. ಯಥಾದರ್ಶನದ ಸ್ಪಷ್ಟ ಪ್ರಜ್ಞೆ, ಆಳವಾದ ಅನುಭವ ಇದ್ದರೆ ಮಾತ್ರ ಈ ಮಹಲಿನ ದೃಶ್ಯ ಕಾವ್ಯವನ್ನು ವಾಚಿಸಬಹುದು ಎಂಬುದಕ್ಕೆ ಈ ಕಲಾಕೃತಿ ಒಂದು ನಿದರ್ಶನ.

ಕಾಗದದ ಬಲಭಾಗದಲ್ಲಿ ಸಂಯೋಜನೆಗೊಂಡಿರುವ ಕಮಲ್ ಮಹಲಿನ ವಾಸ್ತು ವಿನ್ಯಾಸದ ವಿವರ ಸ್ಪಷ್ಟವಾಗಿ ದಕ್ಕುತ್ತದೆ. ವಾಸ್ತುವಿನ ಮೇಲ್ಭಾಗದಲ್ಲಿ ಮೂರು ಗೋಪುರಗಳು, ಮೊದಲ ಮತ್ತು ನೆಲ ಅಂತಸ್ತಿನ ಪುಷ್ಪಾವರಣದ ಕಮಾನುಗಳ ವಿವರಗಳನ್ನು ಬಹುತೇಕ ನೆರಳಿನ ಛಾಯೆಗಳ ಬೆಂಬಲದಿಂದ ವಾಸ್ತುವನ್ನು ತ್ರಿಮಾನದ ಅನುಭವಕ್ಕೆ ತರುವ ಬಗೆ ಇಲ್ಲಿದೆ. ಬೆಳಕಿನ ಛಾಯೆ ಎಡಭಾಗದಿಂದ ಬಂದಿರುವುದರಿಂದ ವಾಸ್ತು ಬಹುತೇಕವಾಗಿ ನೆರಳಲ್ಲೇ ಮೂಡಿದರೆ, ಬೆಳಕಿನ ಛಾಯೆ ಅಲ್ಪ ಬಗೆಯಲ್ಲಿದ್ದರೂ ವಾಸ್ತುವಿನ ನೋಟಕ್ಕೆ ಧಕ್ಕೆಯಾಗದೇ ವಿಶಿಷ್ಟ ದೃಶ್ಯಾತ್ಮಕ ಅನುಭವವನ್ನು ನೀಡುತ್ತದೆ. ಹಿನ್ನೆಲೆಯಲ್ಲಿ ಕೋಟೆಯ ಗೋಡೆ, ಕಾಗದದ ಅಂಚಿನಲ್ಲಿ ಕಂಡು ಬರುವ ಮರಗಳ ಟೊಂಗೆಗಳು ಚಿತ್ರಕ್ಕೆ ಅಲಂಕಾರದ ಮೆರಗನ್ನು ತಂದಿವೆ. ಈ ಕೃತಿಯಲ್ಲಿ ಮಾನವಾಕೃತಿಗಳು ಗೌಣವಾಗಿದ್ದರೂ ಕಾಗದದ ಎಡಭಾಗದಲ್ಲಿ ರಚಿಸಿರುವ ನಾಮಫಲಕದ ಕಂಬ ಮಹಲಿನ ಉದ್ದಗಲಗಳ ಅನುಭವವನ್ನು ನೀಡುತ್ತದೆ.

**ಉಪಸಂಹಾರ**

ಹಿರೇಗೌಡರು ಶಾಯಿ ಮಾಧ್ಯಮದಿಂದ ಅನೇಕ ಪ್ರಕೃತಿ ರೇಖಾ ಚಿತ್ರಗಳನ್ನು ರಚಿಸಿದ್ದು, ಅವುಗಳಲ್ಲಿ ೧೪ ರೇಖಾಚಿತ್ರಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಇಲ್ಲಿನ ಹದಿನಾಲ್ಕು ರೇಖಾಚಿತ್ರಗಳು ಬಹುತೇಕವಾಗಿ ವಿಭಿನ್ನ ನೆಲೆಯಲ್ಲಿ ಸಂಯೋಜನೆಗೊಂಡದ್ದರಿಂದ, ಪ್ರತಿ ಕಲಾಕೃತಿಯಲ್ಲಿಯೂ ಅನನ್ಯ ರಸಾನುಭವ ವ್ಯಕ್ತವಾಗುತ್ತದೆ. ಇಲ್ಲಿನ ಪ್ರಕೃತಿ ಚಿತ್ರಗಳ ಅಧ್ಯಯನದಿಂದ ಕಂಡುಬರುವ ಪ್ರಮುಖ ಫಲಿತವೆಂದರೆ ಹಿರೇಗೌಡರು ಪ್ರಕೃತಿ ಚಿತ್ರಣಕ್ಕೆ ವಿಶಾಲವಾದ ಭೂಪ್ರದೇಶವನ್ನು ಆಯ್ಕೆ ಮಾಡಿಕೊಂಡು, ಅದರಲ್ಲಿ ಪ್ರಮುಖ ವಾಸ್ತುವೊಂದನ್ನು ಅಥವಾ ಪ್ರಾಕೃತಿಕ ವಸ್ತುವೊಂದನ್ನು ಚಿತ್ರದ ಮೂಲ ಆಶಯವಾಗಿಟ್ಟುಕೊಂಡು ರಚಿಸುವ ತಂತ್ರವನ್ನು ಅನುಸರಿಸುತ್ತಾರೆ. ಹಿನ್ನೆಲೆಯಲ್ಲಿ ಭೂಪ್ರದೇಶವನ್ನು ಯಥಾದರ್ಶನದ ಸಿದ್ಧಾಂತದ ಜಾಡಿನಲ್ಲಿ ರಚಿಸುವುದರಿಂದ ಚಿತ್ರಗಳು ಪ್ರಮಾಣ ಮತ್ತು ವಾತಾವರಣಕ್ಕೆ ಬದ್ಧವಾಗಿ ಗೋಚರವಾಗುತ್ತವೆ.

ಹಿರೇಗೌಡರು ಪ್ರಕೃತಿ ರೇಖಾ ಚಿತ್ರಣಗಳಲ್ಲಿ ನೆರಳು ಬೆಳಕಿನ ವ್ಯತ್ಯಾಸಗಳನ್ನು ಪ್ರಬುದ್ಧವಾಗಿ ತೋರ್ಪಡಿಸುತ್ತಾರೆಂಬುದನ್ನು ಇಲ್ಲಿರುವ ಚಿತ್ರಗಳಲ್ಲಿ ಕಂಡುಕೊಳ್ಳಬಹುದಾಗಿದೆ. ನೆರಳು ಬೆಳಕಿನ ಛಾಯೆಗಳನ್ನು ಗುರುತಿಸುವಾಗ ವಿಭಿನ್ನ ತಂತ್ರಗಳನ್ನು ಅನುಸರಿಸಿರುವುದಕ್ಕೆ ಚಿತ್ರ ೮ ಮತ್ತು ೯ ನಿದರ್ಶನಗಳಾಗುತ್ತವೆ. ಎರಡೂ ಚಿತ್ರಗಳಲ್ಲಿ ವಿಶಾಲವಾದ ಭೂಪ್ರದೇಶವನ್ನೇ ಚಿತ್ರಿಸಿದ್ದರೂ ಅಲ್ಲಿನ ವಸ್ತುಗಳಿಗೆ ತಕ್ಕಂತೆ ಛಾಯೆಗಳನ್ನು ವಿಭಿನ್ನವಾಗಿ ದುಡಿಸಿಕೊಂಡಿರುವ ಬಗೆಯನ್ನು ಕಾಣಬಹುದಾಗಿದೆ. ಧರ್ಮಸ್ಥಳದ ಮೂರು ಚಿತ್ರಗಳು ಏಕ ಪ್ರಕಾರವಾದ ನಿರ್ವಹಣೆಯನ್ನು ಹೊಂದಿದರೆ, ಹಂಪಿ ಬಂಡೆಗಳ ಚಿತ್ರಗಳು ಬೇರೊಂದು ಬಗೆಯ ತಂತ್ರಗಾರಿಕೆಯನ್ನು ಹೊಂದಿವೆ. ಹೀಗೆ ಹಿರೇಗೌಡರು ಪ್ರಕೃತಿ ಚಿತ್ರಗಳ ರಚನೆಯ ನೆಲೆಯಲ್ಲಿ ಅನೇಕ ಬಗೆಯ ಪ್ರಾಯೋಗಿಕವಾದ ತಂತ್ರಗಳನ್ನು ದುಡಿಸಿಕೊಳ್ಳುವ ಬೌದ್ಧಿಕ ಮನಸ್ಸುಳ್ಳವರಾಗಿದ್ದಾರೆ.

********

### ೩.೩. ಕ್ರೆಯಾನ್

ಹಿರೇಗೌಡರ ಪ್ರಯೋಗಶೀಲತೆಯಲ್ಲಿ ಕ್ರೆಯಾನ್ ಕೂಡ ಪ್ರಮುಖ ಮಾಧ್ಯಮವಾಗಿದೆ. ಈ ಮಾಧ್ಯಮದ ಸಾಧ್ಯತೆಗಳನ್ನು ಈಗಾಗಲೇ ಭಾವಚಿತ್ರದ ಅಧ್ಯಯನ ಸಂದರ್ಭದಲ್ಲಿ ಹೇಳಲಾಗಿದೆ. ಹಿರೇಗೌಡರಿಗೆ ಶಾಯಿ ಮಾಧ್ಯಮ ಆಪ್ತವಾಗಿದ್ದರೂ, ಬೇರೆ ಬೇರೆ ಮಾಧ್ಯಮಗಳನ್ನು, ಆಯಾ ಮಾಧ್ಯಮಗಳ ತಾಂತ್ರಿಕ ರಚನಾ ಸಾಧ್ಯತೆಗಳನ್ನು ಅರಿತುಕೊಂಡು ಚಿತ್ರ ರಚನೆಗೆ ದುಡಿಸಿಕೊಳ್ಳುವ ಬಗೆಯನ್ನು ಇಲ್ಲಿ ಕಾಣಬಹುದಾಗಿದ್ದು, ಹಿರೇಗೌಡರ ಎರಡು ಆಯ್ದ ಕ್ರೇಯಾನ್ ಮಾಧ್ಯಮದ ಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**೧. ಹಂಪಿ ಅವಶೇಷಗಳು (೧೯೮೫)**

ಚಿತ್ರ ೧ರಲ್ಲಿ ಹಂಪಿಯ ಉತ್ಖನನದಲ್ಲಿ ಪತ್ತೆಯಾದ ಪುಷ್ಕರಣಿಯ ವಿನ್ಯಾಸ ಕಾಗದದ ಎಡಭಾಗದಲ್ಲಿ ಚಿತ್ರಿತಗೊಂಡಿದ್ದು, ಇನ್ನುಳಿದ ಭಾಗವನ್ನು ಪ್ರಾಚೀನ ಪರಂಪರೆಯ ಅವನತಿ ಇಂದಿನ ಜನರಿಂದ ಹೇಗೆ ಕ್ಷೀಣಿಸುತ್ತದೆ ಎಂಬ ವಿಡಂಬನೆಯನ್ನು ಹೊಂದಿದೆ. ಈ ಚಿತ್ರದಲ್ಲಿ ಇಂದಿನ ನಾಗರಿಕರು ಹಂಪಿಯಲ್ಲಿ ತಮ್ಮ ವಾಸಕ್ಕಾಗಿ ಸ್ಮಾರಕಗಳನ್ನು ಆಕ್ರಮಿಸಿಕೊಂಡ ಸನ್ನಿವೇಶವನ್ನು ಯಥಾವತ್ತಾಗಿ ರಚಿಸದೇ ಅದನ್ನು ಸೂಚ್ಯವಾಗಿಸಿಕೊಂಡ ಬಗೆ ಇದೆ. ಕಂಬಗಳು, ವಿಜಯನಗರ ಶೈಲಿಯ ವಾಸ್ತುವಿನ ವಿನ್ಯಾಸಗಳು ಅಲ್ಲಲ್ಲಿ ಕಂಡುಬರುತ್ತವೆ. ಕಾಗದದ ಮಧ್ಯಭಾಗದಲ್ಲಿ ಮತ್ತು ಎಡಭಾಗದಲ್ಲಿ ಎರಡು ಮಾನವಾಕೃತಿಗಳನ್ನು ಅತ್ಯಂತ ಸಂಕ್ಷಿಪ್ತ ಕ್ರೇಯಾನ್ ಬೀಸುಗಳಿಂದ ರಚಿಸಿದ್ದು, ಅವುಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ತುಂಬ ವಿವರ ಪೂರ್ಣವಾದ, ಚಲನಾತ್ಮಕ ಭಾವವನ್ನು ಪ್ರಕಟಪಡಿಸುತ್ತವೆ. ಕ್ರೆಯಾನ್‌ನಿನ ದಟ್ಟವಾದ ಬೀಸುಗಳೇ ಈ ಚಿತ್ರದ ಜೀವಾಳವೆನ್ನಬಹುದು. ಆ ಬೀಸುಗಳಿಂದಲೇ ಇಲ್ಲಿ ಪೂರ್ಣ ಪ್ರಮಾಣದ ವಾಸ್ತುಗಳ ರಚನೆಯಾಗಿದ್ದು ಈ ಕೃತಿಯ



೧. ಹಂಪಿ ಅವಶೇಷಗಳು, ೧೯೮೫



೨. ಹಂಪಿ ಅವಶೇಷಗಳು, ೧೯೯೦

ವಿಶೇಷತೆ. ಪ್ರಕೃತಿ ಚಿತ್ರವೊಂದನ್ನು ಯಥಾವತ್ತಾಗಿ ಚಿತ್ರಿಸುವುದು ಒಂದು ಬಗೆಯಾದರೆ, ಪಾರಂಪರಿಕ ಸ್ಥಳಗಳನ್ನು ಮತ್ತು ಅದರ ಇಂದಿನ ಸ್ಥಿತಿ ಗತಿಗಳನ್ನು ಸೃಜನಾತ್ಮಕವಾಗಿ ಪ್ರಕೃತಿಚಿತ್ರ ಬಗೆಯಲ್ಲಿ ಚಿತ್ರಿಸುವುದು ಇನ್ನೊಂದು ಬಗೆಯಿದೆ ಎಂಬ ದೃಶ್ಯ ಸಿದ್ಧಾಂತ ನಮಗೆ ಪ್ರಾಪ್ತವಾಗುತ್ತದೆ. ವಿನೂತನವೆನ್ನಬಹುದಾದ ಇಂತಹ ಅನೇಕ ಪ್ರಾಯೋಗಿಕ ನೆಲೆಯ ದೃಶ್ಯ ಸಿದ್ಧಾಂತಗಳು ಹಿರೇಗೌಡರ ಕಲಾಕೃತಿಗಳಲ್ಲಿ ಹೇರಳವಾಗಿವೆ. ಇಂತಹ ಕಲಾಕೃತಿಯ ರಚನೆಯ ಹಿನ್ನೆಲೆಯಲ್ಲಿ ಹಿರೇಗೌಡರಿಗೆ ಇರುವ ಪಾರಂಪರಿಕ ಕಳಕಳಿ ವ್ಯಕ್ತವಾಗುತ್ತದೆ.

**೨. ಹಂಪಿ ಅವಶೇಷಗಳು (೧೯೯೦)**

೨ನೆಯ ಚಿತ್ರದಲ್ಲಿ ಮೊದಲನೆಯ ಚಿತ್ರದಲ್ಲಿರುವ ವಿಡಂಬನೆ ಗೌಣ. ಇದರ ಉದ್ದೇಶವೇ ಬೇರೆ. ಹಂಪಿಯಲ್ಲಿ ಕಳೆದ ಹಲವಾರು ವರ್ಷಗಳಿಂದ ಉತ್ಖನನ ಕಾರ್ಯಕ್ರಮ ನಡೆಯುತ್ತಿದೆ. ಹೊಸ ಹೊಸ ನೆಲೆಗಳು, ವಾಸ್ತುಗಳು ನಿತ್ಯ ಗೋಚರವಾಗುತ್ತಿವೆ. ಈ ಹಿನ್ನೆಲೆಯಲ್ಲಿ ೮೦ರ ದಶಕದ ಅಂತ್ಯದ ಉತ್ಖನನದಲ್ಲಿ ಮಹಾನವಮಿ ದಿಬ್ಬದ ಬಳಿ ಕಪ್ಪು ಶಿಲೆಯಿಂದ ನಿರ್ಮಾಣಗೊಂಡಿದ್ದ ಸುಂದರ ಪುಷ್ಕರಣಿ, ಅದಕ್ಕೆ ನೀರೊದಗಿಸುವ ನೀರ್ಗಾಲುವೆಗಳು ಸಂಶೋಧಕರಿಂದ ಉತ್ಖನನಗೊಂಡವು. ಈ ಪುಷ್ಕರಣಿ ಈ ಚಿತ್ರದಲ್ಲಿ ಗೋಚರವಾಗುವ ಒಂದು ಉಪಮುಖ್ಯ ರೂಪಾಂಶ. ಇನ್ನೊಂದು ಕಮಲ್ ಮಹಲಿನ ಆವರಣದಲ್ಲಿ ಅತ್ಯಂತ ಪರಿಚಿತವಾದ ವಾಸ್ತುನಿರ್ಮಿತಿ ಕಾವಲುಗೋಪುರ. ಇವೆರಡೂ ಅನತಿ ದೂರದಲ್ಲಿರುವ, ವಿಶೇಷವಾಗಿ ರಾಜಮನೆತನಕ್ಕೆ ಸಂಬಂಧಿಸಿದ ಅರಮನೆಯ ಪರಿಸರದಲ್ಲಿರುವ ಸ್ಮಾರಕಗಳು. ಈ ಎರಡೂ ಸ್ಮಾರಕಗಳನ್ನು ಪ್ರಕೃತಿ ಚಿತ್ರ ನೆಲೆಯಲ್ಲಿ ಒಂದೇ ಕಾಗದದಲ್ಲಿ ರಚಿಸಿದರೆ ಆಗುವ ಅನುಭವ ಎಂಥಹದು ? ಎಂಬ ಪ್ರಶ್ನಾರ್ಥಕವಾದ ರಸಾನುಭವವನ್ನು ನೀಡುವ ಪ್ರಯೋಗವಿದು. ಈ ಚಿತ್ರದೊಳಗಿನ ಎರಡೂ ರೂಪಾಂಶಗಳಲ್ಲಿ ಒಂದಾದ ಕಾವಲು ಗೋಪುರದ ರಚನೆಯಲ್ಲಿ ಕ್ರೆಯಾನ್ ಮಾಧ್ಯಮವನ್ನು ದುಡಿಸಿಕೊಂಡಿದ್ದರೂ ಅತ್ಯಂತ ವಿವರವಾದ ವಾಸ್ತು ವಿನ್ಯಾಸಗಳಿವೆ. ಆದರೆ ಘನಾಕಾರದ ಕಲ್ಲಿನಲ್ಲಿ ನಿರ್ಮಾಣಗೊಂಡ ಪುಷ್ಕರಣಿಯಲ್ಲಿ ಅಂತಹ ವಿವರಗಳು ಗೌಣವಾಗಿದ್ದರೂ, ಯಥಾದರ್ಶನದ ಪ್ರಬುದ್ಧ ಬಳಕೆ ಇಲ್ಲಿದೆ.

**ಉಪಸಂಹಾರ**

ಹಂಪಿ ಅವಶೇಷಗಳ ಎರಡು ಚಿತ್ರಗಳು ಇಲ್ಲಿವೆ. ಆದರೆ ಎರಡೂ ತಂತ್ರಗಾರಿಕೆಯಿಂದ ಒಂದೇ ಬಗೆಯಲ್ಲಿದ್ದರೂ, ನೆಲೆಗಳು ಮತ್ತು ರಚಿತಗೊಂಡ ಸಮಯ ವಿಭಿನ್ನ. ಮೊದಲನೆಯದರಲ್ಲಿ ಹಾಳು ಹಂಪಿಯ ದುಃಸ್ಥಿತಿಯನ್ನು ಉದ್ದೇಶಿಸಿದರೆ, ಎರಡನೆಯದು ಒಂದೇ ಪರಿಸರದಲ್ಲಿರುವ ಎರಡು ಸ್ಮಾರಕಗಳನ್ನು ಸೃಜನಾತ್ಮಕವಾಗಿ ಸಂಯೋಜಿಸಿದ ಬಗೆ ಇದೆ. ಹೀಗಾಗಿ ಈ ಎರಡೂ ಚಿತ್ರಗಳ ನೆಲೆಗಳು ವಿಭಿನ್ನ ಎಂದಿದ್ದು. ರಚನಾ ತಾಂತ್ರಿಕತೆಯ ದೃಷ್ಟಿಯಿಂದ ಈ ಎರಡೂ ಕಲಾಕೃತಿಗಳು ಏಕಪ್ರಕಾರವಾದ ನಿರ್ವಹಣೆಯನ್ನು ಹೊಂದಿವೆ. ಲೇಖನಿಯಂತಹ ಮೊನಚನ್ನು ಹೊಂದಿರದ ಕ್ರೇಯಾನ್‌ನ ರಚನಾ ಸಾಧ್ಯತೆಯನ್ನು ವಾಸ್ತುವಿನ ವಿನ್ಯಾಸಕ್ಕೆ ತಕ್ಕ ಹಾಗೆ ದುಡಿಸಿಕೊಂಡ

ಪರಿಣಿತಿ ಈ ಕಲಾಕೃತಿಯ ಒಳಮರ್ಮ ಎನ್ನಬಹುದಾದರೆ, ಚಿತ್ರಗಳ ಉದ್ದೇಶ ಹೊರ ಮರ್ಮ ಎನ್ನಬಹುದಾಗಿದೆ. ಒಟ್ಟಿನಲ್ಲಿ ಕ್ರೇಯಾನ್‌ನ ಈ ಎರಡೂ ಕಲಾಕೃತಿಗಳು ಮೌಲಿಕ ನೆಲೆಯಲ್ಲಿ ಚಿತ್ರಿತಗೊಂಡವು.

*******

### ಭಾಗ ೪. ಶಿಲ್ಪ ರೇಖಾಚಿತ್ರಗಳು

ಕರ್ನಾಟಕ ಹಲವು ಕಲೆಗಳ ಬೀಡು. ವಿಶೇಷವಾಗಿ ಶಿಲ್ಪಕಲೆಯ ತವರೂರು. ಕನ್ನಡ ನೆಲದ ಉದ್ದಗಲಕ್ಕೂ ಹತ್ತು ಹಲವಾರು ದೇಗುಲಗಳಲ್ಲಿ ರಚನೆಗೊಂಡ ಸುಂದರ ಶಿಲ್ಪಗಳು ನಮ್ಮ ನಾಡಿನ ಸಾಂಸ್ಕೃತಿಕ ಪರಂಪರೆಯ ಮಹತ್ವವನ್ನು ಜಗತ್ತಿಗೆ ತಿಳಿಯಪಡಿಸುತ್ತಿವೆ. ಬೇಲೂರು, ಹಳೇಬೀಡು, ಪಟ್ಟದಕಲ್ಲು, ಬಾದಾಮಿ, ಐಹೊಳೆ, ಹಂಪಿ ಇನ್ನೂ ಮುಂತಾದ ಸಾಮಾಜ್ಯಗಳ ಶಿಲ್ಪಕಲೆಗಳು ಕಲಾವಿದರಿಗೆ ಕಲೆಯ ವಿಶ್ವವಿದ್ಯಾಲಯವಾಗಿವೆ ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಹಿರೇಗೌಡರು ಕಲಾಶಾಲೆಯ ಪ್ರಾಚಾರ್ಯರಾಗಿದ್ದಾಗ ವಿದ್ಯಾರ್ಥಿಗಳು ಯೋಜನಾ ಪ್ರವಾಸದ ಪರಿವೀಕ್ಷಣೆಯ ಸಂದರ್ಭದಲ್ಲಿ ಪ್ರಾತ್ಯಕ್ಷಿಕೆಗಾಗಿ ರಚಿಸಿದ ಕೆಲವು ಶಾಯಿ ಮತ್ತು ಕ್ರೇಯಾನ್ ಮಾಧ್ಯಮದ ಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

#### ೪.೧. ಶಾಯಿ

#### ೧. ಬೇಲೂರು ಶಿಲಾ ಬಾಲಿಕೆ (೧೯೭೫)

ಮೂವತ್ತೆರಡು ವರ್ಷಗಳ ಹಿಂದೆ ರಚಿತವಾದ ಈ ಕೃತಿಯಲ್ಲಿ ಬಾಲೆ ತನ್ನ ಪ್ರಿಯಕರನಿಗೆ ಪ್ರೇಮ ಪತ್ರ ಬರೆಯುತ್ತಿರುವ ಭಂಗಿಯನ್ನು ಹೊಂದಿದೆ. ಬೇಲೂರಿನ ಶಿಲ್ಪಗಳು ಸೂಕ್ಷ್ಮ ಕೆತ್ತನೆಯ ಕುಸುರಿಯಿಂದ ರಚನೆಗೊಂಡ, ತುಂಬು ಯೌವ್ವನವನ್ನು ಹೊಂದಿದ ಕೃತಿಗಳು. ಈ ಕಾರಣದಿಂದಲೇ ಅವು ವಿಶ್ವಮಾನ್ಯತೆಯನ್ನು ಹೊಂದಿವೆ. ಸೂಕ್ಷ್ಮ ರೇಖೆಗಳಿಂದ ಶಿಲ್ಪ ರೂಪು ತಳೆದ ಬಗೆಯಿಂದ ಈ ಕೃತಿ ಅಪ್ಯಾಯಮಾನವೆನಿಸುತ್ತದೆ. ಶಿಲ್ಪದ ಮೇಲ್ಭಾಗದಲ್ಲಿ ತಲೆಕೆಳಗಾಗಿರುವ ಪತ್ರದ ವಿನ್ಯಾಸ, ಬಾಲೆ ತನ್ನ ಎಡಗೈಯಲ್ಲಿ ಲೇಖನಿ ಹಿಡಿದು ಪತ್ರ ಬರೆಯುತ್ತಿರುವ ಅವಳ ಮುಖದಲ್ಲಿ



೧. ಬೇಲೂರು ಶಿಲಾಬಾಲಿಕೆ, ೧೯೭೫



೨. ಬೇಲೂರು ಶಿಲಾಬಾಲಿಕೆ, ೧೯೭೬



೩. ನಟರಾಜ, ಬಾದಾಮಿ ಗುಹೆ, ೧೯೮೨



೪. ಶಿಲ್ಪ ಸಂಯೋಜನೆ, ೧೯೯೦




೫. ಪಟ್ಟದಕಲ್ಲು ಶಿಲ್ಪಗಳು, ೧೯೯೦

ಕಲಾವಿದರು ಪ್ರಕೃತಿ ಚಿತ್ರಣವನ್ನಾಗಲಿ ಅಥವಾ ಶಿಲ್ಪಚಿತ್ರಣವನ್ನಾಗಲಿ ಇವೆರಡನ್ನು ಯಥಾವತ್ತಾಗಿ ಚಿತ್ರಿಸುವ ಇರಾದೆಯನ್ನು ಹೊಂದಿರುತ್ತಾರೆ. ಅವೆರಡನ್ನೂ ಸೃಜನಶೀಲವಾಗಿ ಹೇಗೆ ದುಡಿಸಿಕೊಳ್ಳಬೇಕೆಂಬ ತಿಳುವಳಿಕೆಯ ಕೊರತೆಯಿಂದಲೋ ಅಥವಾ ತಂತ್ರಗಾರಿಕೆಯ ಕೊರತೆಯಿಂದಲೋ ಶಿಲ್ಪಗಳನ್ನು ಆಧಾರವಾಗಿಟ್ಟುಕೊಂಡು ಸೃಜನಶೀಲವಾದ ಚಿತ್ರ ರಚನೆಗೆ ತೊಡಗಿಸಿಕೊಳ್ಳುವುದಿಲ್ಲ. ಆದರೆ ಹಿರೇಗೌಡರು ಬಹುತೇಕ ಸಂದರ್ಭಗಳಲ್ಲಿ ಶಿಲ್ಪಗಳನ್ನಾಗಲಿ ಅಥವಾ ಪ್ರಕೃತಿಯನ್ನಾಗಲಿ ಯಥಾವತ್ತಾಗಿ ಚಿತ್ರಿಸುವುದರ ಜೊತೆಗೆ ಅವೆರಡೂ ಅಂಶಗಳನ್ನು ಸೃಜನಾತ್ಮಕವಾಗಿ ದುಡಿಸಿಕೊಳ್ಳಬೇಕೆಂಬ ತುಡಿತವನ್ನು ಹೊಂದಿದ್ದಾರೆ ಎಂಬುದಕ್ಕೆ ಈ ಕೃತಿ ಒಂದು ಸೂಕ್ತ ನಿದರ್ಶನ.

ಶಿಲ್ಪಗಳ ವಿವಿಧ ಅಂಗಾಂಗಗಳನ್ನು ಕಾಗದದ ಮಧ್ಯ ಭಾಗದಲ್ಲಿ ಸಂಯೋಜಿಸುವುದರ ಮೂಲಕ ಕುತೂಹಲದ ಮನಸ್ಸಿಗೆ ತೃಪ್ತಿಯನ್ನು ತಂದುಕೊಡುವ ಒಂದು ಪ್ರಯೋಗವೂ ಹೌದು. ಇಲ್ಲಿ ಬಹುತೇಕ ಹೊಯ್ಸಳ ಶೈಲಿಯ ಅಲಂಕಾರಿಕ ಶಿಲ್ಪಗಳು ಸಂಯೋಜನೆಗೊಂಡಿವೆ. ಮಧ್ಯದಲ್ಲಿ ತುಂಬು ಯೌವನವನ್ನು ಸೂಚಿಸುವ ಸ್ತ್ರೀಯ ಮುಂಡ, ರುಂಡ ಭಾಗದಲ್ಲಿ ಬಳ್ಳಿಗಳು ಹುಟ್ಟಿಕೊಂಡು ಅವಳ ದೇಹವನ್ನು ಸುತ್ತುವರಿದ ಹಾಗೆ ಇಲ್ಲಿ ಚಿತ್ರಿಸಿದೆ. ಕೆಳಭಾಗದಲ್ಲಿ ನಟರಾಜ ಭಂಗಿಯನ್ನು ಹೋಲುವ ಶಿಲ್ಪ ರಚನೆಯನ್ನು ಮಾಡಲಾಗಿದೆ. ಇನ್ನುಳಿದ ಅವಕಾಶದಲ್ಲಿ ವಿವಿಧ ಛಾಯೆಯಿಂದ ಅನೇಕ ಜ್ಯಾಮಿತಿಕ ವಿನ್ಯಾಸಗಳೊಂದಿಗೆ ಶಿಲ್ಪಗಳ ತುಣುಕುಗಳನ್ನು ಆಧುನಿಕ ಶೈಲಿಯಲ್ಲಿ ಸರಳವಾಗಿ ಸಂಯೋಜಿಸಿದ ಒಂದು ಅತ್ಯುತ್ತಮ ಪ್ರಾಯೋಗಿಕ ನೆಲೆಯ ಕೃತಿ ಇದು.

**೫. ಪಟ್ಟದಕಲ್ಲು ಶಿಲ್ಪಗಳು (೧೯೯೦)**

ಚಾಲುಕ್ಯ ಪರಿಸರದಲ್ಲಿ ನಿರ್ಮಾಣಗೊಂಡ ಅನೇಕ ದೇಗುಲಗಳ ತಲಗಳಲ್ಲಿ ಗಣಧಾರಿಗಳ ಶಿಲ್ಪಗಳು ಮುಖ್ಯವಾಗಿವೆ. ಅವು ವಿಶೇಷವಾಗಿ ಕುಬ್ಜವಾದ ಶೈಲಿಗಳಲ್ಲಿ ರಚನೆಗೊಂಡಿವೆ. ಬಹುತೇಕ ಜನಪದ ನೆಲೆ ನೃತ್ಯ ಭಂಗಿಯಲ್ಲಿ ರಚನೆಗೊಂಡ ಅವು ದೇವಾಲಯದ ವಾಸ್ತು ಶಾಸ್ತ್ರದ ಹಿನ್ನೆಲೆಯಲ್ಲಿ ಬುನಾದಿಗೆ ಭದ್ರತೆಯನ್ನು ಒದಗಿಸಿಕೊಡುತ್ತವೆ. ಇಂತಹ ಶಿಲ್ಪಗಳಲ್ಲಿ ಒಂದಾದ ಇಲ್ಲಿನ ನೃತ್ಯ ಭಂಗಿಯ ಗಣಧಾರಿಯ ಶಿಲ್ಪದೊಂದಿಗೆ ಇನ್ನೊಂದು ಗಣಧಾರಿಯ ಶಿಲ್ಪವೂ ಸಹ ಇಲ್ಲಿ ಸಂಯೋಜನೆಗೊಂಡಿದೆ. ಜೊತೆಗೆ ಕಾಗದದ ಎಡಭಾಗದಲ್ಲಿ ಸ್ತ್ರೀ ಶಿಲ್ಪವೂ ಸಹ ಇಲ್ಲಿ ಸಂಯೋಜನೆಗೊಂಡಿದ್ದು, ಇವು ಮೂರೂ ಚಾಲುಕ್ಯ ಶೈಲಿಯ ರಚನೆಗಳಾಗಿವೆ. ದಪ್ಪ ಮತ್ತು ತೆಳುವಾದ ರೇಖೆಗಳಿಂದ ಗಣಧಾರಿಗಳ ದೇಹ ರಚನೆಗೊಂಡಿದ್ದು, ಅಲ್ಲಲ್ಲಿ ದಟ್ಟವಾದ ರೇಖೆಗಳನ್ನು ಸಹ ನೆರಳಿನ ಭಾಗವಾಗಿ ಛಾಯೆಯ ರೂಪದಲ್ಲಿ ದುಡಿಸಿಕೊಳ್ಳಲಾಗಿದೆ. ಶಿಲ್ಪ ವಿನ್ಯಾಸಗಳಲ್ಲಿ ಅಲ್ಲಲ್ಲಿ ಅಲ್ಪಸ್ವಲ್ಪ ಛಾಯೆಗಳು ಮೂಡಿದ್ದರೆ, ಹಿನ್ನೆಲೆಯ ಛಾಯೆ ಶಿಲ್ಪಗಳಿಗೆ ಮುನ್ನೆಲೆಗೆ ತರುವಲ್ಲಿ ಬಹು ಮುಖ್ಯ ಪಾತ್ರ ವಹಿಸುತ್ತದೆ. ಕಾಗದದ ಎಡ ಭಾಗದ ಶಿಲ್ಪ ಅಸ್ಪಷ್ಟವಾದ ಗೀಚು ರೇಖೆಗಳಿಂದ ಸೂಚ್ಯವಾಗಿ ರಚನೆಯಾಗಿದ್ದರೂ ಪ್ರಮಾಣ ಬದ್ಧತೆಯನ್ನು ಕಾಯ್ದುಕೊಂಡಿದೆ.





೬, ೭. ಹಳೇಬೀಡಿನ ಶಿಲ್ಪಗಳು, ೧೯೯೫



೮. ಶಿಲ್ಪ ಸಂಯೋಜನೆ, ೨೦೦೦

೬, ೭. ಹಳೇಬೀಡಿನ ಶಿಲ್ಪಗಳು (೧೯೯೫)

ಇವೆರಡೂ ಚಿತ್ರಗಳೂ ಹೊಯ್ಸಳ ಶೈಲಿಯ ಶಿಲ್ಪಗಳನ್ನು ಅನುಕರಿಸಿದ ಚಿತ್ರಗಳು. ಮಾಟಯುಕ್ತವಾದ, ಅಲಂಕಾರಿಕ ವೈಭವದ ಶಿಲ್ಪಗಳ ವೈವಿಧ್ಯತೆಯನ್ನು ಚಿತ್ರಿಸುವುದರ ಮೂಲಕ ಕಲ್ಪನೆಯ ಕಣ್ಣನ್ನು ತೆರೆಸುವ ಪ್ರಯತ್ನವನ್ನು ಇಲ್ಲಿ ಕಾಣಬಹುದಾಗಿದೆ. ಎರಡೂ ಭಿನ್ನ ನೆಲೆಯ ಶಿಲ್ಪಗಳು. ಚಿತ್ರ ೬ ನೃತ್ಯ ಬಾಲೆಯದ್ದಾದರೆ, ಚಿತ್ರ ೭ ಕೊಳಲನೂದುತ್ತಿರುವ ಕೃಷ್ಣನದು. ಈ ಎರಡೂ ಚಿತ್ರಗಳಲ್ಲಿ ರೇಖೆಗಳದೇ ಪಾರುಪತ್ಯವಾದರೂ ಎರಡೂ ಚಿತ್ರಗಳಲ್ಲಿ ಡ್ರೈ ಸ್ಕೆಚ್ ಪೆನ್‌ನಿಂದ ತೆಳುವಾದ ಅಂದರೆ ಒಂದು ಬಗೆಯಲ್ಲಿ ಫೋಟೋಜೆನಿಕ್ ಎನ್ನಬಹುದಾದ ಛಾಯೆಯನ್ನು ದೇಹದ ಉಬ್ಬಿದ ಭಾಗಗಳಲ್ಲಿ ಲೇಪಿಸಲಾಗಿದೆ. ಈ ತಂತ್ರದಿಂದ ಚಿತ್ರದಲ್ಲಿ ರೂಪಾಂಶಗಳು ತ್ರಿಮಾನದ ಅನುಭವವನ್ನು ನೀಡುತ್ತವೆ. ಮೊದಲನೆಯ ಚಿತ್ರದ ಅಲಂಕಾರಿಕ ಆಭರಣಗಳನ್ನು ಮತ್ತು ವಸ್ತ್ರ ವಿನ್ಯಾಸಗಳನ್ನು ಸೂಚ್ಯವಾಗಿ ಚಿತ್ರಿಸಿದ್ದರೂ ವಿವರಕ್ಕೆ ದಕ್ಕುವ ಭಾವವನ್ನು ಹೊಂದಿವೆ. ಎರಡನೆಯ ಚಿತ್ರದಲ್ಲಿಯೂ ಸಹ ವಿವರವಾದ ಅಲಂಕಾರಿಕ ರಚನೆಗಳು ಗೌಣವಾಗಿದ್ದರೂ, ಅವುಗಳ ಹೊರ ವಿನ್ಯಾಸಕ್ಕೆ ರೇಖಾ ಸ್ಪರ್ಶ ನೀಡಲಾಗಿದೆ. ಕೃಷ್ಣನಿಗೆ ಡೋಲಕ್‌ನ ಸಾತ್ ನೀಡುತ್ತಿರುವ ಸಹ ವಾದ್ಯಗಾರರ ರೂಪಗಳು ಇಲ್ಲಿ ಸರಳ ರೇಖೆಗಳಿಂದ ರಚನೆಗೊಂಡಿದ್ದು ಮುಖ್ಯ ಚಿತ್ರದ ಭಾಗವಾಗಿ ಕಾಣಿಸಿಕೊಂಡಿವೆ.

೮. ಶಿಲ್ಪ ಸಂಯೋಜನೆ, (೨೦೦೦)

ಚಿತ್ರ ೪ರಂತೆಯೇ ಈ ಚಿತ್ರವೂ ಕೂಡ ವಿವಿಧ ಶಿಲ್ಪಗಳನ್ನು ಸಂಯೋಜಿಸಿದ ಒಂದು ಕಲಾಕೃತಿ. ಇಲ್ಲಿ ಅಪರಿಚಿತ ಲೋಕದ ಪ್ರಾಣಿ ಪಕ್ಷಿಗಳ ರಚನೆಗಳು ಅಲಂಕಾರಿಕ ನೆಲೆಯಲ್ಲಿ ರಚನೆಗೊಂಡಿವೆ. ಇವುಗಳ ಜೊತೆಗೆ ವೀರರ ಶಿಲ್ಪಗಳು ಸಹ ರಚನೆಗೊಂಡಿವೆ. ಹಿರೇಗೌಡರ ಕಲ್ಪನೆಯ ಕಣ್ಣು ತೆರೆದ ಘಳಿಗೆಗೆ ಒಡಮೂಡಿದ ರೂಪಗಳು ಅತ್ಯಂತ ಸರಳವಾದ, ಸುಂದರವಾದ ರೇಖೆಗಳಿಂದ ಸ್ಪರ್ಶ ಪಡೆದು ಚಿತ್ರರೂಪಕ್ಕಿಳಿದ ವಿಸ್ಮಯ ಇಲ್ಲಿದೆ. ಮೇಲ್ಗಡೆಯ ರೂಪ ದೇವಾಲಯಗಳಲ್ಲಿ ಕಾಣುವಂಥದ್ದು. ಪೌರಾಣಿಕ ಸಂದರ್ಭಗಳಲ್ಲಿ ಕಂಡು ಬರುವ ಪ್ರಾಣಿ ಇದು. ಪ್ರಾಣಿ–ಪಕ್ಷಿ ಸಂಕುಲದಲ್ಲಿ ಕಂಡುಬರುವ ಆನೆ, ಸಿಂಹ ಮತ್ತು ಪಕ್ಷಿಯ ದೇಹದ ಲಕ್ಷಣಗಳನ್ನು ಅಲಂಕಾರಿಕ ನೆಲೆಯಲ್ಲಿ ಚಿತ್ರಿತಗೊಂಡ ಈ ರೂಪದಲ್ಲಿ ರೇಖೆಗಳೇ ಜೀವ ನಾಡಿ. ಹಿನ್ನೆಲೆಯಲ್ಲಿ ದಟ್ಟ ಛಾಯೆಯ ಲೇಪನದಿಂದ ರೂಪಾಂಶಕ್ಕೆ ಮುನ್ನೆಲೆ. ಈ ರೂಪಾಂಶಕ್ಕೆ ಆಸರೆ ಒದಗಿಸಿರುವ ಅಲಂಕಾರಿಕ ಕಂಬಗಳು. ಪಕ್ಷಿ ರೂಪದಲ್ಲೂ ಅದೇ ಅಲಂಕಾರಿಕ ಸೊಗಡು. ಮಾನವ ರೂಪಿಕೆಗಳಲ್ಲೂ ರೇಖೆಗಳದೇ ಪಾರುಪತ್ಯ. ಎಂದಿನಂತೆ ಹಿನ್ನೆಲೆಯಲ್ಲಿ ದಟ್ಟ ಛಾಯೆಯಿಂದ ರೂಪಗಳು ಮುನ್ನೆಲೆಗೆ. ಒಟ್ಟು ಚಿತ್ರ ಸಂಯೋಜನೆಯಲ್ಲಿ ಪ್ರಾಣಿ, ಪಕ್ಷಿ ಮತ್ತು ಮಾನವ ಸಂಕುಲಗಳ ಜೊತೆಗೆ ಭೌತ ವಸ್ತುಗಳ ಸಮ್ಮಿಲನದಿಂದ ಈ ಕೃತಿಯ ಒಟ್ಟಂದ ಇಮ್ಮಡಿಗೊಂಡಿದೆ.

**ಉಪಸಂಹಾರ**

ಶಿಲ್ಪ ಚಿತ್ರಗಳ ಅಧ್ಯಾಯದಲ್ಲಿ ಒಟ್ಟು ಐದು ಏಕ ಶಿಲ್ಪಗಳ ಚಿತ್ರಗಳ ರಚನೆಗಳನ್ನು ಮತ್ತು ಮೂರು ಸಂಯೋಜಿತ ಶಿಲ್ಪಗಳ ಚಿತ್ರಗಳನ್ನು ಅಧ್ಯಯನ ಮಾಡಲಾಗಿದೆ. ಏಕ ಶಿಲ್ಪಗಳ ರಚನೆಯಲ್ಲಿ ಹಿರೇಗೌಡರು ತಮ್ಮ ಆಸಕ್ತಿಯನ್ನು ಯಥಾವತ್ತಾಗಿ ಚಿತ್ರಿಸುವತ್ತ ಕೇಂದ್ರೀಕರಿಸಿದರೆ, ಇನ್ನುಳಿದ ಮೂರು ಸಂಯೋಜಿತ ಶಿಲ್ಪಗಳ ಚಿತ್ರಗಳಲ್ಲಿ ತಮ್ಮ ಕಲ್ಪನೆಯ ಕಣ್ಣಿನ ಆಳವನ್ನು ಅಳೆದು, ಹೊರ ಜಗತ್ತಿಗೆ ಪ್ರಕಟಿಸುವ ಆಶಯವನ್ನು ಹೊಂದಿದ್ದಾರೆ. ಇಲ್ಲಿನ ಎಲ್ಲ ಚಿತ್ರಗಳಲ್ಲಿ ಹಿರೇಗೌಡರು ಸೂಚ್ಯ ಮತ್ತು ಸೂಕ್ಷ್ಮ ರಚನೆಗಳಿಗೆ ಆದ್ಯತೆಯನ್ನು ನೀಡಿದ್ದಾರೆ. ಸೂಚ್ಯ ತಂತ್ರಕ್ಕೆ ಚಿತ್ರ ೨, ೩, ೬ ಮತ್ತು ೭ ಹಾಗೂ ಸೂಕ್ಷ್ಮ ತಂತ್ರಕ್ಕೆ ಚಿತ್ರ ೧ ಮತ್ತು ೮ ಸೂಕ್ತ ನಿದರ್ಶನಗಳೆನ್ನಬಹುದು. ಈ ಬಗೆಯ ಪ್ರಯೋಗಗಳಿಂದ ಹಿರೇಗೌಡರು ತಮ್ಮ ಬೌದ್ಧಿಕತೆಯನ್ನು ಒರೆಗೆ ಹಚ್ಚುವ ಒಂದು ನಿಲುವನ್ನು ಒಂದೆಡೆ ಪ್ರತಿಪಾದಿಸಿದರೆ, ಇನ್ನೊಂದೆಡೆ ಅಂತಹ ಪ್ರಯೋಗಗಳಿಂದ ನೋಡುಗರಿಗೆ ವಿಶೇಷವಾಗಿ ವಿದ್ಯಾರ್ಥಿಗಳಿಗೆ ವಿವಿಧ ಕಲ್ಪನೆಗಳ ಆಳಗಳನ್ನು ಅಳೆಯಲು ಅವಕಾಶ ಮಾಡಿಕೊಡುವ ನೆಲೆಯಲ್ಲಿ ತಮ್ಮ ಪ್ರಯೋಗಗಳಿಗೆ ಮಹತ್ವ ತಂದುಕೊಡುತ್ತಾರೆ.

********

### ೪.೨. ಕ್ರೇಯಾನ್

ಕ್ರೇಯಾನ್ ಮಾಧ್ಯಮದ ತಂತ್ರ ಸಾಧ್ಯತೆಗಳ ಕುರಿತು ಈಗಾಗಲೇ ಹಿಂದಿನ ಅಧ್ಯಾಯಗಳಲ್ಲಿ ವಿವರಿಸಲಾಗಿದೆ. ಆ ಮಾಧ್ಯಮದ ಹಲವು ಸಾಧ್ಯತೆಗಳನ್ನು ಶಿಲ್ಪದ ರಚನೆಗಳ ತಕ್ಕಂತೆ ದುಡಿಸಿಕೊಳ್ಳುತ್ತ ರಚಿಸಿದ ಹತ್ತು ಹಲವಾರು ಕಲಾಕೃತಿಗಳಲ್ಲಿ ಆಯ್ದ ಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**೧. ಶಿಲಾಬಾಲಿಕೆ, ಪಟ್ಟದಕಲ್ಲು,** (೧೯೮೫)

ಚಾಲುಕ್ಯ ಶೈಲಿಯ ಈ ಸ್ತ್ರೀ ಶಿಲ್ಪದ ಎಡ ಪಾರ್ಶ್ವದ ರಚನೆ ಇದು. ಈ ರಚನೆಯಲ್ಲಿ ರೇಖೆಗಳು ಗೌಣ. ಛಾಯೆಗಳದ್ದೇ ಪಾರುಪತ್ಯ. ಛಾಯೆಗಳ ಮುಖಾಂತರವೇ ಶಿಲ್ಪಕ್ಕೊಂದು ರೂಪು ಕೊಟ್ಟಿರುವ ತಂತ್ರಗಾರಿಕೆ ಅನೂಹ್ಯ. ತುಂಬು ಯೌವ್ವನವನ್ನು ಛಾಯೆಗಳ ಮೂಲಕವೇ ಕಂಡುಂಡಿರುವ ಹಿರೇಗೌಡರು ಬಾಲಿಕೆಯ ವಸ್ತ್ರಾಭರಣಗಳನ್ನು ಮಾಧ್ಯಮದ ಸಾಧ್ಯತೆಗೆ ಪೂರಕವಾಗಿ ಸೂಚ್ಯವಾಗಿಸಿದ್ದರೂ ಅವು ಸ್ಪಷ್ಟವಾದ ಗ್ರಹಿಕೆಗೆ ಒಳಗಾಗುತ್ತವೆ. ಅಲಂಕಾರಿಕ ಅಂಗಾಂಗ ರಚನಾ ಸಾಧ್ಯತೆಗಳನ್ನು ಸಮರ್ಥವಾಗಿ ದುಡಿಸಿಕೊಂಡ ಹಿರೇಗೌಡರು ಸ್ತ್ರೀ ಸಹಜವಾದ ಮೈಮಾಟವನ್ನು ರೇಖಾರಹಿತವಾಗಿ ಛಾಯೆಗಳಿಂದ ರಚಿಸಿದ್ದು, ಹಿನ್ನೆಲೆಯಲ್ಲಿ ದಟ್ಟ ಛಾಯೆಗಳ ಮುಖಾಂತರ ವಿವಿಧ ಬಗೆಯ ವಿನ್ಯಾಸಗಳನ್ನು ರಚಿಸುವುದರ ಮೂಲಕ ಶಿಲ್ಪಕ್ಕೆ ಮುನ್ನೆಲೆಯ ಪ್ರಾಶಸ್ತ್ಯವನ್ನು ತಂದುಕೊಡುತ್ತಾರೆ. ಶಿಲ್ಪವೊಂದನ್ನು ಯಥಾತ್ತಾಗಿ ಚಿತ್ರಿಸುವುದರ ಜೊತೆಗೆ ಅದಕ್ಕೆ ಅವಶ್ಯ ವಿದ್ದೆಡೆಗೆಲ್ಲ ಕೃತಕವಾದ ವಿನ್ಯಾಸಗಳನ್ನು ರಚಿಸುವುದರ ಮೂಲಕವಾಗಿ ಚಿತ್ರಕ್ಕೆ ಗರಿಷ್ಠ ಪ್ರಮಾಣದ ಮೆರಗನ್ನು ನೀಡುವ ಪ್ರಯತ್ನವನ್ನು ಮಾಡಿದ್ದಾರೆ.

**೨. ಬಾದಾಮಿಯ ಶಿಲ್ಪಗಳು** (೧೯೮೫)

ಇದೊಂದು ನೃತ್ಯ ಭಂಗಿಯಲ್ಲಿರುವ ಕುಬ್ಜ ಗಣ. ದೈಹಿಕವಾಗಿ ಅಜಾನುಬಾಹುವಾಗಿರುವ ಈ ಗಣದ ಚಿತ್ರ ರಚನೆ ಚಿತ್ರ ಒಂದರ ತಂತ್ರವನ್ನೇ ಅನುಸರಿಸಿದ್ದು ಕಂಡುಬರುತ್ತದೆ. ನೃತ್ಯ



೧. ಶಿಲಾಬಾಲಿಕೆ, ಪಟ್ಟದಕಲ್ಲು, ೧೯೮೫



೨. ಬಾದಾಮಿಯ ಶಿಲ್ಪಗಳು, ೧೯೮೫



೩. ಪಟ್ಟದಕಲ್ಲು ಶಿಲ್ಪಗಳು, ೧೯೮೫

ಭಂಗಿಯ ಗಣನಿಗೆ ಡೋಲಕ್‌ನ ಹಿಮ್ಮೇಳ ಒದಗಿಸುತ್ತಿರುವವನನ್ನು ಕೂಡ ಇಲ್ಲಿ ಕಾಣಬಹುದು. ಕಾಗದದ ಮಧ್ಯ ಭಾಗದಲ್ಲಿ ಪ್ರಧಾನ ಆಕಾರವಾಗಿ ಗಣನು ರಚಿತಗೊಂಡಿದ್ದು, ಅವನ ಮೈಮಾಟವನ್ನೆಲ್ಲ ಕೇವಲ ಛಾಯೆಗಳ ಮುಖಾಂತರವೇ ತೋರ್ಪಡಿಸಲಾಗಿದೆ. ಕೈಯಲ್ಲಿ ಹಿಡಿದಿರುವ ಡಮರುಗ, ಎಡಗಾಲನ್ನು ಭೂಮಿಯ ಮೇಲಿರಿಸಿ ಬಲಗಾಲನ್ನು ನೃತ್ಯ ಭಂಗಿಯಲ್ಲಿ ಎತ್ತಿರುವ ಅವನ ದೈಹಿಕ ವಿನ್ಯಾಸವನ್ನು ಪ್ರಬುದ್ಧವಾಗಿ ರೂಪುಗೊಳಿಸಿದ್ದಾರೆ. ಬೆಳಕಿನ ಛಾಯೆಗೆ ಕಾಗದದ ಮೈವಳಿಕೆಯನ್ನು ಹಾಗೆಯೇ ಬಿಟ್ಟು, ನೆರಳಿನ ಛಾಯೆಯನ್ನು ಅತ್ಯಂತ ಸಮರ್ಥವಾಗಿ ಅಂಗಾಂಗ ರಚನೆಗೆ ಪೂರಕವಾಗಿರುವಂತೆ ಕ್ರೇಯಾನ್‌ನ ಮೇಲ್ಪದರವನ್ನು ದುಡಿಸಿಕೊಂಡಿರುವ ಕ್ರಮ ಅನೂಹ್ಯ. ಚಿತ್ರದಲ್ಲಿ ಸಾಂಸ್ಕೃತಿಕ ಸಂಭ್ರಮದ ವಾತಾವರಣವನ್ನು ಸೃಷ್ಟಿಸಲು ಮತ್ತು ಪ್ರಧಾನ ಆಕೃತಿಯನ್ನು ಮುನ್ನೆಲೆಗೆ ತರಲು ಹಿರೇಗೌಡರು ಹಿನ್ನೆಲೆಯಲ್ಲಿ ಜ್ಯಾಮಿತಿಕ ವಿನ್ಯಾಸಗಳನ್ನು ವಿವಿಧ ಬಗೆಯ ಛಾಯೆಯ ಮುಖಾಂತರ ರಚಿಸಿದ್ದಾರೆ. ಶಿಲ್ಪದ ಚಿತ್ರವೊಂದನ್ನು ಯಥಾತ್ತಾಗಿ ಅನುಕರಿಸುವುದರ ಜೊತೆಗೆ ಸೃಜನಾತ್ಮಕವಾದ ವಿನ್ಯಾಸಗಳು ಮೂಲ ಆಕೃತಿಗೆ  ಪುಷ್ಟಿ ನೀಡಬಲ್ಲವು ಎಂಬುದಕ್ಕೆ ಈ ಚಿತ್ರ ಸೂಕ್ತ ನಿದರ್ಶನವಾಗುತ್ತದೆ.

**೩. ಪಟ್ಟದಕಲ್ಲು ಶಿಲ್ಪಗಳು ( ೧೯೮೫)**

ಮರಳು ಮಿಶ್ರಿತ ಶಿಲೆಯಿಂದ ನಿರ್ಮಾಣಗೊಂಡ ಚಾಲುಕ್ಯ ಪರಿಸರದ ಅನೇಕ ದೇಗುಲಗಳ ಶಿಲ್ಪಗಳು ಹೊಯ್ಸಳ ಶಿಲ್ಪಗಳಂತೆ ನಾಜೂಕುತನದಿಂದ ಕೂಡಿಲ್ಲವಾದರೂ, ಅವುಗಳಿಗಿಂತ ಮಿಗಿಲಾದ ಜೀವಕಳೆ ಇಲ್ಲಿನ ಶಿಲ್ಪಗಳಲ್ಲಿದೆ. ಅಂತಹ ಶಿಲ್ಪ ಮತ್ತು ವಾಸ್ತುವಿಗೆ ಸಂಬಂಧಪಟ್ಟ ವಸ್ತುಗಳನ್ನು ವಿನೂತನವಾಗಿ ಸಂಯೋಜಿಸುವ ಒಂದು ಪ್ರಯೋಗಾತ್ಮಕ ಎನ್ನಬಹುದಾದ ಕೃತಿ ಇದು. ಈ ಚಿತ್ರದಲ್ಲಿ ಪ್ರಧಾನವಾಗಿ ಶಿಲ್ಪದ ಆಕೃತಿಯೊಂದು ತನ್ನ ಮೊಣಕಾಲಿನ ಮೇಲೆ ಕೈಯೂರಿ ನಿಂತಿದ್ದು, ಇದನ್ನು ಹೊರತುಪಡಿಸಿದರೆ ಹಿನ್ನೆಲೆಯಲ್ಲಿ ಭಗ್ನಗೊಂಡ ದೇವಾಲಯದ ಅವಶೇಷಗಳನ್ನು ತರಹೇವಾರಿಯಾಗಿ ಸೃಷ್ಟಿಸಿದ ವಿನ್ಯಾಸಗಳನ್ನು ಕಾಣಬಹುದಾಗಿದೆ. ಹಿಂದಿನ ಎರಡೂ ಚಿತ್ರಗಳ ರಚನಾ ತಂತ್ರ ಈ ಚಿತ್ರದಲ್ಲೂ ಪುನರಾವರ್ತನೆಯಾಗಿದ್ದು, ರೇಖೆಗಳು ಗೌಣವಾಗಿ ಛಾಯೆಗಳೇ ಚಿತ್ರ ಸೃಷ್ಟಿಯೊಂದರ ಸಾರಥ್ಯವನ್ನು ವಹಿಸಿಕೊಂಡಿರುವುದು ದಿಟವಾದರೆ, ಇವೆಲ್ಲ ರಚನಾ ತಂತ್ರಗಳಿಂದ ಚಿತ್ರದ ಒಟ್ಟಂದಕ್ಕೆ ಸಾಂಸ್ಕೃತಿಕ ರಂಗು ತುಂಬಿದೆ.

**ಉಪಸಂಹಾರ**

ಇಲ್ಲಿ ಮೂರು ಬಗೆಯ ಕ್ರೇಯಾನ್ ಮಾಧ್ಯಮದಿಂದ ರಚನೆಗೊಂಡ ಶಿಲ್ಪ ಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮೊನಚು ರಹಿತವಾಗಿರುವ ಕ್ರೇಯಾನ್ ಲೆಡ್‌ನ ಉತ್ಪನ್ನ ರಚನೆಗೆ ಪೂರಕವಾಗಿ ದುಡಿಸಿಕೊಂಡ ಹಿರೇಗೌಡರ ಇಲ್ಲಿನ ಕಲಾಕೃತಿಗಳು ರಚನಾ ತಂತ್ರದ ನೆಲೆಯಿಂದ ವಿಸ್ಮಯವೆನಿಸುತ್ತವೆ. ಇಲ್ಲಿನ ಮೂರು ಚಿತ್ರಗಳಲ್ಲೂ ರೇಖೆಗಳು ಗೌಣ. ಏನಿದ್ದರೂ ಛಾಯೆಗಳದೇ ಪಾರುಪತ್ಯ. ರೇಖೆಗಳಿಲ್ಲದೇ ಚಿತ್ರ ಸೃಷ್ಟಿಯೊಂದರ ಸಾಧ್ಯಾ ಸಾಧ್ಯತೆಗಳನ್ನು ಇಲ್ಲಿನ ಚಿತ್ರಗಳಿಂದ

ಅರಿತುಕೊಳ್ಳಬಹುದಾಗಿದೆ. ನಮ್ಮ ನಡುವಿನ ಕಲಾವಿದ್ಯಾರ್ಥಿಗಳಿಗೆ, ಅಷ್ಟೇ ಏಕೆ ? ಕೆಲ ಕಲಾವಿದರಿಗೂ ಒಂದು ಭ್ರಮೆ ಇದೆ. ಮೊನಚಾದ ಲೇಖನಿಯಿಲ್ಲದ ರೇಖಾ ಚಿತ್ರವಾಗಲಿ ಅಥವಾ ಚಿತ್ರವೊಂದರ ರಚನೆ ಸಾಧ್ಯವಿಲ್ಲ ಎಂಬುದು. ಹಿರೇಗೌಡರ ಇಲ್ಲಿನ ಮೂರು ಚಿತ್ರಗಳು ಎರಡೂ ನಿಲುವನ್ನು ಧಿಕ್ಕರಿಸಿ, ರೇಖೆಗಳಿಲ್ಲದೇ ಇದ್ದರೂ, ಕೇವಲ ಛಾಯೆಯೊಂದರಿಂದಲೇ ಪ್ರಬುದ್ಧವಾದ ಚಿತ್ರವೊಂದರ ರಚನೆ ಸಾಧ್ಯ ಎಂಬುದನ್ನು ಪ್ರಯೋಗಾತ್ಮಕವಾಗಿ ಸಾಬೀತುಪಡಿಸುತ್ತವೆ. ಇಂತಹ ಕಠಿಣತಮವೆನ್ನಬಹುದಾದ ನಿಲುವುಗಳು ಹಿರೇಗೌಡರಂತಹ ಪ್ರಯೋಗಶೀಲ ಕಲಾವಿದರಿಂದ ಮಾತ್ರವೇ ಹೊರಹೊಮ್ಮುತ್ತವೆ. ಈ ನಿಟ್ಟಿನಲ್ಲಿ ಇಲ್ಲಿನ ಮೂರು ಚಿತ್ರಗಳು ರೇಖೆಗಿರುವಷ್ಟು ಪ್ರಾಧಾನ್ಯತೆ ಛಾಯೆಗಳಿಗೂ ಇದೆ ಎಂಬುದನ್ನು ದಿಟ್ಟತನದಿಂದ ಜಗಜ್ಜಾಹೀರುಗೊಳಿಸಿವೆ.

********

ಭಾಗ ೫. ಆಧುನಿಕ ನೆಲೆಯ ರೇಖಾಚಿತ್ರಗಳು

ಆಧುನಿಕ ಕಲೆ ವರ್ತಮಾನ ಕಾಲದ ಒಂದು ಪ್ರಮುಖ ಕಲಾಪ್ರಕಾರ. ಸುಮಾರು ೬೦ರ ದಶಕದಲ್ಲಿ ಕನ್ನಡದ ನೆಲದಲ್ಲಿ ಬೇರೂರಿದ ಈ ಕಲಾ ಪ್ರಕಾರ ಇಂದಿನ ಯುವ ಪೀಳಿಗೆಯಲ್ಲಿ ಹೊಸ ಲೋಕವೊಂದನ್ನೇ ತೆರೆದಿದೆ. ಆಧುನಿಕ ಕಲೆ ನೋಡುಗನನ್ನು ಚಿಂತನೆಯ ನೆಲೆಗೆ ಒಯ್ಯುವ ಒಂದು ಪ್ರಕಾರ, ಅದರಲ್ಲಿ ಎರಡು ಮಾತಿಲ್ಲ. ಸಂಪ್ರಾದಾಯಿಕ ಕಲೆ ಕೇವಲ ರಸಾನುಭವಕ್ಕೆ ಸೀಮಿತಗೊಂಡು ಚಿಂತನಾರಹಿತನನ್ನಾಗಿ ಮಾಡುವ ಕಲೆಯೆಂದರೆ ಅತಿಶಯೋಕ್ತಿಯಾಗಲಾರದು. ಆದರೆ ಸಾಂಪ್ರದಾಯಿಕ ಕಲೆ ಅಧ್ಯಯನ ಸಂದರ್ಭದಲ್ಲಿ ಮಹತ್ವದ್ದು.

ಹಿರೇಗೌಡರು ಅಧ್ಯಯನ ಸಂದರ್ಭದಲ್ಲಿ ಅಷ್ಟೇ ಏಕೆ? ವೃತ್ತಿನಿರತ ಸಂದರ್ಭದಲ್ಲಿಯೂ ನೈಜ ಮತ್ತು ಆಧುನಿಕ ಕಲಾಕೃತಿಗಳನ್ನು ರಚಿಸುತ್ತಲೇ ಬಂದಿದ್ದಾರೆ. ಆದರೆ ವಿಶೇಷ ಆಸಕ್ತಿ ಆಧುನಿಕತೆಯತ್ತ. ಅದು ವಿದ್ಯಾರ್ಥಿಯಾಗಿದ್ದ ದಿನಗಳಿಂದಲೇ ಬಂದದ್ದು ಎಂಬುದಕ್ಕೆ ಈ ಕೆಳಗಿನ ಸಂದರ್ಭವೊಂದನ್ನು ಪ್ರಸ್ತಾಪಿಸಲಾಗಿದೆ. (ಇದೇ ಸಂದರ್ಭವನ್ನು ಅಧ್ಯಾಯ ಎರಡರಲ್ಲಿ ಚರ್ಚಿಸಿದ್ದು ಇಲ್ಲಿ ಔಪಚಾರಿಕವಾಗಿ ಪ್ರಸ್ತಾಪಿಸಲಾಗಿದೆ.)

ಹಿರೇಗೌಡರು ಕಲಾ ಅಧ್ಯಯನ ಮಾಡುವ ಸಂದರ್ಭದಲ್ಲಿ ಆಧುನಿಕತೆ ಆದಿಯಲ್ಲಿತ್ತು. ಆದರೆ ಪಠ್ಯದಲ್ಲಿ ಇರಲಿಲ್ಲ. ದೇಶದಲ್ಲಿ ನಡೆಯು ಆಧುನಿಕ ಕಲಾಪ್ರದರ್ಶನಗಳ ಅರಿವು ಹಿರೇಗೌಡರಿಗಿತ್ತು. ಹೀಗಾಗಿ ಆಧುನಿಕ ರಚನಾ ಪದ್ಧತಿಯಲ್ಲಿ ಅವರ ಉತ್ಸಾಹ ಇಮ್ಮಡಿಯಾಗಿತ್ತು. ಜೊತೆಗೆ ೧೯೬೪ರ ಸಂದರ್ಭದಲ್ಲಿ ಆರ್.ಎಂ. ಹಡಪದರವರು (ಹಡಪದರವರು 'ವೀ ಫೋರ್' ಪ್ರದರ್ಶನದಲ್ಲಿ ಆಧುನಿಕ ಶೈಲಿಯ ರೇಖಾ ಚಿತ್ರಗಳನ್ನು ಪ್ರದರ್ಶಿಸಿದ್ದರು) ರಚಿಸಿದ್ದ ಆಧುನಿಕ ರೇಖಾಚಿತ್ರಗಳಿಂದ ಪ್ರಭಾವಿತಗೊಂಡ ಹಿರೇಗೌಡರು ಹಡಪದರವರನ್ನು ನನ್ನ "ರೋಲ್ ಮಾಡೆಲ್" ಎಂದು



೧. ಮೌನಿ, ೧೯೭೮

ಸ್ಮರಿಸಿಕೊಳ್ಳುತ್ತಾರೆ. ವಿಚಿತ್ರವೆಂದರೆ ಅವರ ಸಹಪಾಠಿಗಳು ಆಧುನಿಕ ಸ್ಪರ್ಶಕ್ಕೆ ಒಗ್ಗದೇ ಅದೇ ಸಂಪ್ರದಾಯಿಕ ರಚನೆಗಳಿಂದ ತೃಪ್ತರಾಗುತ್ತಾರಲ್ಲದೇ, ಹಿರೇಗೌಡರು ರಚಿಸುತ್ತಿದ್ದ ಆಧುನಿಕ ಕಲಾಕೃತಿಗಳನ್ನು ಕಂಡು ಹೀಗೆಳೆದಿದ್ದೂ ಇದೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲೂ ಹಿರೇಗೌಡರು ಆಧುನಿಕತೆಯ ಮೂಲಕವಾಗಿ ವಿಡಂಬನೆ, ವಿಸ್ಮಯ, ಪ್ರೀತಿ, ಪ್ರೇಮ, ಅವಘಡ ಇನ್ನೂ ಮುಂತಾದ ನೆಲೆಯ ಸೂಕ್ಷ್ಮ ಸಂವೇದನೆಗಳಿಗೆ ಸಾವಿರಾರು ಸಂಖ್ಯೆಯಲ್ಲಿ ಮೂರ್ತ ರೂಪ ನೀಡಿದ್ದರೂ, ಅಧ್ಯಯನದ ವ್ಯಾಪ್ತಿಗೆ ಪೂರಕವಾಗಿ ಆಯ್ದ ಕಲಾಕೃತಿಗಳನ್ನು ಅಧ್ಯಯನಕ್ಕೆ ದುಡಿಸಿಕೊಳ್ಳಲಾಗಿದೆ.

### ೫.೧. ಪೆನ್ಸಿಲ್

### ೧. ಮೌನಿ (೧೯೭೮)

ಸಾಂಪ್ರದಾಯಿಕ ನೆಲೆಯಲ್ಲಿ ನಿರೂಪಿತವಾಗಿರುವ ಕಲಾಕೃತಿ ಇದು. ಪುರುಷ ಪ್ರಧಾನ ಸಮಾಜದ ಸಂದರ್ಭದಲ್ಲಿಯೂ ಅದು ತೋರಿದ ಗೌರವ ಅಪಾರ. ಸ್ತ್ರೀಯನ್ನು ಒಂದು ಕಡೆ 'ಮಾತೃದೇವೋ ಭವ' ಎಂದು ಹೇಳುವುದರ ಮೂಲಕ ಉನ್ನತ ಸ್ಥಾನವನ್ನು ನೀಡಿದ ಸಮಾಜ, ಇನ್ನೊಂದೆಡೆ ಸಂಪ್ರದಾಯದ ನೆಪದಲ್ಲಿ ವಿವಿಧ ರೀತಿಯ ಕಟ್ಟು ಪಾಡಿಗೆ ಒಳಪಡಿಸಿ ಮನೆಯೆಂಬ ಕಾರಾಗೃಹದಲ್ಲಿರಿಸಿ ಸ್ತ್ರೀ ಸ್ವಾತಂತ್ರ್ಯವನ್ನು ಕಿತ್ತುಕೊಂಡಿತು. ಸ್ತ್ರೀಯನ್ನು ಮಗಳಾಗಿ, ಅಕ್ಕ-ತಂಗಿಯಾಗಿ, ತಾಯಿಯಾಗಿ, ಸೊಸೆಯಾಗಿ, ಅತ್ತೆಯಾಗಿ ಕಂಡ ಸಮಾಜ ಅವಳನ್ನು ಮನೆಗೆಲಸದವಳಂತೆ ಕಂಡುಕೊಂಡದ್ದಲ್ಲದೇ, ಅವಳನ್ನು ಹೆರಿಗೆ ಯಂತ್ರದಂತೆ ಕ್ರೂರವಾಗಿ ದುಡಿಸಿಕೊಂಡಿದೆ ಎಂಬ ಸಂದೇಶವನ್ನು ಈ ಕಲಾಕೃತಿ ಪ್ರಕಟಪಡಿಸುತ್ತದೆ.[೧]

ಮೊದಲ ಹಂತದಲ್ಲಿ ಈ ಚಿತ್ರವು ಮೇಲ್ನೋಟಕ್ಕೆ ತಾಂತ್ರಿಕ ಕಲಾಕೃತಿ (ತಂತ್ರ ಆರ್ಟ್) ಎಂಬಂತೆ ಕಾಣುತ್ತದೆ. ತಂತ್ರ ಕಲೆಯಲ್ಲಿ ಸಾಮಾನ್ಯವಾಗಿ ಬಳಕೆಯಾಗುವ ಜ್ಯಾಮಿತಿಕ ರೂಪಾಂಶಗಳೇ ಮೇಲಿನ ಸೂಚಿತ ಸಂದೇಶವನ್ನು ಪ್ರಕಟಪಡಿಸುವಲ್ಲಿ ಸಾರ್ಥಕವಾಗಿವೆ. ಕಾಗದದ ಮಧ್ಯಭಾಗದ ರೇಖಾಂಶದ ಎರಡೂ ಬದಿಗಳಲ್ಲೂ ಪ್ರಮುಖ ಆಕೃತಿಗಳು ಏಕ ಪ್ರಕಾರವಾಗಿ ಮೂಡಿದ್ದನ್ನು ಹೊರತುಪಡಿಸದರೆ, ಸಂದೇಶದ ಸಾರ್ಥಕತೆಯನ್ನು ಬಿಂಬಿಸಲು ಧಾರ್ಮಿಕ ಚಿನ್ಹೆಗಳು, ಸ್ತ್ರೀ ಪಾದಗಳು, ದಾಂಪತ್ಯದ ಚಿನ್ಹೆ ಹೀಗೆ ಹಲವಾರು ಚಿನ್ಹೆಗಳು ಪ್ರಮುಖ ಆಕೃತಿಗಳ ಮೇಲ್ಪದರದಲ್ಲಿ ರಚನೆಗೊಂಡಿವೆ. ಧಾರ್ಮಿಕ ಚಿನ್ಹೆಗಳು ಸ್ತ್ರೀಗೆ ನೀಡಿರುವ "ಮಾತೃದೇವೋಭವ"ದ ಸಂದೇಶಕ್ಕೆ ಪೂರಕವಾಗಿದ್ದರೆ, ಇತರ ಚಿನ್ಹೆಗಳು ಅವಳ ಅಂತರಂಗ ಮತ್ತು ಬಾಹ್ಯ ಬದುಕನ್ನು ಪ್ರತಿನಿಧಿಸುತ್ತವೆ. ಕಾಗದದ ಅರ್ಧಭಾಗದಲ್ಲಿ (ಕೆಳ ಅಂತಸ್ತು) ಸಿಂಧೂರವನ್ನು ಹೊಂದಿದ ಸ್ತ್ರೀಯ ಮುಖ ಅವಳ ಬಾಯಿಯ ಭಾಗದಲ್ಲಿ ಹೂವಿನ ವಿನ್ಯಾಸಗಳನ್ನು ಸೃಷ್ಟಿಸಲಾಗಿದೆ. ಹಿನ್ನೆಲೆಯಲ್ಲಿ ಜ್ಯಾಮಿತಿಕ ಆಕೃತಿಯನ್ನು ದಟ್ಟ ಛಾಯೆಯಿಂದ ಆವೃತ್ತಗೊಳಿಸಿ ಅವಳ ಬದುಕನ್ನು ಕತ್ತಲೆಯ ಕೂಪಕ್ಕೆ ಸಮಾನಂತರವಾಗಿ ಪ್ರತಿನಿಧಿಸಲಾಗಿದೆ. ಎಡ ಮತ್ತು ಬಲಭಾಗದಲ್ಲಿ ಒಲೆಯ ಸಂಕೇತವನ್ನು ಮತ್ತು ಸೃಷ್ಟಿಯ ಸಂಕೇತವನ್ನೂ,

---

೦೧. ವಿ.ಬಿ.ಹಿರೇಗೌಡರ ಸಂದರ್ಶನದಿಂದ

ದಾಂಪತ್ಯದ ಸಂಕೇತವಾಗಿ ತಳಕು ಹಾಕಿಕೊಂಡ ಹಾವಿನ ವಿನ್ಯಾಸವನ್ನು, ಅದರ ಕೆಳಗೆ ಸ್ತ್ರೀಯ ಹೆಜ್ಜೆ ಗುರುತುಗಳನ್ನು ರಚಿಸುವುದರ ಮೂಲಕ ಚಿತ್ರದ ಉದ್ದೇಶಕ್ಕೆ ಚೈತನ್ಯ ತುಂಬುವ ಪ್ರಯತ್ನ ಇಲ್ಲಿದೆ. ಸ್ತ್ರೀಯ ಮೇಲ್ಭಾಗದಲ್ಲಿ ಅವಳನ್ನು ದಿಗ್ಬಂದಿಸುವ ಸಂಕೇತವನ್ನು ಕಾಣಬಹುದಾಗಿದೆ. ಮೇಲ್ಭಾಗದಲ್ಲಿ ಅರ್ಧ ಚಂದ್ರನಂತೆ ವಿನ್ಯಾಸವೊಂದನ್ನು ಸೃಷ್ಟಿಸಿ, ಅದರೊಳಗೆ ತೀವ್ರ ಮೊನಚುಯುಕ್ತವಾದ ತ್ರಿಕೋನಾಕಾರದ ವಿನ್ಯಾಸಗಳು ರಚನೆಗೊಂಡು ಒಟ್ಟು ಚಿತ್ರವೊಂದರ ಸಂದೇಶವನ್ನು ಸಾರ್ಥಕಗೊಳಿಸುವ ನೆಲೆಯಲ್ಲಿ ಇಲ್ಲಿನ ವಿನ್ಯಾಸಗಳು ಒಂದಕ್ಕೊಂದು ಪೂರಕವಾಗಿವೆ. ಅಷ್ಟೇ ಅಲ್ಲದೇ ವಿವಿಧ ಬಗೆಯ ಛಾಯೆಗಳಿಂದ ಕೃತಿಯ ಉದ್ದಗಲಕ್ಕೂ ಸಾಂದರ್ಭಿಕವಾಗಿ ಮೂಡಿರುವುದರಿಂದ ಕೃತಿ ತನ್ನ ಅಸ್ತಿತ್ವವನ್ನು ಕಾಯ್ದುಕೊಂಡಿದೆ. ಹಿರೇಗೌಡರು ಪೆನ್ಸಿಲ್ ಮಾಧ್ಯಮದ ರೇಖಾಚಿತ್ರಗಳನ್ನು ವಿರಳವಾಗಿ ರಚಿಸಿದ್ದು, ಅವುಗಳಲ್ಲಿ ಈ ಕೃತಿ ಅವರ ಪ್ರಬುದ್ಧತೆಯ ಪ್ರತಿನಿಧಿಯಾಗಿದೆ.

೫:೨. ಶಾಯಿ

೧. ಸೃಷ್ಟಿ (೧೯೮೧)

ಅಪ್ರಾಪ್ತ ವಯಸ್ಸಿನ ಪ್ರಾಣಿ, ಪಕ್ಷಿ, ಕ್ರಿಮಿ, ಕೀಟ ಇಲ್ಲವೇ ಮಾನವ ಜೀವ ಸಂಕುಲಗಳ ಹೆಣ್ಣು ಮತ್ತು ಗಂಡಿನ ಸಂಯೋಗ ಅಥವಾ ಸಮ್ಮಿಲನದ ಪ್ರತಿಫಲವೇ ಪುನರ್ ಸೃಷ್ಟಿಗೆ ನಾಂದಿ ಎಂಬುದು ನಿಸರ್ಗ ಸತ್ಯ. ಸೃಷ್ಟಿ ಎಂಬುದೊಂದು ನಿಗೂಢವಾದ ಪ್ರಕ್ರಿಯೆ ಎಂಬುದು ಎಲ್ಲರಿಗೂ ತಿಳಿದ ವಿಚಾರ ಎಂಬುದನ್ನು ಇಂದಿನ ಸುಸಂಸ್ಕೃತ ಸಮಾಜದಲ್ಲಿ ತೆರೆದಿಟ್ಟ 'ಗೌಪ್ಯ' ಎಂಬುದಾಗಿ ಮಾತನಾಡುತ್ತೇವೆ. ಆದರೂ ಇಲ್ಲಿ ಹಿರೇಗೌಡರು ನಿಸರ್ಗದ ಗೌಪ್ಯತೆಯನ್ನು ಸಾಂಕೇತಿಕವಾದ ಗುಪ್ತಭಾವವನ್ನು ಶಿಲೆಯ ತುಂಡುಗಳ ಮುಖಾಂತರ ಅಭಿವ್ಯಕ್ತಿಸಿರುವುದು ಮಾನವನ ದೃಢ ಸಂಕಲ್ಪವನ್ನು ತೋರಿಸುತ್ತದೆ.[೨]

ಇಲ್ಲಿ ಒಂದು ಕಲ್ಲಿನಲ್ಲಿ ಹೆಣ್ಣು ಗಂಡಿನ ಮಿಲನ ಕಂಡು ಬಂದರೆ, ಇನ್ನೊಂದು ತುಂಡಿನಲ್ಲಿ ಒಂದು ಹೆಣ್ಣು ಮತ್ತು ಹಣ್ಣಿನ ತುಂಢು, ಅದರಲ್ಲಿನ ಬೀಜಗಳು, ಆ ಬೀಜಗಳು ಮೊಳಕೆಯಾಗಿ ಇನ್ನೊಂದು ಜೀವಕ್ಕೆ ಸಾಕಾರವಾಗಿ ಮಗುವಿಗೆ ಜನ್ಮ ಪ್ರಾಪ್ತವಾಗಿರುವ ದೃಶ್ಯಾತ್ಮಕ ಸಂಕೇತಗಳು ಪ್ರಕಟಗೊಂಡಿವೆ. ಕಲಾವಿದರ ಸೃಜನಶೀಲ ಮತ್ತು ವಸ್ತು ನಿರೂಪಣಾ ತಂತ್ರ ಅಲ್ಲದೇ ಗೌಪ್ಯತೆಗೆ ಒಂದು ಹೊಸ ಬಗೆಯ ದೃಶ್ಯಕಲ್ಪನೆಯನ್ನು ನೀಡಿರುವ ಬಗೆಯಿಂದ ಇನ್ನೊಂದು ಅನನ್ಯ ಸಂಸ್ಕೃತಿಗೆ ನಾಂದಿಯಾಗಿಸುವ ಆಶಯವನ್ನು ಹಿರೇಗೌಡರು ವ್ಯಕ್ತಪಡಿಸಿದ್ದಾರೆ. ಈ ನೈಜ ಸತ್ಯವನ್ನು ನವ್ಯ ಪರಿಕಲ್ಪನೆಗೆ ಪರಿವರ್ತಿಸಿರುವ ರೂಪ ವಿಶೇಷವಾಗಿರುವುದರಿಂದ ಇಲ್ಲಿ ನೈಜ ಮತ್ತು ನವ್ಯ ಪರಿಕಲ್ಪನೆಯ ಸಮ್ಮಿಲನವನ್ನು ವಿವಿಧ ಬಗೆಯ ರೇಖಾ ತಂತ್ರಗಳಿಂದ ಪ್ರಕಟಪಡಿಸಿದ್ದಾರೆ.

ಇಲ್ಲಿ ಛಾಯೆಗಳ ಕುರಿತು ಹಿರೇಗೌಡರು ಸ್ಪಷ್ಟ ನಿಲುವನ್ನು ತಾಳಿದ್ದಾರೆ. ಕಾಗದದ ಅವಕಾಶವನ್ನು ಹಾಗೆಯೇ ಉಳಿಸಿಕೊಂಡ ಛಾಯೆ ಒಂದಾದರೆ, ರೇಖೆಗಳಿಂದ ತುಂಬಿದ ಛಾಯೆಗಳನ್ನು

೦೨. ವಿ.ಬಿ.ಹಿರೇಗೌಡರ ಸಂದರ್ಶನದಿಂದ



೧. ಸೃಷ್ಟಿ ೧, ೧೯೮೧



೨. ಸೃಷ್ಟಿ ೨, ೧೯೮೧

ಮಧ್ಯಮವಾಗಿಸಿದ್ದು ಎರಡನೆಯದು. ಮೂರನೆಯದಾಗಿ ನೇರವಾಗಿ ಶಾಯಿಯನ್ನೇ ದುಡಿಸಿಕೊಂಡು ದಟ್ಟ ಛಾಯೆಯನ್ನು ಇಲ್ಲಿನ ಆಕೃತಿಗಳಿಗೆ ರೂಪುಗೊಳಿಸಿದ್ದಾರೆ. ತ್ರಿಭುಜಾಕೃತಿ, ಜ್ಯಾಮಿತಿಕ ಆಕೃತಿಗಳನ್ನು ಘನವಾಗಿಸಿಕೊಂಡ ಹಿರೇಗೌಡರು ಅವುಗಳಿಂದ ಮಾನವ ಅಂಗಾಂಗಗಳು ಹೊರಚಾಚಿದಂತೆ ವಿನ್ಯಾಸಗೊಳಿಸಿದ್ದಾರೆ. ಘನ ಎಂಬುದರ ಒಳಗೆ ನಡೆಯುವ ಎಲ್ಲ ಬಗೆಯ ಲೈಂಗಿಕ ಚಟುವಟಿಕೆಗಳನ್ನು ತುಂಬ ಸಾಂಕೇತಿಕವಾಗಿ ತೋರ್ಪಡಿಸುವ ಚಿಂತನಾ ಕ್ರಮ ಇಲ್ಲಿ ಗೋಚರವಾಗುತ್ತದೆ. ಆ ಎಲ್ಲ ಘನಾಕೃತಿಗಳನ್ನು ಕಾಗದದ ಅವಕಾಶವನ್ನು ಉಳಿಸಿಕೊಂಡು ಮೇಲ್ಭಾಗದಲ್ಲಿ ಮತ್ತು ಮಧ್ಯಭಾಗದಲ್ಲಿ ಸಂಯೋಜಿಸಿರುವುದರಿಂದ ಸ್ವಚ್ಛಂದ ಆವರಣ ದಕ್ಕುತ್ತದೆಯಲ್ಲದೆ, ಪ್ರೇಕ್ಷಕನು ಸ್ಪಷ್ಟತೆಯ ಅನುಭವದ ಗ್ರಹಿಕೆಗೆ ಒಳಗಾಗುತ್ತಾನೆ.

೨. ಸೃಷ್ಟಿ (೧೯೮೧)

ಪುರಾತನ ಕಾಲದ "ಆಡಮ್ ಆಂಡ್ ಈವ್" ಎಂಬ ಕ್ರೈಸ್ತ ಕಥೆಯ ಹಿನ್ನೆಲೆಯಲ್ಲಿ ಅನೇಕ ಕಲಾವಿದರು ಕಲಾಕೃತಿಗಳನ್ನು ವೈವಿಧ್ಯಮಯವಾಗಿ ಚಿತ್ರಿಸುತ್ತ ಬಂದಿದ್ದಾರೆ. ಇದು ನವೀನ ವಿಚಾರವಲ್ಲದಿದ್ದರೂ, ಹಿರೇಗೌಡರು ತಮ್ಮ 'ಸೃಷ್ಟಿ' ಎಂಬ ಸರಣಿ ಚಿತ್ರಗಳಲ್ಲಿ ಲೌಕಿಕ ವಿಚಾರವನ್ನು ಪಾರಮಾರ್ಥಿಕ ನೆಲೆಯಲ್ಲಿ ಹೇಳಲು ಬಯಸಿದ್ದಾರೆ. ಗಂಡು ಹೆಣ್ಣಿನ ಯೌವ್ವನದ ಮಧುರ ಕ್ಷಣಗಳನ್ನು ಸವಿದು, ಜೀವಾಂಕುರವನ್ನು ಭೂಮಿಯಲ್ಲಿ ಬಿತ್ತಿ ಹೊಸದೊಂದು ಜೀವಾಂಕುರವಾಗಲು ಕಾರಣವಾದ ಪ್ರಕೃತಿ ಮತ್ತು ಪುರುಷ ಇವರಿಬ್ಬರ ಆತ್ಮಗಳ ಸಮ್ಮಿಲನದ ಸಂಕೇತಗಳನ್ನು ಸರ್ಪ ಮತ್ತು ಸೇಬುಹಣ್ಣಿನಲ್ಲಿ ಪ್ರಕಟಪಡಿಸುವುದರ ಮೂಲಕ ಜೀವೋತ್ಪತ್ತಿಯ ಪರಿಕಲ್ಪನೆಯನ್ನು ನವ್ಯ ನೆಲೆಯಲ್ಲಿ ಸಂಯೋಜಿಸಿದ್ದಾರೆ. ದೇಶದ ಯಾವುದೇ ಮೂಲೆಯಲ್ಲೂ ಕಂಡು ಬರುವ ಸಂಪ್ರದಾಯಿಕ ನಾಗರ ಕಲ್ಲುಗಳಲ್ಲಿ ಯಾವುದೇ ವೈವಿಧ್ಯತೆ ಕಂಡುಬರುವುದಿಲ್ಲ. ಆದರೆ ಹಿರೇಗೌಡರು ಬಾಗಿದ ಬಗೆಯಲ್ಲಿ ಸರ್ಪವು ಸೇಬು ಹಣ್ಣಿಗೆ ಮುತ್ತಿಡುವಂತೆ ಚಿತ್ರಿಸಿದ್ದು ವಿಶಿಷ್ಟವೆನಿಸುತ್ತದೆ. ಸೇಬು ಹಣ್ಣು ಇಲ್ಲಿ ಹೆಣ್ಣಿನ ಸಂಕೇತವಾಗಿದ್ದರೆ ಹಾವು ಗಂಡಿನ ಸಂಕೇತವಾಗಿದೆ. ಇವರಿಬ್ಬರ ಮಿಲನ ಹೊಸ ಸೃಷ್ಟಿಗೆ ಕಾರಣವಾಗುತ್ತದೆ[೩] ಎಂಬ ಸಂದೇಶವನ್ನು ಈ ಕೃತಿ ಪ್ರಕಟಪಡಿಸುತ್ತದೆ.

ಹಿರೇಗೌಡರು ರೇಖೆಗಳನ್ನು ಬಹು ಮಾಂತ್ರಿಕವಾಗಿ ತಾಂತ್ರಿಕ ನೆಲೆಯಲ್ಲಿ ಹೇಗೆ ದುಡಿಸಿಕೊಳ್ಳುತ್ತಾರೆ ಎಂಬುದಕ್ಕೆ ಈ ಚಿತ್ರ ಸೂಕ್ತ ನಿದರ್ಶನವಾಗುತ್ತದೆ. ಚಿಕ್ಕ ಚಿಕ್ಕ ರೇಖೆಗಳಿಂದ ಚಿತ್ರದ ಉದ್ದೇಶಕ್ಕೆ ಸೂಕ್ತವೆನಿಸುವ ರೀತಿಯಲ್ಲಿ ಛಾಯೆಯನ್ನು ರೂಪಿಸಿದ್ದಾರೆ. ಅದಕ್ಕೆ ಪೂರಕವಾಗಿ ನಾಗರಕಲ್ಲಿನ ರಚನೆಯನ್ನು ನಿಂತು ನಿಂತು ಮುಂದೆ ಸಾಗುವ ರೇಖೆಗಳಿಂದ ಸೃಷ್ಟಿಸಿರುವುದರಿಂದ ಅದರಲ್ಲಿ ಜೀವೋತ್ಪತ್ತಿಯ ಚೈತನ್ಯವೂ ಸಹ ಮೂಡಿದೆ. ಇದರಂತೆ ಭೂಮಿಯ ರಚನೆಯೂ ಸಹ ಸೂಕ್ತ ಛಾಯೆಗಳ ಸಹಕಾರದಿಂದ ರೂಪುಗೊಂಡರೆ, ಮೇಲ್ಭಾಗದಲ್ಲಿ ಜ್ಯಾಮಿತಿಕವಾದ ರಚನೆಯೊಂದನ್ನು ಭೂಮಿಗೆ ಆಸರೆಯಾಗುವಂತೆ ರಚಿಸಿದ್ದಾರೆ. ಹಾಗೆಯೇ ಕೆಳಭಾಗದಲ್ಲೂ ಜ್ಯಾಮಿತಿಕ ಆಕೃತಿಗಳನ್ನು

---

೦೩. ವಿ.ಬಿ.ಹಿರೇಗೌಡರ ಸಂದರ್ಶನದಿಂದ



೩. ವಿಜಯನಗರ ಸಾಮ್ರಾಜ್ಯದ ಅಂತ್ಯ, ೧೯೮೧




೪. ಬಂಡೆಗಳ ಕುಟುಂಬ, ೧೯೮೨

ವಿವಿಧ ಬಗೆಯ ಛಾಯೆಗಳಿಂದ ಆವೃತಗೊಳಿಸಿದ ಪರಿಯಿಂದ ಬಾಗಿದ ನಾಗರ ಕಲ್ಲಿಗೆ ಆಸರೆಯೊದಗಿಸಿವೆ. ಕಾಗದದ ಅವಕಾಶವನ್ನು ಸಮರ್ಥವಾಗಿ ಬಳಸಿಕೊಂಡಿದ್ದು ಹಿನ್ನೆಲೆಯಲ್ಲಿ ಯಾವುದೇ ಬಗೆಯ ಗೌಜುಗಳಿಲ್ಲದೇ ಇರುವುದರಿಂದ ಚಿತ್ರದ ಆಶಯವನ್ನು ಪ್ರಕಟಿಸುವ ಆಕೃತಿಗಳಿಗೆ ಸ್ಪಷ್ಟ ನೆಲೆ ದೊರಕಿದೆ.

**೩. ವಿಜಯನಗರ ಸಾಮ್ರಾಜ್ಯದ ಅಂತ್ಯ** (೧೯೮೧)

ಈ ಚಿತ್ರದಲ್ಲಿ ನಿರೂಪಿತವಾಗಿರುವ ವಿಜಯನಗರ ಸಾಮ್ರಾಜ್ಯದ ಲಾಂಛನ, ವಾಸ್ತು ಶಿಲ್ಪದ ಹೆಗ್ಗುರುತಾದ ವಿಜಯ ವಿಠಲ ದೇವಾಲಯ ಮಂಟಪದಲ್ಲಿನ ಸಪ್ತಸ್ವರ ನುಲಿಸುವ ಕಂಬ, ಇಲ್ಲಿನ ಪರಿಸರದಲ್ಲಿ ಕಂಡು ಬರುವ ಸಾಲು ಮಂಟಪದ ಒಂದು ಭಾಗ ಹಾಗೂ ಅದೇ ಪರಿಸರದಲ್ಲಿ ಕಂಡು ಬರುವ ವೈವಿಧ್ಯಮಯ ಬಂಡೆಗಲ್ಲುಗಳು ಇವೆಲ್ಲವೂ ವಿಜಯನಗರದ ಪತನವನ್ನು ಸಾಂಕೇತಿಕ ರೂಪದಲ್ಲಿ ತೋರ್ಪಡಿಸುತ್ತಿದ್ದು, ನಿಜಾತೀತ ಪಂಥದವರ ಕೃತಿಗಳ ಅನುಭವವನ್ನು ನೀಡುತ್ತದೆ. ತನ್ಮೂಲಕ ಹಿರೇಗೌಡರ ಕಲಾಶೈಲಿಯು ಒಂದು ಬಗೆಯಲ್ಲಿ ನೈಜತೆ, ನಿಜಾತೀತ, ಅಮೂರ್ತ ಹಾಗೂ ಸಮಕಾಲೀನ ಪರಂಪರೆಗಳ ಕೂಡು ಪ್ರಜ್ಞೆಯನ್ನು ಏಕಕಾಲದಲ್ಲಿ ಪ್ರಕಟಪಡಿಸುವ ಅನುಭವ ದಕ್ಕುತ್ತದೆ.

ಚಿತ್ರ ೨ರಂತೆ ರಚನಾ ತಂತ್ರವನ್ನು ಹೊಂದಿದ ಕೃತಿ ಇದು. ಸೂರ್ಯ, ಚಂದ್ರರ ಸಂಕೇತವು ವಿಜಯನಗರ ಸಾಮ್ರಾಜ್ಯವು ಸೂರ್ಯ ಚಂದ್ರರಿರುವ ತನಕ ಅಸ್ತಿತ್ವದಲ್ಲಿರಬೇಕೆಂಬುದು, ಖಡ್ಗವು ವೀರತ್ವದ ಸಂಕೇತವಾಗಿ, ವರಾಹವು ಸಾಮ್ರಾಜ್ಯವು ಎಲ್ಲ ಕಾಲಗಳಲ್ಲೂ ಧನ-ಧಾನ್ಯಗಳಿಂದ ತುಂಬಿತುಳುಕುತ್ತಿರಬೇಕೆಂಬ ಆಶಯವನ್ನು ಹೊಂದಿದ್ದರೂ ಸಾಮ್ರಾಜ್ಯವು ನಾಮಾವಶೇಷವಾಗಿರುವುದನ್ನು ಹಿರೇಗೌಡರು ದೃಶ್ಯಾತ್ಮಕವಾಗಿ ತಮ್ಮ ತುಡಿತವನ್ನು ಪ್ರಕಟಿಸಿದ್ದಾರೆ. ಕಾಗದದ ಮಧ್ಯಭಾಗದಲ್ಲಿ ಬಹು ಆಶಯವನ್ನು ಹೊಂದಿದ್ದ ವಿಜಯನಗರದ ಲಾಂಛನವನ್ನು ರಚಿಸಿದ್ದು, ಅದನ್ನು ಎರಡು ಭಾಗವಾಗಿಸಿರುವುದರ ಮೂಲಕ ವಿಜಯನಗರದ ಪತನವನ್ನು ಸಾಂಕೇತಿಕವಾಗಿ ತೋರ್ಪಡಿಸಿದ್ದಾರೆ. ಹಿನ್ನೆಲೆಯಲ್ಲಿ ವಿಜಯನಗರದ ವೈಭವವನ್ನು ಅಂದು ಸಾರಿದ್ದ ವಿಜಯ ವಿಠ್ಠಲ ದೇವಾಲಯದ ಕಂಬವೊಂದನ್ನು ಸೀಳಿದಂತೆ ತೋರ್ಪಡಿಸುವುದರ ಮೂಲಕವೂ ವಿಜಯನಗರದ ಪತನವನ್ನು ಪ್ರತಿಬಿಂಬಿಸಿದ್ದಾರೆ. ಮೇಲ್ಭಾಗದಲ್ಲಿ ವಿಜಯನಗರದ ಅಳಿದುಳಿದ ಅವಶೇಷಗಳನ್ನು ರಚಿಸುವುದರ ಮೂಲಕ ಚಿತ್ರದ ಉದ್ದೇಶವನ್ನು ಸಾರ್ಥಕ್ಯಗೊಳಿಸುವ ಹಿರೇಗೌಡರ ಸಂಯೋಜನಾ ತಂತ್ರಗಾರಿಕೆ ಮೇಲೆ ಹೇಳಿದಂತೆ ನೈಜತೆ, ನಿಜಾತೀತ ಮತ್ತು ಅಮೂರ್ತ ಶೈಲಿಗಳ ಕೂಡುವಿಕೆಯಾಗಿದೆ ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಇಲ್ಲಿಯೂ ಸಹ ಕಾಗದದ ಅವಕಾಶವನ್ನು ಹಾಗೆಯೇ ಬಿಟ್ಟುಕೊಂಡಿರುವುದರಿಂದ ಆಕೃತಿಗಳು ಸ್ಪಷ್ಟ ನೆಲೆಯಲ್ಲಿ ದಕ್ಕುತ್ತವೆ.

**೪. ಬಂಡೆಗಳ ಕುಟುಂಬ** (೧೯೮೨)

ಪಾಂಪೆ ನಗರಕ್ಕೆ ಸಮನಾದ ಹಂಪಿಯ ಬೃಹದಾಕಾರದ ಬಂಡೆಗಳ ಸಂಕೀರ್ಣಗಳಲ್ಲಿನ ಒಂದೊಂದು ಬಂಡೆಯೂ ಒಂದೊಂದು ಕಥೆಯನ್ನು ಹೇಳುವಂತೆ ಭಾಸವಾಗುವ ಬಗೆಯಲ್ಲಿ ಈ

ಕೃತಿ ರಚಿತಗೊಂಡಿದೆ. ಕೃತಿಯ ಪ್ರಮುಖ ರೂಪಾಂಶ ಬೃಹದಾಕಾರದ ಬಂಡೆ ಕಾಲು, ಮುಖ, ಹಾಗೂ ಸಂಪೂರ್ಣ ಮುದುಡಿ ಕುಳಿತಿರುವ ಮಾನವ ದೇಹದ ಭಂಗಿಯಂತೆ ಭಾಸವಾಗುತ್ತದೆ. ಕಾಲದ ಅರಿವಿಲ್ಲದೇ ಅನೇಕ ಶತಶತಮಾನಗಳಿಂದ ಕುಳಿತುಕೊಂಡು ಗಾಢವಾದ ಚಿಂತನೆಯಲ್ಲಿ ಲೀನವಾಗಿರುವಂತೆ, ಬಂಡೆಗಳ ಬಿರುಕಿನಲ್ಲಿ ವೃಕ್ಷ ಜನ್ಮ ತಾಳಿ, ಸಾಯುವಂತೆಯೂ ಇಲ್ಲ, ಬದುಕವಂತೆಯೂ ಇಲ್ಲ ಎಂಬಂತೆ ಅರೆಜೀವ ಹಿಡಿದುಕೊಂಡ ನಿಸ್ಸಹಾಯಕ ಸ್ಥಿತಿ ಪ್ರಕಟವಾಗಿದೆ. ಹಿನ್ನೆಲೆಯಲ್ಲಿ ಎರಡು ಮೂರು ಬಂಡೆಗಳು ಅಸ್ತವ್ಯಸ್ತವಾಗಿ ಕೈ, ಕಾಲು ಹಾಗೂ ರುಂಡ, ಮುಂಡಗಳು ಮುರಿದುಕೊಂಡು ರೋಧಿಸುವ ಭಾವ ಇಲ್ಲಿ ಗೋಚರವಾಗುತ್ತದೆ. ಇವುಗಳಿಂದ ಹೊರ ಹೊಮ್ಮುವ ಗಾಢವಾದ ನೋವನ್ನು ಸಂವಹನಗೊಳಿಸಲು ಈ ಎಲ್ಲ ಬಂಡೆಗಳ ಗುಂಪಿನ ಹಿಂದೆ ಜಾಮಿತಿಕ ಆಕಾರಗಳನ್ನು ಸೃಷ್ಟಿಸಿ ಕಪ್ಪು ಛಾಯೆಯಿಂದ ದುಃಖದ ಭಾವ ಸ್ಫುರಿಸಲು ಕಾರಣವಾಗಿದೆ. ಹೀಗೆ ಮಾನವ ಕುಟುಂಬದಲ್ಲಿ ಅನುಭವಿಸುವ ಕಷ್ಟದ ರೀತಿಯಲ್ಲಿಯೇ ಬಂಡೆಗಳ ಕುಟುಂಬದಲ್ಲಿಯೂ ದುಃಖದ ನೀರವತೆಯನ್ನು ಸೃಷ್ಟಿಸಿರುವ ಈ ಚಿತ್ರದ ಪ್ರಮುಖ ಉದ್ದೇಶವನ್ನು[೪] ವಿವಿಧ ಛಾಯೆಗಳ ಮೂಲಕ ತೋರ್ಪಡಿಸಿರುವ ರೀತಿ ಅನನ್ಯ.

ಹಿರೇಗೌಡರು ಹಿಂದಿನ ಚಿತ್ರದಂತೆ ಇಲ್ಲಿಯೂ ಸಹ ಮೂಲ ಆಕೃತಿಗಳನ್ನು ಕಾಗದದ ಮಧ್ಯಭಾಗಕ್ಕೆ 'T ' ಆಕಾರದಲ್ಲಿ ಸಂಯೋಜಿಸಲ್ಪಟ್ಟು ಪ್ರತಿ ಆಕೃತಿಗಳಿಗೂ ಬಾಹ್ಯ ರೇಖೆಯನ್ನು ಸ್ಪಷ್ಟಗೊಳಿಸಿದ್ದಾರೆ. ಚಿತ್ರದ ಆಶಯಕ್ಕೆ ಇಂಬು ಕೊಡಲು ಚಿಕ್ಕ ಚಿಕ್ಕ ರೇಖೆಗಳಿಂದ ನೆರಳು ಬೆಳಕಿನ ಛಾಯೆಯ ಸ್ಪಷ್ಟ ಪರಿಕಲ್ಪನೆಯ ಸ್ಪರ್ಶ ನೀಡಿದ್ದಾರೆ. ಹಿರೇಗೌಡರು ಛಾಯೆಗಳನ್ನು ಸೃಷ್ಟಿಸುವಾಗ ಅವುಗಳಿಗೆ ಅರ್ಥ ಸಾಧ್ಯತೆಯ ಪರಿಕಲ್ಪನೆಯನ್ನು ಇಟ್ಟುಕೊಂಡೇ ರಚಿಸುವ ಕ್ರಮವನ್ನು ಅನುಸರಿಸಿರುವುದಕ್ಕೆ ಈ ಚಿತ್ರದ ಮೇಲ್ಭಾಗದ ಬಲಭಾಗದಲ್ಲಿ ಸೃಷ್ಟಿಸಿರುವ ಜ್ಯಾಮಿತಿಕ ಆಕೃತಿಯಲ್ಲಿ ದಟ್ಟ ಛಾಯೆಯನ್ನು ತುಂಬಿಸಿದ್ದು ಅದನ್ನು ದುಃಖ ಸೂಚಕವಾಗಿಸಿದ್ದಾರೆ. ಹೀಗೆ ಪ್ರತಿಯೊಂದು ರೇಖೆಗಳಿಗೂ, ಛಾಯೆಗಳಿಗೂ ಅರ್ಥಸಾಧ್ಯತೆಯ ಕಲ್ಪನೆಯನ್ನು ಇಟ್ಟುಕೊಂಡ ವಿರಳ ಕಲಾವಿದರಲ್ಲಿ ಹಿರೇಗೌಡರು ಒಬ್ಬರಾಗಿದ್ದು, ಅಂತಹ ಅನುಭವಕ್ಕೆ ನಿಲುಕುವಂತಹ ಕೃತಿಗಳನ್ನು ಈ ಅಧ್ಯಾಯದಲ್ಲಿ ಕಾಣಬಹುದು.

**೫. ಸಂಯೋಜನೆ (೨೦೦೨)**

ಈ ಚಿತ್ರದಲ್ಲಿ ನಾಲ್ಕು ವಿವಿಧ ರೇಖಾ ಸಂಯೋಜನಾ (ವಿನ್ಯಾಸಗಳಿವೆ) ಚಿತ್ರಗಳಿವೆ. ಇವೆಲ್ಲವುಗಳಲ್ಲಿಯೂ ರಚನಾ ವಿಧಾನ, ಸರಳತೆ ಹಾಗೂ ಸೌಂದರ್ಯವನ್ನು ಹೇಳುತ್ತದೆ. ಇವೆಲ್ಲ ಚಿತ್ರಗಳೂ ರೈಲು ಪ್ರಯಾಣದಲ್ಲಿ ಕಂಡ ವಿವಿಧ ಸನ್ನಿವೇಶಗಳನ್ನಾಧರಿಸಿ ರಚಿತಗೊಂಡ ಸಾಮಾನ್ಯ ಚಿತ್ರಗಳಾದರೂ ಗಂಭೀರವಾದ ಸಂಯೋಜನಾ ತಂತ್ರಗಳನ್ನು ಅಳವಡಿಸಲಾಗಿದೆ.

ಹಿರೇಗೌಡರು ಮೂಲತಃ ಕಲಾ ಅಧ್ಯಾಪಕರು. ಅವರ ಪ್ರಯೋಗಶೀಲ ಮನಸ್ಸು ಅವರನ್ನು ಕಲಾವಿದರನ್ನಾಗಿಸಿದೆ ಎಂಬುದಕ್ಕೆ ಈ ಕೃತಿ ಒಂದು ಸೂಕ್ತ ನಿದರ್ಶನವಷ್ಟೆ. ಮೇಲಿನ ಅಂಕಣದಲ್ಲಿ

---

೦೪. ವಿ.ಬಿ.ಹಿರೇಗೌಡರ ಸಂದರ್ಶನದಿಂದ












೫. ಸಂಯೋಜನೆ, ೨೦೦೨

ಇಲ್ಲಿನ ಚಿತ್ರಗಳು "ಸಾಮಾನ್ಯ ಚಿತ್ರಗಳು" ಎಂದು ಹೇಳುವುದಕ್ಕೆ ಸೂಕ್ತ ಕಾರಣವುಂಟು. 'ಸಾಮಾನ್ಯ' ಎಂಬ ಪದವನ್ನು ನಾವು ಗ್ರಹಿಸುವ ರೀತಿ ಹೇಗಿದೆಯೆಂದರೆ: ನಿತ್ಯದ ಬದುಕಿನಲ್ಲಿ ಕಾಣಬಹುದಾದ ದೃಶ್ಯಾವಳಿಗಳನ್ನು ನಾವು ಸಾಮಾನ್ಯ ನೆಲೆಯಲ್ಲಿ ನೋಡುವ ಪರಿ. ಇಂತಹ ಸಾಮಾನ್ಯ ದೃಶ್ಯಾವಳಿಗಳು ರೈಲು ಪ್ರಯಾಣದ ಸಂದರ್ಭದಲ್ಲಿ ಹಿರೇಗೌಡರಿಗೆ ಕಂಡಂತಹವುಗಳನ್ನು ದೃಶ್ಯರೂಪಕ್ಕೆ ಪರಿವರ್ತಿಸಿದ್ದಾರೆ. ರೈಲು ಪ್ರಯಾಣದಲ್ಲಿ ಕಂಡು ಬರುವ ಸಾಮಾನ್ಯ ದೃಶ್ಯಗಳೆಂದರೆ ಮಲಗಿರುವರು, ಗುಂಪು ಗುಂಪಾಗಿ ಮಾತನಾಡುತ್ತಿರುವರು, ಸಂಗೀತ ಪರಿಕರಗಳನ್ನು ಹಿಡಿದುಕೊಂಡು ಭಿಕ್ಷೆ ಬೇಡುವವರು ಹೀಗೆ ಹಲವಾರು ಸನ್ನಿವೇಶಗಳನ್ನು ನಾವು ಕಾಣುತ್ತೇವೆ. ಅಂತಹ ದೃಶ್ಯಗಳನ್ನು ಹಿರೇಗೌಡರು ಇಲ್ಲಿ ಮೂರ್ತರೂಪಕ್ಕೆ ಪರಿವರ್ತಿಸುವಲ್ಲಿ ವಿಶಿಷ್ಟ ಸಂಯೋಜನಾ ಕ್ರಮವನ್ನು ಕೂಡ ಅನುಸರಿಸಿರುವದರಿಂದ ಈ ಕಲಾಕೃತಿ ಗಂಭೀರ ನೆಲೆಯಲ್ಲಿ ದಕ್ಕುತ್ತದೆ.

ಅತ್ಯಂತ ಸಂಕ್ಷೇಪಯುಕ್ತ ರೇಖೆಗಳಿಂದ ರಚಿತಗೊಂಡ ಈ ರೇಖಾ ಚಿತ್ರಗಳಲ್ಲಿ ಮೊದಲನೆಯದು ರೈಲಿನಲ್ಲಿ ಇಬ್ಬರು ವ್ಯಕ್ತಿಗಳು ಮಲಗಿಕೊಂಡಿರುವ ದೃಶ್ಯವೆಂದು ಮೇಲ್ನೋಟಕ್ಕೆ ಗೋಚರವಾಗುವ ಸಂಗತಿ. ಅಲ್ಲಿನ ಆಕೃತಿಗಳಲ್ಲಿ ವಿವರವಾದ ಅಂಗಾಂಗ ರಚನೆಗಳಲ್ಲಿ ಎಂಬುದು ದಿಟವಾದರೂ ಆಧುನಿಕ ರಚನಾ ಕ್ರಮವನ್ನು ಅನುಸರಿಸಿ ಚಿತ್ರಿಸಿದ ಬಗೆ ಇಲ್ಲಿದ್ದರೂ, ಮಾನವರು ಮಲಗಿದಾಗ ಇರುವ ಭಾವವನ್ನು ಇವು ಸ್ಪಷ್ಟವಾಗಿ ಹೊರ ಹಾಕುತ್ತಿವೆ. ಸಂಯೋಜನೆಯ ದೃಷ್ಟಿಯಿಂದ ನೋಡುವುದಾದರೆ ಮುನ್ನೆಲೆಯಲ್ಲಿ ಪ್ರಧಾನ ಆಕೃತಿ, ಅದರ ಹಿನ್ನೆಲೆಯಲ್ಲಿ ಇನ್ನೊಂದು ಆಕೃತಿಯನ್ನು ಸಂಯೋಜಿಸಿದ ಬಗೆಯಿಂದ ಈ ಚಿತ್ರಕ್ಕೆ ಶಯನ ಸಂದರ್ಭದ ವಾತಾವರಣವೂ ದಕ್ಕಿದೆ.

ಎರಡನೆಯ ಚಿತ್ರವೂ ಸಹ ಮೇಲಿನ ವಿಷಯಕ್ಕೆ ಸಂಬಂಧಿಸಿದ್ದಾದರೂ ಇಲ್ಲಿ ಪೂರ್ಣ ಪ್ರಮಾಣ ದೇಹ ಗೌಣವಾಗಿ ಕಿಟಕಿಗೆ ಆಸರೆಯಾಗಿ ಮಲಗಿರುವ ಇಬ್ಬರು ವ್ಯಕ್ತಿಗಳ ಚಿತ್ರಣವಿದೆ. ಹಿಂದಿನ ಚಿತ್ರಕ್ಕಿಂತ ಇಲ್ಲಿ ಸ್ವಲ್ಪ ವಿವರಕ್ಕೆ ದಕ್ಕುವ ಅಂಗಾಂಗಳು ಇದ್ದರೂ ಅವು ಸೂಚ್ಯವಾಗಿ ಮೂಡಿವೆ. ತನ್ಮೂಲಕ ಶಯನಾವಸ್ಥೆಯ ಭಾವವನ್ನು ಸ್ಪಷ್ಟವಾಗಿ ಹೊರಹಾಕುತ್ತಿವೆ.

ಮೂರನೆಯದು ಹಿಂದಿನ ಎರಡೂ ಚಿತ್ರಗಳಿಗಿಂತ ವಿಭಿನ್ನ ನೆಲೆಯಲ್ಲಿ ರಚನೆಗೊಂಡಿದೆ. ಒಂದು ಸಣ್ಣ ಕುಟುಂಬವೊಂದರ ಮೂವರು ಸದಸ್ಯರ ಅರ್ಧ ದೇಹ ಮಾತ್ರ ಗೋಚರವಾಗುವ ಸಂಯೋಜನೆಯನ್ನು ಹೊಂದಿದೆ. ಮಗುವನ್ನು ಸಂತೈಸುತ್ತಿರುವಂತೆ ಆಕೃತಿಗಳನ್ನು ಸೃಷ್ಟಿಸಲಾಗಿದ್ದು, ಪ್ರತಿ ಆಕೃತಿ ಹಿಂದೆ ಜ್ಯಾಮಿತಿಕ ಆಕಾರವನ್ನು ಫ್ರೇಂನಂತೆ ದುಡಿಸಿಕೊಳ್ಳಲಾಗಿದೆ. ಈ ಚಿತ್ರವೂ ಸೇರಿದಂತೆ ಹಿಂದಿನ ಎರಡೂ ಚಿತ್ರಗಳ ಸಂಯೋಜನೆಯಲ್ಲೂ ಮೋಟಿಫ್‌ನಂತೆ ಅರ್ಧ ವರ್ತುಳದ ರೇಖೆ ವಿಶಿಷ್ಟ ಭಾವವನ್ನೂ ಪ್ರಕಟಿಸುತ್ತಿದೆ. ಆದರೆ ನಾಲ್ಕನೆಯ ಚಿತ್ರದಲ್ಲಿ ಸಂಗೀತ ಪರಿಕರವನ್ನು ಹಿಡಿದುಕೊಂಡ ಸ್ತ್ರೀಯ ರೂಪ ಆಕರ್ಷಕ ರೇಖೆಯಿಂದ ಸಂಕ್ಷೇಪಯುಕ್ತವಾಗಿ ರಚನೆಗೊಂಡಿದೆ. ತನ್ನ ಬಲಗೈಯನ್ನು ಸಂಗೀತದ ಸ್ವರಕ್ಕೆ ಪೂರಕವಾಗಿ ಮೇಲೆತ್ತಿರುವ, ಎಡಗೈಯಲ್ಲಿ ಸಂಗೀತ ಪರಿಕರವನ್ನು ನುಲಿಸುತ್ತಿರುವ ಸಂದರ್ಭವನ್ನು ಸಂಯೋಜಿಸಿದ್ದು, ಹಿಂದಿನ ಮೂರು ಚಿತ್ರಗಳ ಸಂಯೋಜನೆಗಿಂತ ವಿಭಿನ್ನ ನೆಲೆಯಲ್ಲಿ ಈ ಕೃತಿ ಮೂಡಿದೆ.

ಒಟ್ಟಿನಲ್ಲಿ ಈ ನಾಲ್ಕು ಚಿತ್ರಗಳು ಸಾಮಾನ್ಯ ನೆಲೆಯ ಅಭಿವ್ಯಕ್ತಿಗಳಾದರೂ ಸಂಯೋಜನೆಯ ಸಂದರ್ಭದಲ್ಲಿ ಅತ್ಯಂತ ಗಂಭೀರವೆನಿಸುತ್ತವೆ. ಸಂಯೋಜನೆಯ ವಿವಿಧ ಮಾದರಿಗಳನ್ನು ನಮ್ಮ ಮುಂದಿನ ಪೀಳಿಗೆಗೆ ಅನುಕರಣೆಗಾಗಿ ಈ ನಾಲ್ಕು ಚಿತ್ರಗಳು ಅರ್ಹ ಅಧ್ಯಯನ ಕಲಾಕೃತಿಗಳು ಎಂದರೆ ಅತಿಶಯೋಕ್ತಿಯೇನಲ್ಲ.

**೬.೭.೮. ಕನ್ನಡ ವಿಶ್ವವಿದ್ಯಾಲಯದ ಆವರಣ (೨೦೦೩)**

ಕನ್ನಡದ ಮಾತೃ ಸಂಸ್ಥೆ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ವಿವಿಧ ವಿಭಾಗಗಳು, ಆಡಳಿತ ಕೇಂದ್ರಗಳು ವಿಜಯನಗರದ ವಾಸ್ತು ಶಿಲ್ಪವನ್ನೇ ಹೋಲುತ್ತವೆ. ಅಷ್ಟೇ ಅಲ್ಲದೇ ವಿಶ್ವವಿದ್ಯಾಲಯದ ಆವರಣದಲ್ಲಿ ಹಲವಾರು ಬಗೆಯ ಶಿಲ್ಪಗಳು ಕೂಡ ವಿಶ್ವವಿದ್ಯಾಲಯದ ಆವರಣಕ್ಕೆ ಕಲಾಗ್ರಾಮದ ಕಳೆಯನ್ನು ತಂದಿವೆ. ಹೀಗಾಗಿ ಕನ್ನಡ ವಿಶ್ವವಿದ್ಯಾಲಯದಲ್ಲಿ ನೋಡುಗರ ಮನ ಸೆಳೆಯುವ ತಾಣಗಳಾದ ತಾಯಿಶಿಲ್ಪ, ಅತಿಥಿ ಗೃಹ, ಅಕ್ಷರ ಗ್ರಂಥ ಭಂಡಾರ, ಬುಡಕಟ್ಟು ವಿಭಾಗದ ಕಟ್ಟಡಗಳ ವಾಸ್ತು ವಿಶೇಷಗಳನ್ನು ಗಮನಿಸಿದ ಹಿರೇಗೌಡರು ಅಲ್ಲಿನ ವಾಸ್ತು ಶಿಲ್ಪಗಳನ್ನು, ಶಿಲ್ಪಕಲಾಕೃತಿಗಳನ್ನು ತಮ್ಮ ಸೃಜನಶೀಲತೆಗೆ ಒಳಪಡಿಸಿ ಅವುಗಳಿಗೆ ಇನ್ನೂ ಹೆಚ್ಚಿನ ವೈಶಿಷ್ಟ್ಯತೆ ಹಾಗೂ ವೈವಿಧ್ಯತೆಯನ್ನು ಲೇಪಿಸಿ ತಮ್ಮ ಕಲ್ಪನೆಯ ಕಣ್ಣಿನ ಹರವನ್ನು ವಿಸ್ತೃತಗೊಳಿಸುವ ಪ್ರಯತ್ನವನ್ನು ಇಲ್ಲಿನ ರೇಖಾಚಿತ್ರಗಳಲ್ಲಿ ಕಾಣಬಹುದು.

ಚಿತ್ರ ೬ರಲ್ಲಿ ವಿಶ್ವವಿದ್ಯಾಲಯದ ಅತಿಥಿಗೃಹ, ಬುಡಕಟ್ಟು ವಿಭಾಗದ ಚಾವಡಿ, ಎಡ ಪಾರ್ಶ್ವದಲ್ಲಿ ತಾಯಿ ಶಿಲ್ಪ, ಮೇಲ್ಭಾಗದಲ್ಲಿ ನವರಂಗದ ದ್ವಾರವನ್ನು ಆಯ್ದುಕೊಂಡು ಈ ಸಂಯೋಜನೆಯನ್ನು ರಚಿಸಲಾಗಿದೆ. ಅತಿಥಿಗೃಹಕ್ಕೆ ಬುಡಕಟ್ಟು ವಿಭಾಗದಿಂದ ನಿರ್ಮಿಸಿದ ಮೆಟ್ಟಿಲುಗಳನ್ನು ಬಳಸಿಕೊಂಡು, ಅದರ ಸುತ್ತ ಗಿಡ ಗಂಟೆಗಳನ್ನು ಸೂಚ್ಯವಾಗಿಸಿದ್ದಾರೆ. ಈ ಚಿತ್ರದ ಪ್ರಮುಖ ಆಕೃತಿ ತಾಯಿ ಶಿಲ್ಪ. ಶಿಲ್ಪವನ್ನು ಏಕ ರೇಖೆಗಳಿಂದ ರಚಿಸಿದ್ದು ಅವಳನ್ನು ಅಲಂಕಾರಿಕ ಆಭರಣಗಳಿಂದ ಸಿಂಗರಿಸಿದ್ದಾರೆ. ಶಿಲ್ಪಕ್ಕೆ ಸ್ಪಷ್ಟತೆ ಒದಗಿಸುವ ನಿಟ್ಟಿನಲ್ಲಿ ಹಿನ್ನೆಲೆಯಲ್ಲಿ ಜ್ಯಾಮಿತಿಕ ಆಕಾರದಲ್ಲಿ ದಟ್ಟ ಛಾಯೆಯನ್ನು ಆವೃತಗೊಳಿಸಿ, ಮತ್ತೆ ಅದರ ಸುತ್ತ ಜ್ಯಾಮಿತಿಕ ಆಕಾರವನ್ನು ಫ್ರೇಂನಂತೆ ವಿನ್ಯಾಸಗೊಳಿಸಿ ಒಟ್ಟು ಚಿತ್ರದಲ್ಲಿ ತಾಯಿಶಿಲ್ಪಕ್ಕೆ ಹೆಚ್ಚಿನ ಪ್ರಾಶಸ್ತ್ಯ ನೀಡಿದ್ದಾರೆ. ಅದರ ಮುಂಭಾಗದಲ್ಲಿ ಬಾಗಿಲುಗಳ ವಿನ್ಯಾಸವನ್ನು ಸಂದರ್ಭೋಚಿತವಾಗಿ ದುಡಿಸಿಕೊಂಡರೆ, ಮೇಲ್ಭಾಗದಲ್ಲಿ ದ್ವಾರಗಳನ್ನು ಅತ್ಯಂತ ಸ್ಪಷ್ಟ ಛಾಯೆ ಮತ್ತು ರೇಖೆಗಳಿಂದ ರಚಿಸಿದ್ದಾರೆ. ಒಂದು ಬಗೆಯಲ್ಲಿ Cut Light ನಂತಹ ತಂತ್ರವನ್ನು ಚಿತ್ರದುದ್ದಕ್ಕೂ ದುಡಿಸಿಕೊಂಡು, ಕಾಗದದ ಅವಕಾಶವನ್ನು ಹಾಗೆಯೇ ಉಳಿಸಿಕೊಂಡರೂ ಪೂರ್ಣ ಪ್ರಮಾಣದ ಕಲಾಕೃತಿಯಾಗಿ ಇದು ಪ್ರಕಟವಾಗುತ್ತದೆ.

ಚಿತ್ರ ೭ರಲ್ಲಿ ಕನ್ನಡ ವಿಶ್ವವಿದ್ಯಾಲಯದ ಸಿರಿಗನ್ನಡ ಗ್ರಂಥಾಲಯದ ಕಟ್ಟಡ, ಅಕ್ಷರ ಗ್ರಂಥಾಲಯ, ಕಾರಂಜಿಯನ್ನು ಆಯ್ದುಕೊಳ್ಳುವುದರ ಜೊತೆಗೆ ಜ್ಞಾನ ಶಿಸ್ತಿಗೆ ಸಂಬಂಧಪಟ್ಟಂತೆ ಗ್ರಂಥಗಳು ಮತ್ತು ವಿಶ್ವವಿದ್ಯಾಲಯದ ಲಾಂಛನ, ಆವರಣದಲ್ಲಿನ ಶಿಲ್ಪಗಳನ್ನು ಆಧುನಿಕವಾಗಿ ದುಡಿಸಿಕೊಂಡ




೬. ಕನ್ನಡ ವಿಶ್ವವಿದ್ಯಾಲಯದ ಆವರಣ, ೨೦೦೩



೭. ಕನ್ನಡ ವಿಶ್ವವಿದ್ಯಾಲಯದ ಆವರಣ, ೨೦೦೩



೮. ಕನ್ನಡ ವಿಶ್ವವಿದ್ಯಾಲಯದ ಆವರಣ, ೨೦೦೩



೯. ಪ್ರಕೃತಿ, ೨೦೦೩

ಬಗೆ ಇಲ್ಲಿದೆ. ಚಿತ್ರ ೬ರ ಸಂಯೋಜನೆಗಿಂತ ಇದು ಭಿನ್ನವಾಗಿದ್ದು, ಅವಕಾಶವನ್ನು ವಿವಿಧ ಕೋನಗಳಲ್ಲಿ ವಿಂಗಡಿಸಿಕೊಂಡಿರುವ, ಹಾಗೆ ವಿಂಗಡಿಸಿಕೊಂಡಿರುವ ಸ್ಥಳಾವಕಾಶದಲ್ಲಿ ಅಲ್ಲಿನ ಕಟ್ಟಡಗಳನ್ನು ಅಪೂರ್ಣವಾಗಿ ದುಡಿಸಿಕೊಂಡರೂ ಅವುಗಳಲ್ಲಿ ಬಗೆ ಬಗೆಯ ಅಲಂಕಾರಿಕ ವಾಸ್ತು ವಿನ್ಯಾಸಗಳನ್ನು ರೂಪಿಸುವುದರೊಂದಿಗೆ ಒಟ್ಟು ಚಿತ್ರಕ್ಕೆ ಅಲಂಕಾರಿಕವಾದ ಸೊಬಗನ್ನು ತಂದುಕೊಡುವುದು ಒಂದಾದರೆ, ಇನ್ನೊಂದು ವಿಶ್ವವಿದ್ಯಾಲಯದ ಉದ್ದಿಶ್ಯಗಳನ್ನು ವಿವರಿಸುವ ಪ್ರಯತ್ನವನ್ನು ಸಾಂಕೇತಿಕವಾಗಿ ನಿರೂಪಿಸುವ ಕ್ರಮವನ್ನು ಸೂರ್ಯ, ಮತ್ತು ಕಣ್ಣಿನ ವಿನ್ಯಾಸವನ್ನು ರೂಪುಗೊಳಿಸಿದ್ದಾರೆ. "ಜ್ಞಾನದ ಬಲದಿಂದ ಅಜ್ಞಾನದ ಕೇಡ ನೋಡಯ್ಯ" ಎಂಬ ಶರಣರ ವಾಣಿಯನ್ನು ಈ ಎರಡೂ ವಿನ್ಯಾಸಗಳು ಹೇಳುತ್ತವೆ.

ಚಿತ್ರ ೮ರಲ್ಲಿ ಜ್ಞಾನದ ಬೆಳಕನ್ನು ಜಗತ್ತಿಗೆ ಪಸರಿಸಬೇಕೆಂಬ ಉದ್ದಿಶ್ಯದಿಂದ ಸಾಂಕೇತಿಕವಾಗಿ ನಿರ್ಮಿಸಲಾದ ವಿಶ್ವವಿದ್ಯಾಲಯದ ಆವರಣದಲ್ಲಿರುವ ದೀಪಸ್ತಂಭ ರಚನೆಯನ್ನು ಕಾಗದದ ಬಲಭಾಗದ ಮೇಲ್ಭಾಗದಲ್ಲಿ, ಕಾಗದದ ಮಧ್ಯಭಾಗದಲ್ಲಿ ಸಿರಿಗನ್ನಡ ಮತ್ತು ಅಕ್ಷರ ಗ್ರಂಥಾಲಯ, ಚೋಮನ ಶಿಲ್ಪ ಮತ್ತು ಕಾರಂಜಿಯನ್ನು ಕೂಡ ದೃಶ್ಯಾತ್ಮಕವಾಗಿ ಸಂಯೋಜಿಸಿದ್ದು ಕಂಡು ಬರುತ್ತದೆ. ತನ್ಮೂಲಕ ಹಿರೇಗೌಡರು ಜ್ಞಾನದ ಶಿಸ್ತಿಗೆ ಸಂಬಂಧಪಟ್ಟಂತ ಕೆಲವು ಸಂಕೇತಗಳನ್ನು ದುಡಿಸಿಕೊಳ್ಳುವುದರ ಮೂಲಕ ಚಿತ್ರಕ್ಕೊಂದು ಉದ್ದಿಶ್ಯವನ್ನು ಹೊಂದುವ ಇರಾದೆಯನ್ನು ವ್ಯಕ್ತಪಡಿಸುತ್ತಾರೆ. ಕಾರಂಜಿ ಕಟ್ಟೆಯಲ್ಲಿ ಕಮಲದ ಹೂವಿನ ವಿನ್ಯಾಸವನ್ನು ರಚಿಸುವುದರ ಮೂಲಕ ಜ್ಞಾನವೆಂಬುದನ್ನು ಮನಸ್ಸಿನ ಶುದ್ಧತೆಗೆ ಹೋಲಿಸುವ ಪ್ರಯತ್ನವನ್ನು ಮಾಡಿದ್ದಾರೆ. ವಿಶ್ವವಿದ್ಯಾಲಯದ ಬೇರೆ ಬೇರೆ ಸ್ಥಳಗಳಲ್ಲಿರುವ ಹಲವಾರು ಕಟ್ಟಡಗಳನ್ನು ಒಂದೇ ಅವಕಾಶದಲ್ಲಿ ಕಾಣುವ ಬಗೆ ಇಲ್ಲಿದೆ. ಬಹುಶಃ ತಂತ್ರಜ್ಞಾನದ ಬಲದಿಂದ ಸೃಜನಾತ್ಮಕವಾಗಿ ಇಂತಹ ಸಂಯೋಜನೆ ಅಸಾಧ್ಯವಾದರೂ ಹಿರೇಗೌಡರು ಅದನ್ನು ಸಾಧ್ಯವಾಗಿಸುವ ನಿಟ್ಟಿನಲ್ಲಿ ಈ ರೇಖಾಚಿತ್ರಗಳನ್ನು ರಚಿಸಿದ್ದಾರೆ. ಅವಕಾಶದ ಬೇರೆ ಬೇರೆ ಭಾಗದಲ್ಲಿ ಸಂಯೋಜನೆಗೊಂಡ ಇಲ್ಲಿನ ಆಕೃತಿಗಳಿಗೆ ಒಂದು ಬಗೆಯಲ್ಲಿ ಸಂಪರ್ಕ ಕಲ್ಪಿಸುವ ಹಾಗೆ ಸರಳ ರೇಖೆಯೊಂದನ್ನು ಎಳೆಯುವುದರ ಮೂಲಕವಾಗಿ ಸಂಯೋಜನೆಯಲ್ಲಿ ವಿಂಗಡನೆ ಮತ್ತು ಸಂಪರ್ಕ ಕಲ್ಪಿಸುವ ವಿಧಾನಗಳ ಕುರಿತು ಬೋಧನೆ ಮಾಡುವ ರೀತಿಯಲ್ಲಿ ಈ ಚಿತ್ರ ನಿರ್ಮಾಣಗೊಂಡಿವೆ. ಒಟ್ಟಿನಲ್ಲಿ ಈ ಮೂರು ಚಿತ್ರಗಳು ವಿವಿಧ ಬಗೆಯ ಸಂಯೋಜನಾ ತಂತ್ರವನ್ನು ಅನುಸರಿಸಿದ್ದರೂ ಕಲಾಕೃತಿಗಳ ಉದ್ದಿಶ್ಯ ಒಂದೇ ಸ್ಥಳಕ್ಕೆ ಅನ್ವಯಿಸುತ್ತಿರುವುದರಿಂದ ಏಕ ಪ್ರಕಾರವಾದ ಸಂಯೋಜನಾ ಅನುಭವವನ್ನು ನೀಡುತ್ತವೆ.

**೯. ಪ್ರಕೃತಿ (೨೦೦೩)**

ಪ್ರಕೃತಿ ವಿಶೇಷಗಳಲ್ಲಿ ಒಂದಾದ ಗ್ರಹಣ ಕಾಲದಲ್ಲಿ ಕಂಡುಬರುವ ವಿಶೇಷ ಘಟನಾವಳಿಗಳಾದ ಹಗಲು ರಾತ್ರಿಯಾಗಿ ಪರಿಣಮಿಸುವ ಸನ್ನಿವೇಶವನ್ನು ಪ್ರತಿಬಿಂಬಿಸುವ ಕೃತಿ ಇದು. ಈ ಸಂಕ್ರಮಣ ಕಾಲದಲ್ಲಿ ವಿಶೇಷವಾಗಿ ಪಕ್ಷಿಸಂಕುಲಗಳಿಗೆ ಆಗುವ ಅನುಭವ ಹಾಗೂ ವೃಕ್ಷ ಸಂಕುಲದ ಮೇಲಾಗುವ

ಪರಿಣಾಮಗಳ ಕುರಿತಂತೆ ಪ್ರಕೃತಿ ವಿಸ್ಮಯದ ಬಗ್ಗೆ ಒಂದು ಸೂಕ್ಷ್ಮ ಅಧ್ಯಯನ[೨೫]ವನ್ನು ಇಲ್ಲಿ ಕಾಣಬಹುದು. ಅಲ್ಲದೆ ಈ ಸಂದರ್ಭದಲ್ಲಿ ಪ್ರಕೃತಿಯಲ್ಲಿ ಆವರಿಸಿದ ಮೌನ ಯಾವ ಬಗೆಯಲ್ಲಿರುತ್ತದೆ ಎಂಬುದನ್ನು ಹಿರೇಗೌಡರ್ ದೃಶ್ಯಾತ್ಮಕವಾಗಿ ತಮ್ಮ ಅನುಭವವನ್ನು ಹಂಚಿಕೊಂಡಿದ್ದಾರೆ. ಸೂಕ್ಷ್ಮ ಸಂವೇದನೆಯ ಕಲಾವಿದ ನಿರಂತರ ಪ್ರಕೃತಿಯ ಚಮತ್ಕಾರವನ್ನು ಅಧ್ಯಯನ ಮಾಡುತ್ತಿದ್ದರೆ, ಅಥವಾ ವೀಕ್ಷಣೆಯ ಅನುಭವದಿಂದ ಹತ್ತು ಹಲವಾರು ರೂಪಾಂಶಗಳನ್ನು ಮನಸ್ಸಿನಲ್ಲಿ ಸಂಗ್ರಹಿಸಿಟ್ಟುಕೊಂಡಿದ್ದರೆ ಮಾತ್ರ ಸೃಜನಶೀಲ ಪ್ರಕ್ರಿಯೆ ಸರಳವಾಗಿ ಹೊರಹೊಮ್ಮುತ್ತದೆ. ಇಂತಹ ಅನುಭವದ ಹಿನ್ನೆಲೆಯಲ್ಲಿ ಹಿರೇಗೌಡರು ಈ ಕಲಾಕೃತಿಯನ್ನು ರಚಿಸಿದ್ದಾರೆ.

ಈ ಹಿಂದಿನ ಎಲ್ಲ ಸಂಯೋಜನೆಗಳಿಗಿಂತ ವಿಭಿನ್ನ ಸ್ತರದಲ್ಲಿ ನೆಲೆಗೊಂಡ, ಕಾಗದದ ಅವಕಾಶವನ್ನು ಪೂರ್ಣ ಪ್ರಮಾಣದಲ್ಲಿ ವಿನ್ಯಾಸಗಳಿಗಾಗಿ ದುಡಿಸಿಕೊಂಡ ಸಂಯೋಜನೆ. ಗ್ರಹಣ ಕಾಲದಲ್ಲಿ ಉಂಟಾಗುವ ಕತ್ತಲು ಮತ್ತು ಬೆಳಕಿನ ವ್ಯತ್ಯಾಸಗಳನ್ನು ಅವಕಾಶದ ಎರಡು ಭಾಗಗಳಲ್ಲಿ ಕಾಣಬಹುದು. ಅವಕಾಶದ ಎಡ ಪಾರ್ಶ್ವದಲ್ಲಿ ದಟ್ಟ ಛಾಯೆಯಲ್ಲಿ ಕಲ್ಪವೃಕ್ಷದ ವಿನ್ಯಾಸಗಳು ಯಾವುದೇ ಬಗೆಯ ವಿವರಗಳಿಲ್ಲದೇ ರಚನೆಗೊಂಡಿವೆ. ಅದರ ಮೇಲ್ಭಾಗದಲ್ಲಿ ಗಿಡ–ಮರಗಳ ವಿನ್ಯಾಸ ವಿವರವಾಗಿ ರಚಿತವಾಗಿವೆ. ಎಡ ಪಾರ್ಶ್ವದಲ್ಲಿ ಸೂರ್ಯ ಮತ್ತು ಚಂದ್ರರ ವಿನ್ಯಾಸವನ್ನು ಚಿತ್ರಿಸಿದ್ದಾರೆ. ಇಡೀ ಅವಕಾಶದಲ್ಲಿ ಗಿಡ–ಮರಗಳ, ಮತ್ತು ಹಾರಾಡುವ, ಕುಳಿತಿರುವ ಪಕ್ಷಿಗಳ ಸಮೂಹವನ್ನು ಚಿತ್ರಿಸಿದ್ದಾರೆ. ಚಿಕ್ಕ ಚಿಕ್ಕ ರೇಖೆಗಳಿಂದ ಆವೃತಗೊಂಡ ಇಲ್ಲಿ ಪ್ರತಿ ಆಕೃತಿಗಳು ಗ್ರಹಣ ಕಾಲದಲ್ಲಿ ಉಂಟಾಗುವ ಸಂಚಲನದ ಪ್ರತೀಕವಾಗಿವೆ. ಚಿತ್ರದ ಮೇಲ್ನೋಟಕ್ಕೆ ಸಂಚಲನದ ವಾತಾವರಣವನ್ನು ದೃಶ್ಯಾತ್ಮಕವಾಗಿ ಗ್ರಹಿಸಿರುವ ಹಿರೇಗೌಡರು ರೇಖೆಗಳ ಮೂಲಕ ಒಂದು ಒಟ್ಟು ಪರಿಸರದ ವಾತಾವರಣವನ್ನು ಪ್ರಕಟಿಸಿರುವ ಕ್ರಮ ಅನನ್ಯವಾದುದು.

**೧೦. ವ್ಯಾಟಿಕನ್ ಸಾಮ್ರಾಜ್ಯ (೨೦೦೫)**

ವ್ಯಾಟಿಕನ್ ಸಾಮ್ರಾಜ್ಯ ಅನೇಕ ವಿಚಾರಗಳಿಗಾಗಿ ಪ್ರಸಿದ್ಧಿಯನ್ನು ಪಡೆದಿದೆ. ಅಂದರೆ ಧರ್ಮ, ಸಂಸ್ಕೃತಿ, ಕಲೆ, ಸಾಹಿತ್ಯ, ವಾಸ್ತುಕಲೆ, ಪರಂಪರೆ ಹಾಗೂ ರಾಜಕೀಯ ಇತ್ಯಾದಿಗಳ ಆಗರವಾಗಿರುವುದು ಇತಿಹಾಸದ ಪುಟಗಳಿಂದ ವೇದ್ಯವಾಗುತ್ತದೆ. ಇಲ್ಲಿ ಚಿಂತಕ, ಸೃಜನಶೀಲ, ಚಿತ್ರಕಲಾವಿದ, ಶಿಲ್ಪಿ, ವಾಸ್ತುಶಿಲ್ಪಿ, ವಿಜ್ಞಾನಿ, ಇತಿಹಾಸಕಾರ, ಕಾನೂನು ತಜ್ಞ, ತತ್ವಜ್ಞಾನಿ, ಖಗೋಳ ವಿಜ್ಞಾನಿ ಹೀಗೆ ಸಮಾಜದ ವಿವಿಧ ರಂಗದಲ್ಲಿ ಕೆಲಸ ಮಾಡುವ ಪ್ರತಿಯೊಬ್ಬ ಕರ್ಮಯೋಗಿಗೆ ತನ್ನನ್ನು ತೊಡಗಿಸಿಕೊಳ್ಳಲು ಅವಕಾಶವಿದೆ ಎಂಬುದನ್ನು ಗಮನಿಸಬಹುದು. ಹಾಗೆಯೆ ಇಲ್ಲಿ ಹಿರೇಗೌಡರು ವ್ಯಾಟಿಕನ್ನಿನ ಎರಡನೆ ಪೋಪ್‌ಜಾನ್‌ಪಾಲನು ವಿಧಿವಶನಾದಾಗ ವ್ಯಾಟಿಕನ್ ನಗರದ ಧಾರ್ಮಿಕ ಮುಖ್ಯಕೇಂದ್ರವಾದ ಸಿಸ್ಟೈನ ಚಾಪೆಲ ಕುರಿತ ಚಿತ್ರ ರಚಿಸಿದ್ದಾರೆ. ಈ ದುಃಖದ ಸಂದರ್ಭದಲ್ಲೂ ಸಾಮ್ರಾಜ್ಯದ ಅಳಿವು ಉಳಿವುಗಳ ಬಗ್ಗೆ ಜಗತ್ತಿನಾದ್ಯಂತ ಚರ್ಚೆಗೆ ಗ್ರಾಸವಾದ ಪೋಪ್ ಪಾಲನ ಸಾವಿನ ಕುರಿತಂತೆ ಹಾಗೂ ಆ ಸಂದರ್ಭದಲ್ಲಿ ಘಟಿಸಿದ ಅನೇಕ ಸಾಮಾಜಿಕ ತಲ್ಲಣಗಳು ಒಬ್ಬ

೨೫. ವಿ.ಬಿ.ಹಿರೇಗೌಡರ ಸಂದರ್ಶನದಿಂದ




೧೦. ವ್ಯಾಟಿಕನ್ ಸಾಮ್ರಾಜ್ಯ, ೨೦೦೫




೧೧. ಸಂಯೋಜನೆ, ೨೦೦೫

ಸೃಜನಶೀಲ ಕಲಾವಿದನ ಮೇಲೆ ಯಾವ ರೀತಿ ಪರಿಣಾಮ ಬೀರಿ ಕಲಾ ರಚನೆಗೆ ಪ್ರೇರಣೆಯಾಗಬಲ್ಲದು[೧೬] ಎಂಬುದಕ್ಕೆ ಈ ಪ್ರಸ್ತುತ ರೇಖಾಚಿತ್ರ ನಿದರ್ಶನವಾಗಿದೆಯಲ್ಲದೆ ಈ ಘಟನೆಯನ್ನು ಆಧಾರವಾಗಿಟ್ಟುಕೊಂಡು ಹಿರೇಗೌಡರು ಅನೇಕ ಸರಣಿ ಚಿತ್ರಗಳನ್ನು ರಚಿಸಿದ್ದಾರೆ.

ಅಂತಹ ಸರಣಿಗಳಲ್ಲಿ ಒಂದಾದ ಈ ಚಿತ್ರವು ವ್ಯಾಟಿಕನ್ ನಗರದ ಚರ್ಚಿನ ವಿನ್ಯಾಸವನ್ನು ಹೊಂದಿದ, ಮಧ್ಯಭಾಗದಲ್ಲಿ ಸಂಯೋಜನೆಗೊಂಡ ಈ ಚಿತ್ರದಲ್ಲಿ ಪೋಪ್ ಜಾನ್ ಪಾಲ್‌ನ ಮರಣದ ಸಂದರ್ಭದ ಸಾಮಾಜಿಕ ತಲ್ಲಣಕ್ಕೆ ಪ್ರತಿಯಾಗಿ ಶಾಂತಿ ಸೂಚಕ ಪ್ರತಿಮೆಯ ರಚನೆ ಇಲ್ಲಿ ಪ್ರಮುಖ ರೂಪಾಂಶವಾದರೂ ಅದಕ್ಕೆ ಪೂರಕವಾಗಿರುವ ವಾಸ್ತು ವಿನ್ಯಾಸದ ಅಧ್ಯಯನವೂ ಕೂಡ ಇಲ್ಲಿರುವುದು ವಿಶೇಷ. ಚರ್ಚಿನ ವಾಸ್ತು ಶಿಲ್ಪದ ವಿನ್ಯಾಸಗಳನ್ನೇ ಅಳವಡಿಸಿಕೊಂಡ ಚಿತ್ರದ ಮೇಲ್ಭಾಗದಲ್ಲಿ ಪೋಪ್ ಧರಿಸುತ್ತಿದ್ದ ಕಿರೀಟದ ವಿನ್ಯಾಸವನ್ನು ಹಿರೇಗೌಡರು ಅದನ್ನು ವಾಸ್ತುವಿನ ಭಾಗವಾಗಿಯೂ ಗ್ರಹಿಸಿಕೊಂಡಿರುವ ಬಗೆ ಅನನ್ಯವಾದದು. ಅದರ ಮೂಲಕವೇ ಒಟ್ಟು ಚಿತ್ರದ ಉದ್ದಿಶ್ಯವನ್ನು ವಿಸ್ತೃತವಾಗಿ ಹೇಳುವ ಇರಾದೆ ಅವರದು. ಕೆಳಭಾಗದಲ್ಲಿ ಪ್ರತಿಮೆ ಶಾಂತಿ ಸೂಚಕವಾಗಿ ನೆಲೆಸಿದ್ದು. ಅದಕ್ಕೆ ಅಲಂಕಾರಿಕವಾದ ಸುತ್ತಣ ವಿನ್ಯಾಸವೂ ಇದೆ. ಎಡ ಮತ್ತು ಬಲ ಭಾಗದಲ್ಲಿ ಚರ್ಚಿನ ಸಂಕೇತಗಳೂ ಇಲ್ಲಿ ಒಡಮೂಡಿವೆ. ಅವಕಾಶದ ಮಧ್ಯ ಭಾಗದಲ್ಲಿ QUEST FOR 26th NEW CREST ಎಂಬ ಅಕ್ಷರಗಳ ಉಲ್ಲೇಖವನ್ನು ವಿನ್ಯಾಸದ ಭಾಗವಾಗಿಯೇ ದುಡಿಸಿಕೊಂಡ ಹಿರೇಗೌಡರು CREST ಎಂಬಲ್ಲಿ ಶಾಂತಿ ಸೂಚಕವಾಗಿರುವ ಹಕ್ಕಿಯ ವಿನ್ಯಾಸವನ್ನು ರಚಿಸುವುದರ ಮೂಲಕ ಸಾಮಾಜಿಕ ತಲ್ಲಣಗಳಿಗೆ ಶಾಂತಿಯ ಸ್ಪರ್ಶ ನೀಡುವ ಮಾನವಿಕ ಚಿಂತನೆಯನ್ನೂ ಪ್ರಕಟಿಸಿದ್ದಾರೆ.

ಇಲ್ಲಿನ ಎಲ್ಲ ವಿನ್ಯಾಸಗಳು ಅತ್ಯಂತ ಸುಸ್ಪಷ್ಟ. ಯಾವುದೇ ಗೊಂದಲಗಳಿಲ್ಲದ ಆಕೃತಿಗಳಿಗೊಂದು ಸ್ಪಷ್ಟತೆಯನ್ನು ನೀಡಿರುವ ಕ್ರಮ ಇಲ್ಲಿದೆ. ಹಿಂದಿನ ಚಿತ್ರಗಳಲ್ಲಿ ಛಾಯೆಯನ್ನು ನಿರೂಪಿಸುವಾಗ ಚಿಕ್ಕ ಚಿಕ್ಕ ರೇಖೆಗಳನ್ನು ಒಂದರ ಮೇಲೊಂದು ಎಳೆದು ಛಾಯೆಯನ್ನು ರೂಪಿಸಿರುವುದರಿಂದ ಅವು ತ್ರಿಮಾನದ ಅನುಭವಕ್ಕೆ ನಿಲುಕಿದರೆ, ಇಲ್ಲಿ ಅಂತಹ ಛಾಯಾ ತಾಂತ್ರಿಕತೆ ಗೌಣವಾಗಿ ದ್ವಿಮಾನ ಮೈವಳಿಕೆಯನ್ನು ನಿರೂಪಿಸುವ ಅಗತ್ಯತೆ ಕಂಡು ಬಂದಿದೆ. ಏಕೆಂದರೆ ಚಿತ್ರದ ಉದ್ದಿಶ್ಯವೇ ಸ್ಪಷ್ಟತೆಯನ್ನು ಹೊಂದಿರುವಾಗ ಅಂತಹ ಛಾಯಾ ತಂತ್ರಗಾರಿಕೆಯನ್ನು ಹಿರೇಗೌಡರು ಬದಿಗಿಟ್ಟು ಬೆಳಕು ಮತ್ತು ದಟ್ಟತೆಯ ಎರಡು ಛಾಯೆಗಳನ್ನು ಇಲ್ಲಿ ದುಡಿಸಿಕೊಂಡಿದ್ದಾರೆ. ವಿನ್ಯಾಸಗಳು ಕೂಡ ವ್ಯಾಟಿಕನ್ ವಾಸ್ತು ವಿನ್ಯಾಸವನ್ನು ಹೊಂದಿದ್ದು ಅವುಗಳನ್ನು ದೃಶ್ಯಾತ್ಮಕ ನೆಲೆಯಲ್ಲಿ ಸಾಂದರ್ಭಿಕವಾಗಿ ದುಡಿಸಿಕೊಂಡಿರುವ ಕ್ರಮ ವಿಸ್ಮಯವೆನಿಸುತ್ತದೆ. ಒಟ್ಟಿನಲ್ಲಿ ಜನಸಾಮಾನ್ಯನಿಗೂ ಅಪ್ಯಾಯಮಾನವಾಗಬಲ್ಲ ಕಲಾಕೃತಿಯೊಂದನ್ನು ಸಾಂದರ್ಭಿಕವಾಗಿ ನೀಡಿದ ಹಿರೇಗೌಡರು ಪ್ರಕೃತಿ ವಿದ್ಯಾಮಾನಗಳಿಗೆ ಸ್ಪಂದಿಸಬಲ್ಲ ಕಲಾವಿದರ ಸಾಲಿನಲ್ಲಿ ನಿಲ್ಲುತ್ತಾರೆ.

---

೧೬. ವಿ.ಬಿ.ಹಿರೇಗೌಡರ ಸಂದರ್ಶನದಿಂದ

೧೧. ಸಂಯೋಜನೆ (೨೦೦೫)

ಈ ಚಿತ್ರದ ಪ್ರಮುಖ ವಸ್ತು ಗ್ರಾಮೀಣ ಪರಿಸರದ ಮಧ್ಯದಲ್ಲಿ ಸ್ವಚ್ಛಂದವಾಗಿ ನಿಸರ್ಗವನ್ನು ಪ್ರೀತಿಸುವ ಹೆಣ್ಣಿನ ಸನ್ನಿವೇಶ ಹಾಗೂ ಗ್ರಾಮೀಣ ಮೂಢ ಪರಂಪರೆಗಳನ್ನು ಬದಿಗಿಟ್ಟು ನವ್ಯಜೀವನದ ಮಧುರ ಕ್ಷಣಗಳನ್ನು ಸ್ವಚ್ಛಂದವಾಗಿ ಆಸ್ವಾದಿಸುವ ಭಾವಪೂರ್ಣ ಚಿತ್ರ ಇದಾಗಿದೆ. ಈ ಚಿತ್ರದ ಬಲಭಾಗದಲ್ಲಿ ಕಿಟಕಿಯಿಂದ ಹೊರನುಗ್ಗಿ ಹಾರಾಡುವ ಪಕ್ಷಿಯ ಚಿತ್ರವು ರಚಿತವಾಗಿದ್ದು ಸ್ವಾತಂತ್ರ್ಯದ ಸಂಕೇತವನ್ನು ಎತ್ತಿ ಹಿಡಿಯುತ್ತದೆ. ಇಲ್ಲಿ ಸ್ವಾತಂತ್ರ್ಯವೆಂಬುದು ಪ್ರತಿಯೊಂದು ವರ್ಗದ ಮನುಕುಲಕ್ಕೆ ದೊರಕಿ ಜೀವನದ ಸವಿಜೇನಿನ ಸಂತೃಪ್ತಿ ಅವರದಾಗಬೇಕೆಂಬುದು ಈ ಚಿತ್ರದ ಆಶಯವಾಗಿದೆ.[೭]

ಈ ಆಶಯದ ಹಿನ್ನೆಲೆಯಲ್ಲಿ ರೂಪುಗೊಂಡಿರುವ ಈ ಕಲಾಕೃತಿ ಜನಪದ ನೆಲೆಯ ವಿನ್ಯಾಸಗಳನ್ನೇ ಹೊಂದಿದೆ. ಪ್ರಕೃತಿಯ ಭಾಗವಾಗಿ ಬದುಕುವ ಗ್ರಾಮೀಣರು ಹತ್ತು ಹಲವಾರು ಕನಸುಗಳನ್ನು ಹೊತ್ತವರು. ಆಧುನಿಕ ಬದುಕಿನತ್ತ ಪಯಣ ಆರಂಭಿಸುವ ಇರಾದೆ ಭಾವ ಈ ಚಿತ್ರದ ಸ್ತ್ರೀಯ ಆಕೃತಿಯಲ್ಲಿ ಸ್ಪಷ್ಟವಾಗಿ ಒಡಮೂಡಿದೆ. ಕನಸುಗಳಿಗೆ ಪೂರಕವಾಗಿ ಹೂವುಗಳನ್ನು, ಮೌಢ್ಯತೆಯ ಕೋಣೆಯಿಂದ ಹೊರಬರಲು ತಹತಹಿಸುತ್ತಿರುವುದಕ್ಕೆ ಪಕ್ಷಿಯನ್ನು ಸಾಂಕೇತಿಕವಾಗಿ ದುಡಿಸಿಕೊಂಡಿರುವ ಹಿರೇಗೌಡರು, ಚಿತ್ರದಲ್ಲಿ ವರ್ತುಳಾಕಾರದ ಆಕಾರಗಳೊಂದಿಗೆ ಜ್ಯಾಮಿತಕವಾದ ಆಕಾರಗಳನ್ನು ಪ್ಯಾಟರ್ನನಂತೆ ದುಡಿಸಿಕೊಂಡಿದ್ದಾರೆ. ಅಲ್ಲಲ್ಲಿ ಗ್ರಾಮೀಣ ಭಾಗದಲ್ಲಿ ಕಂಡು ಬರುವ ಕೌದಿ ವಿನ್ಯಾಸಗಳನ್ನು ರಚಿಸಿ ಎಂದಿನಂತೆ ಅವಕಾಶದಲ್ಲಿ ಸ್ವಚ್ಛಂದತೆಯನ್ನು ಉಳಿಸಿಕೊಂಡಿದ್ದಾರೆ. ಚಿಕ್ಕದಾದ ಆದರೆ ಚೊಕ್ಕತನದಿಂದ ಕೂಡಿದ ರೇಖೆಗಳು ಸ್ತ್ರೀಯ ದೇಹದ ಉಬ್ಬು ತಗ್ಗುಗಳ ಮೈಮಾಟವನ್ನು ಸುಂದರವಾಗಿ ರೂಪಿಸಿವೆ. ಅವಕಾಶದ ವಿವಿಧ ಕೋನಗಳಲ್ಲಿ ಹರಡಿರುವ ವಿನ್ಯಾಸಗಳು ತೃಪ್ತಿಕರವೆನ್ನಬಹುದಾದ ಮತ್ತು ಚಿತ್ರದ ಉದ್ದಿಶ್ಯಕ್ಕೆ ಪೂರಕವೆನ್ನಬಹುದಾದ ವಾತಾವರಣವನ್ನು ಸೃಷ್ಟಿಸುವಲ್ಲಿ ಸಹಕಾರಿಯಾಗಿವೆ.

೧೨. ವೇದನೆ (೨೦೦೫)

ಕ್ರೈಸ್ತಧರ್ಮದ ಮೂಲ ಪುರುಷ ಯೋಹಾನನ ಸಂದೇಶಗಳು ಪ್ರೀತಿ ಮತ್ತು ಕ್ಷಮೆ ದಯಪಾಲಿಸುವುದು. ಆದರೆ ಇಂಥ ದೈವೀ ಸ್ವರೂಪ ವ್ಯಕ್ತಿಯನ್ನು ಅರಿಯದ ದುಷ್ಟ ಸಮಾಜದ ಚಿತ್ರಹಿಂಸೆ ಹಾಗೂ ನಿಂದನೆಗಳಿಂದ ಅಮಾನುಷವಾಗಿ ಶಿಲುಬೆಗೇರಿಸುವ ಸನ್ನಿವೇಶ ನೋಡಿದಾಗ ಎಂಥ ಕ್ರೂರಿಯ ಹೃದಯವೂ ಕರಗದೆ ಇರಲಾರದು. ಇಂತಹ ಸನ್ನಿವೇಶಕ್ಕೊಳಗಾದ ಕ್ರೈಸ್ತನ ಬದುಕಿನ ಅಂತಿಮ ಘಟ್ಟದಲ್ಲಿ ಅನುಭವಿಸಿದ ವೇದನೆಯ ಪರಕಾಷ್ಠೆಯ ನೈಜ ಚಿತ್ರಣದ ದೃಶ್ಯ ಇದಾಗಿದೆ. ಇಲ್ಲಿ ಕ್ರೈಸ್ತನ ಮುಖ ಭಾವದಲ್ಲಿ ಕಾಣುವ ವೇದನೆ, ಅವನಿಗೆ ತೊಡಿಸಿದ ಮುಳ್ಳಿನ ಕಿರೀಟ ಹಾಗೂ ಶಿಲುಬೆಗೇರಿದ ಕ್ರೈಸ್ತನ ಎದೆಯ ಮೇಲೆ ಜೋತು ಹಾಕಿದ ಕೈಗಳಲ್ಲಿ ಮತ್ತು ಎರಡು ಕಾಲುಗಳನ್ನು ಒಂದುಗೂಡಿಸಿ ಘೋರವಾದ ಮೊಳೆಗಳಿಂದ ಹೊಡೆದಾಗ ಆಗಿರಬಹುದಾದ

---

೦೭. ಎ.ಬಿ.ಹಿರೇಗೌಡರ ಸಂದರ್ಶನದಿಂದ




೧೨. ವೇದನೆ, ೨೦೦೫



೧೩. ಸುನಾಮಿ, ೨೦೦೬

ನೋವು, ಮೊಳೆ ಜಡಿದ ಭಾಗದಿಂದ ಚಿಮ್ಮುವ ರಕ್ತ ಹರಿದು ಭೂಮಿಯ ಮೇಲೆ ಬಿದ್ದಾಗ ಹೃದಯವಂತ ಜನರ ಆಕ್ರಂದನ, ಇವೆಲ್ಲವುಗಳಿಂದ ಹೊರ ಬರುವ ಒಂದೇ ಒಂದು ಭಾವ 'ವೇದನೆ' ಎಂಬುದನ್ನು ಪ್ರತಿಪಾದಿಸುತ್ತದೆ[೮] ಈ ಕೃತಿ.

ಹಿರೇಗೌಡರು ಎಂದಿನಂತೆ ಸಾಂಕೇತಿಕ ರೂಪ ವಿನ್ಯಾಸದ ಮೂಲಕವಾಗಿ ಚಿತ್ರದ ಉದ್ದಿಶ್ಯವನ್ನು ಪ್ರಸ್ತುತಪಡಿಸುತ್ತಾರೆ. ಯೋಹಾನನ ಶಿರದಲ್ಲಿ ಅವನು ನೀಡಿದ ಸಂದೇಶಗಳನ್ನು ಬಿಂಬಿಸುವುದಕ್ಕೆ ಬೈಬಲ್‌ನಂತಹ ಗ್ರಂಥಗಳ ವಿನ್ಯಾಸಗಳನ್ನು ರಚಿಸಿದ್ದಾರೆ. ಹಾಗೆಯೇ ಅವನನ್ನು ದಂಡಿಸಿರುವ ಶಿಲುಬೆಯನ್ನು, ಆ ಸಂದರ್ಭದಲ್ಲಿ ಅನುಭವಿಸಿದ ವೇದನೆಗೆ ಮುಳ್ಳಿನ ಬಳ್ಳಿಯನ್ನು ಸಾಂಕೇತಿಕ ಸಂಯೋಜನೆಯ ಮೂಲಕ ಬಿಂಬಿಸಿದ್ದಾರೆ. ಕಾಗದದ ಅವಕಾಶವನ್ನು ಎಂದಿನ ಶೈಲಿಯಲ್ಲಿ ಉಳಿಸಿಕೊಂಡ ಹಿರೇಗೌಡರು ಏಕರೂಪವಾದ ರೇಖಾ ಮಾಧ್ಯಮವನ್ನು ಅದರ ಸಾಧ್ಯತೆಗೆ ಅನುಗುಣವಾಗಿ ದುಡಿಸಿಕೊಳ್ಳುವ ಸಂದರ್ಭದಲ್ಲಿ, ರೇಖೆಗಳನ್ನು ಅಷ್ಟ ದಿಕ್ಕುಗಳಲ್ಲಿ ಪ್ರವಹಿಸಿ, ಚಿತ್ರದ ಉದ್ದೇಶಕ್ಕೆ ನೆರಳು ಬೆಳಕಿನ ಸಡಗರದ ಮೂಲಕ ವಿಶಿಷ್ಟ ಸಂಯೋಜನೆಗೆ ಮುನ್ನುಡಿ ಬರೆದಿದ್ದಾರೆ. ಸಂಭ್ರಮಾತ್ಮಕ ಸನ್ನಿವೇಶಗಳಿಗೆ ದೃಶ್ಯಾತ್ಮಕವಾಗಿ ಸ್ಪಂದಿಸುವಂತೆ ಸಂವೇದನೆಗಳನ್ನು ತಮ್ಮ ಅನುಭವಿ ರೇಖೆಗಳ ಮುಖಾಂತರ ಕಾವ್ಯ ಬರೆಯಬಲ್ಲರೆಂಬುದಕ್ಕೆ ಈ ಕೃತಿ ನಿದರ್ಶನವಾಗುತ್ತದೆ.

೧೩. ಸುನಾಮಿ (೨೦೦೬)

'ಸುನಾಮಿ' ಹೊಸ ಸಹಸ್ರಮಾನದ ದುರಂತಮಯ ಕೊಡುಗೆ. 'ಸುನಾಮಿ' ಸಮುದ್ರದ ಮಧ್ಯಭಾಗದಲ್ಲಿ ಭೂಕಂಪನದಿಂದ ಉಂಟಾಗುವ ದೈತ್ಯ ನೀರಿನ ಅಲೆಗಳು ಹಾಗೂ ಲೆಕ್ಕಾಚಾರಕ್ಕೆ ಸಿಲುಕದ ಗಾಳಿಯ ಶರವೇಗದಿಂದಾಗಿ ಅಲೆಗಳು ದಡಕ್ಕೆ ಅಪ್ಪಳಿಸಿ ಅರೆಕ್ಷಣದಲ್ಲಿ ಮನುಕುಲವೇ ನಿರ್ನಾಮವಾದ ಹಿಂದಿನ ದಿನಗಳನ್ನು ಮರೆಯುವಂತಿಲ್ಲ. ಆ ಸಂದರ್ಭದಲ್ಲಿ ಜನರಲ್ಲಿ ಜಾಗತಿಕ ಶೂನ್ಯ ಭಾವವನ್ನು ಅನುಭವಿಸಿದಾಗ ಅಳಿದುಳಿದು ನಿರ್ಗತಿಕರಾದ ದೌರ್ಭಾಗ್ಯ ಜನರ ದುಃಖದ ಮುಖಭಾವಗಳ ಚಿತ್ರೀಕರಣ ಈ ಚಿತ್ರದ ಮೂಲ ಆಶಯವಾಗಿದೆ. ಇಲ್ಲಿ ಸಾಂಕೇತಿಕವಾಗಿ ದೈನ್ಯತೆಯನ್ನು, ದುಃಖವನ್ನು ಹಾಗೂ ನಿರ್ಗತಿಕತೆಯನ್ನು ಸಾರುವ ಹಾಗೂ ಅಘೋರ ಅಲೆಗಳಿಗೆ ಸಿಕ್ಕು ನುಚ್ಚು ನೂರಾಗಿ ದೋಣಿಗಳು ಅವುಗಳ ಪಳುವಳಿಕೆಯ ಹಿಂದೆ ಇರುವ ನೀರಸ ಕ್ರೂರ ಮೌನ ಎಂಥವರ ಹೃದಯವನ್ನೂ ತಟ್ಟದೇ ಇರಲಾರದು ಎಂಬ ಭಾವ ಈ ಚಿತ್ರದಿಂದ ವೇದ್ಯವಾಗುತ್ತದೆ.[೯]

'ಸುನಾಮಿ' ಅಪ್ಪಳಿಸಿದಾಗ ದೈನಿಕಗಳಲ್ಲಿ ಅನೇಕ ಚಿತ್ರಗಳು ಪ್ರಸಾರಗೊಂಡಿದ್ದುದು ನಮಗೆಲ್ಲ ನೆನಪಿರಬಹುದು. ಅದನ್ನು ಸ್ಮೃತಿ ಪಟಲದಲ್ಲಿ ತಂದುಕೊಂಡಾಗ ಬೃಹದಾಕಾರವಾದ ಅಲೆಗಳು ಮನುಕುಲದ ಅಂತರಂಗವನ್ನೇ ಕದಡುತ್ತವೆ. ಆದರೆ ಈ ಚಿತ್ರದಲ್ಲಿ ಅಂತಹ ಬೃಹತ್ ಅಲೆಗಳ ರೂಪಗಳು ಗೌಣ. ಕೇವಲ ಸಾಂಕೇತಿಕವಾದ ಅಲಂಕಾರಿಕ ನೆಲೆಯ ಅಲೆಗಳು, ಸಾಗರದ ಜೀವಿಗಳ,

---

೦೮. ವಿ.ಬಿ.ಹಿರೇಗೌಡರ ಸಂದರ್ಶದಿಂದ
೦೯. -ಅದೇ-



೧೪. ಬಾಹುಬಲಿ, ೨೦೦೬



೧೫. ನಾಟ್ಯ ಮಯೂರ, ೨೦೦೭

ದೋಣಿ ವಿನ್ಯಾಸಗಳ ಮೂಲಕವಾಗಿ ಈ ಚಿತ್ರದ ಉದ್ದಿಶ್ಯವನ್ನು ಪ್ರಸ್ತುತಪಡಿಸಲಾಗಿದೆ. ಸುನಾಮಿಯಿಂದ ನಿಶ್ಚಲಗೊಂಡ ಮಾನವಾಕೃತಿಗಳು ಸಂಕ್ಷೇಪಯುಕ್ತ ರೇಖೆಗಳಿಂದ ರಚನೆಗೊಂಡಿವೆ. ಇಲ್ಲಿ ಎರಡು ಬಗೆಯ ಪ್ಯಾಟರ್ನಗಳ ಒಳಾವರಣದಲ್ಲಿ ಚಿತ್ರದ ಒಟ್ಟು ಅಂಶಗಳನ್ನೇ ಬಿಂಬಿಸಲಾಗಿದೆ. ಕಾಗದದ ಅವಕಾಶದ ಮಧ್ಯಭಾಗಕ್ಕೆ ಮುಖ್ಯ ರೂಪಾಂಶಕ್ಕೆ ಪೂರಕವಾಗಿ ಬಲಭಾಗದಲ್ಲಿ ದೋಣಿಯಾಕಾರದ ರೂಪಾಂಶಗಳು ರೂಪಗೊಂಡಿದ್ದು ಹೊರತುಪಡಿಸಿದರೆ ಅವಕಾಶದಲ್ಲಿ ಸಂಕ್ಷೇಪಯುಕ್ತ ವಿನ್ಯಾಸಗಳು ಮಾತ್ರ ರಚನೆಗೊಂಡಿದ್ದು, ಕನಿಷ್ಠ ರೇಖೆಗಳು ಗರಿಷ್ಠ ಭಾವೋನ್ಮಾದತೆಯನ್ನು ಸ್ಫುರಿಸುವಲ್ಲಿ ಯಶಸ್ವಿಯಾಗಿದೆ.

**೧೪. ಬಾಹುಬಲಿ (೨೦೦೬)**

ಶ್ರವಣಬೆಳಗೊಳದ ಬಾಹುಬಲಿಯ ಶಿಲ್ಪಕ್ಕೆ ಪ್ರತಿ ಹನ್ನೆರಡು ವರ್ಷಕ್ಕೊಮ್ಮೆ ಮಹಾಮಸ್ತಕಾಭಿಷೇಕ ನಡೆಯುವುದು ಒಂದು ಪರಂಪರೆ. ಇಂಥ ಮಹಾಮಸ್ತಕಾಭಿಷೇಕವನ್ನು ನೋಡುವ ಸೌಭಾಗ್ಯ ೨೦೦೬ ರಲ್ಲಿ ಹಿರೇಗೌಡರ್ ಅವರಿಗೆ ಪ್ರಾಪ್ತವಾಗಿತ್ತು. ೫೮ ಅಡಿಯ ಏಕಶಿಲಾ ಬಾಹುಬಲಿಯ ಮುಖ ಹಸನ್ಮುಖಿ ಮೌನಿ. ಅವನ ತುಟಿಯಿಂದ ಹೊರಹೊಮ್ಮುವ ಮಂದಸ್ಮಿತ ಭಾವ, ವಿಶಾಲ ಎದೆಯಾಂತರಾಳದಲ್ಲಿರುವ ದೈವೀಸಂಭೂತ ಪಾರದರ್ಶಕ ಹೃದಯ, ತದೇಕಚಿತ್ತದಿಂದ ನಿಂತಿರುವ ಅಚಲ ಭಾವ, ನೀಳವಾದ ನಾಸಿಕ, ಸಂಪಿಗೆ ಪುಷ್ಪದ ದಳದಂತಿರುವ ಅಂತರ್ಯಾಮಿ ಕಣ್ಣುಗಳು, ಕಮಲದ ಎಸಳಿನಂತಹ ತುಟಿಗಳು, ತ್ಯಾಗದ ಸಂಕೇತವಾಗಿರುವ ನಗ್ನತೆ, ಆತನ ತುಟಿಯಂಚಿನಲ್ಲಿ ಸಾಕಾರಗೊಂಡ ಮಂದಸ್ಮಿತ ಭಾವದ ಶಿಲಾಮೂರ್ತಿಯನ್ನು ವೀಕ್ಷಿಸುವುದೇ ಒಂದು ವಿಶಿಷ್ಟ ಅನುಭವವೆಂದು ಹೇಳುವ ಹಿರೇಗೌಡರು ಆ ಅನುಭವವನ್ನು ದೃಶ್ಯರೂಪದಲ್ಲಿ ರೇಖಾತ್ಮಕವಾಗಿ ಪ್ರಕಟಿಸಿದ್ದಕ್ಕೆ ಈ ಚಿತ್ರ ನಿದರ್ಶನ.

ಈ ಒಂದು ಚಿತ್ರದಲ್ಲಿ ಇಡೀ ಶ್ರವಣಬೆಳಗೊಳದ ಪರಿಸರವನ್ನು ಕಾಣಬಹುದಾಗಿದ್ದು, ಎಡ ಪಾರ್ಶ್ವದಲ್ಲಿ ಬಾಹುಬಲಿ ಪ್ರತಿಷ್ಠಾಪನೆಗೊಂಡಿರುವ ಬಾಹುಬಲಿ ಬೆಟ್ಟ, ಬೆಟ್ಟಕ್ಕೆ ಹೋಗುವ ಮೆಟ್ಟಿಲುಗಳ ದ್ವಾರ, ಬಲಪಾರ್ಶ್ವದಲ್ಲಿ + ಚಿನ್ಹೆಯಲ್ಲಿ ಪೂರ್ಣರೂಪದ ಬಾಹುಬಲಿ, ಭವ್ಯ ಮೂರ್ತಿಗೆ ಮಂದಸ್ಮಿತ ಛಾಯೆಯನ್ನು ತಂದುಕೊಟ್ಟ ಅವನ ತುಟಿಗಳ ವಿನ್ಯಾಸ, ಒಂದು ವರ್ತುಳದಲ್ಲಿ ಅವನ ಪಾದುಕೆಗಳು, ಪುಷ್ಪದಲ್ಲಿ ಪೂರ್ಣ ಕುಂಭ ಇವೆಲ್ಲವೂ ಒಂದೇ ಅವಕಾಶದಲ್ಲಿ ಚಿತ್ರಿತಗೊಂಡಿವೆ. ಒಟ್ಟು ಅವಕಾಶದಲ್ಲಿ 'ಲ' ಅಕ್ಷರ ರೂಪದಲ್ಲಿ ಸಂಯೋಜನೆಗೊಂಡಿರುವ ಇಲ್ಲಿನ ರೂಪಗಳು ಕಾಗದದ ಇತರ ಅವಕಾಶವನ್ನು ಆಕ್ರಮಿಸಿಕೊಂಡಿಲ್ಲ. ಪ್ರತಿ ರೂಪ ವಿನ್ಯಾಸಕ್ಕೆ ಬಾಹ್ಯರೇಖೆಯ ಸ್ಪರ್ಶ, ಒಳಗಣ ಚಿಕ್ಕ ಚಿಕ್ಕ ರೇಖೆಗಳ ಛಾಯಾ ಲಯದಿಂದ ಇಟ್ಟು ಚಿತ್ರಕ್ಕೆ ಭಕ್ತಿಯ ಮಂದಸ್ಮಿತದ ಭಾವ ಪ್ರಾಪ್ತವಾಗಿದೆ.

**೧೫. ನಾಟ್ಯಮಯೂರ (೨೦೦೭)**

ಭಾರತದ ರಾಷ್ಟ್ರೀಯ ಪಕ್ಷಿ ಮಯೂರ. ಮಯೂರದ ನಾಟ್ಯಕ್ಕೆ ಮನಸೋಲದವರಾರು? ಹಿರೇಗೌಡರು ತಮ್ಮ ಅನುಭವೀ ನವಿರು ರೇಖೆಗಳಿಗೆ ಒಂದು ರೂಪವನ್ನು ಕೊಡುವ ಕಾರಣಕ್ಕಾಗಿ



೧೬. ಅವಳಿ ಪಕ್ಷಿಗಳು, ೨೦೦೭



೧೭. ಸ್ಟಿಲ್ ಲೈಫ್, ೨೦೦೭

ಅಲಂಕಾರಿಕ ನೆಲೆಯಲ್ಲಿ ರಚಿತಗೊಂಡಿದೆ ಈ ಕಲಾಕೃತಿ. ಈ ಚಿತ್ರದ ವಿನ್ಯಾಸ ನಿಸರ್ಗದಲ್ಲಿ ಕಾಣಬರುವ ಎಲೆ, ಹೂವು, ಪರಾಗ ಹಾಗೂ ವೃಕ್ಷ ಸಮೂಹ ಮುಂತಾದ ಲಕ್ಷಣಗಳನ್ನು ದುಡಿಸಿಕೊಂಡು ನರ್ತಿಸುತ್ತಿರುವ ಮಯೂರ ಭಂಗಿಯನ್ನು ಸೃಜನಾತ್ಮಕ ಹಾಗೂ ಶೃಂಗಾರ ನೆಲೆಯಲ್ಲಿ ಅದರ ಭಾವಗಳನ್ನು ಸ್ಫುರಿಸುವಂತೆ ಚಿತ್ರಿಸಿರುವದೇ ಈ ಚಿತ್ರದ ಪ್ರಧಾನ ಲಕ್ಷಣವಾಗಿದೆ.

ಲಾಲಿತ್ಯ ಪೂರ್ಣವಾದ ರೇಖೆಗಳ ಬೆಡಗು ಬಿನ್ನಾಣ, ನವಿಲಿನ ಗರಿಗಳಿಗೆ ಚಿಕ್ಕ ಚಿಕ್ಕ ರೇಖೆಗಳ ಸ್ಪರ್ಶದಿಂದ ಅಲಂಕಾರ, ತರುಲತೆಗಳು ಮಯೂರನಿಗೆ ಚುಂಬಿಸುವ ರೇಖೆಗಳು. ತನ್ಮೂಲಕ ಈ ಚಿತ್ರದಲ್ಲಿ ಅನುಭವಿಸಬಹುದಾದ ನವಿರಾದ ರೇಖಾವಿನ್ಯಾಸ, ಸುಮಧುರ ಲಯ, ಅಂಗಸೌಷ್ಠವದ ಬಿಂಕ-ಬಿನ್ನಾಣದ ಸೊಬಗು, ತಾಳಬದ್ಧ ಹೆಜ್ಜೆ ಇತ್ಯಾದಿ ಗುಣಲಕ್ಷಣಗಳು ಚಿತ್ರದ ಸೌಂದರ್ಯವನ್ನು ಹಾಗೂ ಮೌಲ್ಯವನ್ನು ದ್ವಿಗುಣಗೊಳಿಸಿದರೆ, ಸಂಯೋಜನೆ ಇನ್ನೂ ಆಕರ್ಷಕ. ಮರದ ಸಾಂಕೇತಿಕ ವಿನ್ಯಾಸ, ಮಯೂರದ ಕೆಳಗೆ ಪೃಥ್ವಿಯಂತಹ ವಿನ್ಯಾಸ, ಒಂದು ಕಾಲಿನಿಂದ ನಿಂತ ಮಯೂರ ಮೇಲ್ಭಾಗದಲ್ಲಿ ಜೋತುಬಿದ್ದ ಬಳ್ಳಿಗಳನ್ನು ಚುಂಬಿಸುವ ಉತ್ಸಾಹಕ್ಕೆ ಪೂರಕವಾದ ಸಂಯೋಜನೆ. ನಿರಾಕ್ರಮಣವಾದ ಅವಕಾಶ. ಚಿತ್ರವೊಂದರ ರಚನೆಗೆ ಎಷ್ಟು ಬೇಕೋ ಅಷ್ಟೇ ಅವಕಾಶವನ್ನು ಆಕ್ರಮಿಸಿಕೊಳ್ಳುವಿಕೆ ಅಥವಾ ದುಡಿಸಿಕೊಳ್ಳುವಿಕೆ ಎನ್ನಬಹುದು.

**೧೬. ಅವಳಿ ಪಕ್ಷಿಗಳು (೨೦೦೭)**

ಮೊದಲ ನೋಟಕ್ಕೆ ಈ ಚಿತ್ರ ಅಮೂರ್ತ. ಆದರೆ ಆಳಕ್ಕೆ ಇಳಿದಾಗ ಮೂರ್ತರೂಪಗಳ ಸಾನಿಧ್ಯದಲ್ಲಿ ಸಹೃದಯ. ಈ ಸಂಕ್ಷೇಪಯುಕ್ತ ಮಾತಿಗೆ ಪೂರಕ ಈ ಕಲಾಕೃತಿ. ಈ ರೇಖಾಚಿತ್ರದಲ್ಲಿ ಗಮನಿಸಬಹುದಾದ ಪ್ರಮುಖ ಅಂಶವೆಂದರೆ ಶಕ್ತಿಯುತವಾದ ರೇಖಾಪ್ರಯೋಗ, ಇಲ್ಲಿ ರಚಿತಗೊಂಡ ವಿರುದ್ಧ ದಿಕ್ಕಿನಲ್ಲಿ ಹಾರುತ್ತಿರುವ ಎರಡು ಪಕ್ಷಿಗಳು ರೇಖಾವೈಖರಿಯಲ್ಲಿ ಮೆರೆದಿವೆ. ಇವು ಅಮೂರ್ತಭಾವ ನೀಡಿದರೂ ನೈಜತೆಯ ಸ್ವಭಾವವನ್ನು ಮೈಗೂಡಿಸಿಕೊಂಡಿವೆ ಹಾಗೂ ಪ್ರಬುದ್ಧ ಸಂಯೋಜನಾ ಸತ್ವ ಹಾಗೂ ತತ್ವಗಳನ್ನು ಅಳವಡಿಸುವಲ್ಲಿ ಸಂಪೂರ್ಣ ಯಶಸ್ವಿಯಾಗಿದ್ದಲ್ಲದೆ ಕಪ್ಪು ಬಿಳುಪಿನ ಛಾಯಾ ಪ್ರಯೋಗ ಹಿತವಾಗಿಯೂ ಸಮ್ಮಿಳಿತಗೊಂಡಿದೆ.

ಹಿರೇಗೌಡರ ಇತರೆ ಚಿತ್ರಗಳಿಗಿಂತ ಇದು ಕೊಂಚ ಭಿನ್ನ. ಈ ಚಿತ್ರ ಚಲನೆಯ ಭ್ರಾಂತಿಯನ್ನುಂಟು ಮಾಡುವ ನಿಟ್ಟಿನಲ್ಲಿ ವಿಶಿಷ್ಟ ಅನುಭವಕ್ಕೆ ನಿಲುಕುತ್ತದೆ. ಇಲ್ಲಿನ ಪ್ರತಿಯೊಂದು ರೇಖೆಗಳಿಗೂ ಚಲನಾ ಶಕ್ತಿ ಇರುವುದರಿಂದ ಚಲನೆಯ ಭ್ರಾಂತಿಗೆ ಕಾರಣವಾಗಿದೆ. ವಿರುದ್ಧ ದಿಕ್ಕಿನಲ್ಲಿ ರೇಖೆಗಳು ಹರಿದಿದ್ದರೂ ಎರಡೂ ರೂಪ ವಿನ್ಯಾಸಗಳಿಗೆ ಪೂರಕ ಸಂಬಂಧವನ್ನು ಕಲ್ಪಿಸುವ ನಿಟ್ಟಿನಲ್ಲಿ ಇಲ್ಲಿನ ರೇಖೆಗಳು ಚೇತೋಹಾರಿಯಾಗಿವೆ. ಒಂದು ಬಗೆಯಲ್ಲಿ ಅರ್ಧ ವರ್ತುಳದ ಆಕಾರದಲ್ಲಿ ಸಂಯೋಜನೆಗೊಂಡ ಇಲ್ಲಿನ ರೇಖಾ ರೂಪಗಳು ಕಾಗದದ ಹೊರಭಾಗದಿಂದ ಕಾಗದದ ಒಳಾವರಣವನ್ನು ಪ್ರವೇಶಿಸಿ ಕೂಡುಕೊಳ್ಳುವಿಕೆಯ ಅನುಭವ ಇಲ್ಲಿ ದಕ್ಕುತ್ತದೆಯಲ್ಲದೇ ಈ ಬಗೆಯ ಸಂಯೋಜನಾ ಕ್ರಮ ವಿಸ್ಮಯವೆನ್ನಬಹುದಾಗಿದೆ.

೧೭. ಸ್ಟಿಲ್ ಲೈಫ್ (೨೦೦೭)(ಸ್ಥಿರ ಚಿತ್ರ ವಿನ್ಯಾಸ)

ಈ ಚಿತ್ರ ಮೇಲ್ನೋಟಕ್ಕೆ ಮರದ ವಿನ್ಯಾಸವನ್ನು ಹೊಂದಿದ ಸಂಯೋಜನಾ ಕ್ರಮ. ಏಕೆಂದರೆ ಹೂವಿನ ಗುಚ್ಛದ ಅನುಭವವನ್ನು ಕೊಡುವಂಥ ಅಲಂಕಾರಿಕ ಸೌಪರ್ಣಗಳ ವಿನ್ಯಾಸ ಕ್ರಮವೇ ಈ ಚಿತ್ರದಲ್ಲಿ ಮೂಡಿರುವುದರಿಂದ ಅಂತಹ ಅನುಭವ ದಕ್ಕಿರಬಹುದು. ಈ ಚಿತ್ರದಲ್ಲಿ ಯಾವುದೇ ಭಾಗ ಗಮನಿಸಿದರೂ ವಸ್ತು ರೂಪದ ನಿಖರತೆಯನ್ನು ನೀಡುವುದಿಲ್ಲವಾದರೂ ಚಿತ್ರದ ಕೆಳಭಾಗ ಹೂದಾನಿಯ ಅನುಭವ ಕೊಡುತ್ತದೆ. ಅದರ ಬಾಹ್ಯ ಪೃಷ್ಠದಲ್ಲಿ ಒಂದು ಸುಂದರ ಹೆಣ್ಣಿನ ಮುಖಭಾವವಿದೆ. ಹಾಗೆಯೇ ಅದರ ಮುಂಭಾಗದಲ್ಲಿ ಕೈಹಿಡಿಕೆಯ ರೂಪವನ್ನು ಸೃಷ್ಟಿಸುತ್ತದೆ.

ಶೀರ್ಷಿಕೆಗೆ ಅನುಗುಣವಾಗಿ ಈಕಲಾಕೃತಿ ಇಲ್ಲವೆಂಬ ಭಾವ ಬರುವುದು ಸಹಜ. ಏಕೆಂದರೆ ಸ್ಟಿಲ್ ಲೈಫ್ ವಿಷಯದಲ್ಲಿ ಎದುರಿಗಿಟ್ಟ ವಸ್ತುಗಳ ಅನುರೇಖಾ ಪದ್ಧತಿಯನ್ನು ಅನುಸರಿಸಿರುವ ಕಾರಣದಿಂದಾಗಿ ಮೇಲಿನ ಹೇಳಿಕೆಯ ಅನುಭವಕ್ಕೆ ಒಳಗಾಗಬಹುದು. ಆದರೆ ಇಲ್ಲಿ ಸೃಜನಾತ್ಮಕವಾದ ಸ್ಟಿಲ್ ಲೈಫ್‌ನ ಮಾದರಿಯನ್ನೇ ಅಥವಾ ತಂತ್ರವನ್ನೇ ಅನುಸರಿಸಿರುವುದರಿಂದ ಹಿರೇಗೌಡರು ನೀಡಿದ ಶೀರ್ಷಿಕೆ ಸೂಕ್ತವೆನಿಸುತ್ತದೆ. ಆ ಶೀರ್ಷಿಕೆಗೆ ಪೂರಕವಾಗಿಯೇ ಇಲ್ಲಿನ ರೂಪಾಂಶ ಮೇಲ್ನೋಟದಲ್ಲಿಯೇ ಗೋಚರವಾಗುತ್ತದೆ. ಕಾಗದದ ಮಧ್ಯಭಾಗಕ್ಕೆ ಸಂಯೋಜನೆಗೊಂಡಿರುವ ಇಲ್ಲಿನ ರೂಪಗಳು ದಟ್ಟ ರೇಖೆಗಳಿಂದ ಜನ್ಮತಾಳಿದವು. ಬೇಕಾದಲ್ಲಿ ದಟ್ಟ ಛಾಯೆಯನ್ನು ಹೊಂದಿರುವ, ರೂಪಗಳಿದ್ದಲ್ಲಿ ಪಾರದರ್ಶಕವೆಂಬಂತೆ ಛಾಯೆಯ ಸ್ಪರ್ಶವನ್ನು ಹೊಂದಿದ ತಂತ್ರ ಇಲ್ಲಿದೆ. ಹೆಣ್ಣಿನ ರೂಪಾಂಶಕ್ಕೆ ಪೂರಕವಾದ ಪರ್ಣಗಳ ವಿನ್ಯಾಸವೂ ಕೂಡ ರಚಿತವಾಗಿದೆ. ಅಂದರೆ ಒಂದು ಮಾತಿನಲ್ಲಿ ಹೇಳುವುದಾದರೆ ಅಲಂಕಾರಿಕವೆನ್ನಬಹುದಾದ ಪ್ರಜ್ಞಾನುಭವ ಈ ಚಿತ್ರದ ಮೂಲ ಆಶಯವೆನ್ನಬಹುದು.

**ಉಪಸಂಹಾರ**

ಹಿರೇಗೌಡರು ತಮ್ಮ ಬದುಕಿನುದ್ದಕ್ಕೂ ಸಾವಿರಾರು ಸಂಖ್ಯೆಯಲ್ಲಿ ರೇಖಾಚಿತ್ರಗಳನ್ನು ರಚಿಸಿದ್ದಾರೆ, ರಚಿಸುತ್ತಿದ್ದಾರೆ. ಪ್ರಾರಂಭದಲ್ಲಿಯೇ ಹಿರೇಗೌಡರ ರೇಖಾಚಿತ್ರಗಳು ಸಂಶೋಧಕರಿಗೆ "ಕನ್ನೆ ನೆಲ" ಇದ್ದಂತೆ ಎಂಬ ಮಾತನ್ನು ಕೂಡ ಈ ಹಿನ್ನೆಲೆಯಲ್ಲಿ ಹೇಳಲಾಗಿದೆ. ಅಧ್ಯಯನದ ವ್ಯಾಪ್ತಿಗೆ ಪೂರಕವಾಗಿ ಹಿರೇಗೌಡರ ಒಂದು ಪೆನ್ಸಿಲ್ ಮಾಧ್ಯಮದ ಕಲಾಕೃತಿಯೂ ಸೇರಿದಂತೆ ಒಟ್ಟು ಹದಿನೇಳು ಶಾಯಿ ಮಾಧ್ಯಮದ ಆಯ್ದ ರೇಖಾಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಲ್ಲಿನ ಪ್ರತಿ ರೇಖಾಚಿತ್ರಗಳು ವಸ್ತು-ವಿಷಯಗಳಿಂದ, ತಂತ್ರಗಳಿಂದ, ಸಂಯೋಜನಾ ಕ್ರಮದಿಂದ ಹಾಗೂ ರಚಿತಗೊಂಡ ಕಾಲಮಾನಗಳ ದೃಷ್ಟಿಯಿಂದಲೂ ತೀರ ವಿಭಿನ್ನ.

ವಿಷಯದ ದೃಷ್ಟಿಯಲ್ಲಿ ಹಿರೇಗೌಡರು ಶೈಕ್ಷಣಿಕ ಸ್ಥಳಗಳ ನಿರ್ಮಾಣಗಳು, ಧಾರ್ಮಿಕ ನೆಲೆಗಳು, ಪ್ರಕೃತಿಯ ನೆಲೆಗಳು, ಗ್ರಾಮೀಣ ನೆಲೆಗಳು, ಚಾರಿತ್ರಿಕ ನೆಲೆಗಳು ಮತ್ತು ಸೃಷ್ಟಿಗೆ ಸಂಬಂಧಪಟ್ಟ ನೆಲೆಗಳನ್ನೇ ತಮ್ಮ ಸೃಜನಶೀಲತೆಗೆ ದುಡಿಸಿಕೊಂಡಿರುವುದು ಇಲ್ಲಿನ ಚಿತ್ರಗಳ

ಅಧ್ಯಯನದಿಂದ ಕಂಡು ಬರುತ್ತದೆ. ಹಿರೇಗೌಡರು ಪ್ರಕೃತಿಯಲ್ಲಿ ಘಟಿಸುವ ವಿದ್ಯಮಾನಗಳಿಗೆ ಸ್ಪಂದಿಸುವ ಕಲಾವಿದರು ಎಂಬುದಕ್ಕೆ ಇಲ್ಲಿನ ಚಿತ್ರಗಳೇ ಸಾಕ್ಷಿ. ಅವರ ಸಾವಿರಾರು ಸಂಖ್ಯೆಯ ಚಿತ್ರಗಳಿಗೆ ಪ್ರಕೃತಿಯ ವಿದ್ಯಮಾನಗಳೇ ಪ್ರೇರಕ ಎಂಬುದು ಈ ಅಧ್ಯಯನದಿಂದ ದಿಟವಾಗುತ್ತದೆ.

ಚಿತ್ರ೫, ಮತ್ತು ೧೬ ಇವು ಇತರ ಚಿತ್ರಗಳಿಗಿಂತ ಬೇರೆ ತಂತ್ರಗಾರಿಕೆಯ ನೆಲೆಯಲ್ಲಿ ರಚನೆಗೊಂಡಿವೆ. ಏಕ ರೇಖೆಯ ಲಾಲಿತ್ಯ ಈ ಚಿತ್ರಗಳ ಜೀವಾಳವಾದರೆ, ಚಿತ್ರ ೧೭ ದಟ್ಟ ರೇಖೆಗಳಿಂದ ರಚಿತವಾಗಿದೆ. ಆದರೆ ಇತರ ಚಿತ್ರಗಳಲ್ಲಿ ಹಿರೇಗೌಡರ ರೇಖಾ ಶೈಲಿ ಎಂದು ಗುರುತಿಸಬಹುದಾದ ರೇಖೆಗಳೇ ಪ್ರಾಬಲ್ಯ ಸಾಧಿಸಿವೆ. ಆಕೃತಿಗೊಂದು ಬಾಹ್ಯ ರೇಖೆ, ಅದರ ಒಳಗಣ ಚಿಕ್ಕ ಚಿಕ್ಕ ರೇಖೆಗಳಿಂದ ವಿವಿಧ ಛಾಯೆಗಳ ರಚನೆ, ತನ್ಮೂಲಕ ರೂಪಕ್ಕೊಂದು ಮಾಟ, ಅರ್ಥ ಸಾಧ್ಯತೆಯನ್ನು ತಂದು ಕೊಡುವ ಹಿರೇಗೌಡರ ಕ್ರಮ ಅನನ್ಯ. (ಈ ವ್ಯಾಖ್ಯೆಗೆ ಪೂರಕವಾಗಿ ಚಿತ್ರ ೨,೪ ಮುಂತಾದವುಗಳನ್ನು ನೋಡಿ.)

ಚಿತ್ರ ೧,೨,೪,೫,೧೨,೧೩ ಮತ್ತು ೧೭ ಇವು ಸಂಯೋಜನೆಯಲ್ಲಿ ಏಕ ರೂಪತೆಯನ್ನು ಹೊಂದಿದ್ದು, ಬಹುತೇಕವಾಗಿ T ಆಕಾರದಲ್ಲಿಯೇ ಸಂಯೋಜನೆಗೊಂಡಿವೆ. ಚಿತ್ರ ೬ರಿಂದ ೧೧ರವರೆಗಿನ ಚಿತ್ರಗಳು ವಕ್ರ ರೂಪದಲ್ಲಿ ಸಂಯೋಜನೆಗೊಂಡಿದ್ದು ಕಂಡು ಬರುತ್ತದೆ. ಇನ್ನು ಕೆಲವು 'ಲ' ಆಕಾರದಲ್ಲಿಯೂ ರಚನೆಗೊಂಡಿದ್ದು ಕಂಡು ಬರುತ್ತದೆ. ಹೀಗೆ ಹಿರೇಗೌಡರು ಸಂಯೋಜನೆಯಲ್ಲೂ ವಿಭಿನ್ನವಾದ ಆಶಯಗಳನ್ನು ಹೊಂದುವುದರ ಮೂಲಕ ಆಯಾ ಚಿತ್ರದ ಉದ್ದಿಶ್ಯಕ್ಕೆ ಪೂರಕವಾದ ಸಂಯೋಜನಾ ಕ್ರಮವನ್ನು ಅನುಸರಿಸಿರುವುದನ್ನು ಇಲ್ಲಿನ ಅಧ್ಯಯನದಿಂದ ಕಾಣಬಹುದಾಗಿದೆ.

ಹೀಗೆ ಹಿರೇಗೌಡರು ತಮ್ಮ ರೇಖಾ ಚಿತ್ರಗಳಲ್ಲಿ ವೈವಿಧ್ಯತೆಯ ಪರಾಕಾಷ್ಠೆಯನ್ನು ತಲುಪಿದ್ದು, ಅಪರೂಪವಾಗುತ್ತಿರುವ ರೇಖಾಚಿತ್ರಕಲೆಯ ಮುತ್ಸದ್ದಿಯಾಗಿಯೂ ಕನ್ನಡ ಸಾರಸ್ವತ ಲೋಕದಲ್ಲಿ ಅಪರೂಪದ ಕಲಾವಿದರಾಗಿ ಗೋಚರವಾಗುತ್ತಾರೆ.

********



ಅಧ್ಯಾಯ : ನಾಲ್ಕು

# ವಿ.ಬಿ.ಹಿರೇಗೌಡರ : ವರ್ಣಚಿತ್ರಗಳು

ವರ್ಣ ಚಿತ್ರಗಳಿಗೆ ತುಂಬ ಪ್ರಾಚೀನವಾದ ಇತಿಹಾಸವಿದೆ. ಕ್ರಿ.ಪೂ.ಕ್ಕಿಂತ ಮೊದಲು ಗುಹೆಗಳಲ್ಲಿ ಆದಿಮಾನವರಿಂದ ರೇಖಾಚಿತ್ರಗಳ ಮತ್ತು ವರ್ಣಚಿತ್ರಗಳ ರಚನೆ ಆಗಿವೆ. ಮುಂದುವರೆದ ವರ್ಣಚಿತ್ರಕಲೆ ಧಾರ್ಮಿಕ, ಸಾಮಾಜಿಕ ಮತ್ತು ರಾಜಾಶ್ರಯವನ್ನು ಪಡೆದು ಅಗ್ರಗಣ್ಯ ಮಾಧ್ಯಮವಾಗಿ ಮೇಳೈಸಿರುವುದನ್ನು ಈ ಹಿಂದಿನ ಚರಿತ್ರೆಯ ದಾಖಲೆಗಳು ಹೇಳುತ್ತವೆ. ನಂತರದ ದಿನಗಳಲ್ಲಿ ಅದು ಅಂತರಂಗ ಮತ್ತು ಬಹಿರಂಗದ ಸ್ವರೂಪವನ್ನು ತನ್ನಿಂದ ತಾನಾಗಿಯೇ ಕಾಲಾನುಕ್ರಮವಾಗಿ ಬದಲಾವಣೆಯಾಗುತ್ತ ಕಲೆ ಎಂದರೇನು? ಎಂಬ ಪ್ರಶ್ನೆಯನ್ನು ಹುಟ್ಟು ಹಾಕಿದ್ದಲ್ಲದೇ ಯಾವುದೇ ಬಗೆಯ ಸ್ಪಂದನೆಯನ್ನು ನೀಡಿಲ್ಲವೆಂಬುದಕ್ಕೆ ಇಂದಿನ ಕಲಾಸೃಷ್ಟಿಗಳೇ ಕಾರಣ.

ಚಿತ್ರ ಒಂದು ದೇಶಬದ್ಧ ಕಲೆ ಎಂದೂ ಗುರುತಿಸಲಾಗುತ್ತದೆ. ಅದರಂತೆಯೇ ಸಂಗೀತ ನಾಟಕಗಳನ್ನು ಕಾಲಬದ್ಧ ಎಂದೂ ಗುರುತಿಸುತ್ತೇವೆ. ಚಲನರಹಿತವಾದ ಚಿತ್ರ ಕಾಲಬದ್ಧ ಕಲೆಗಿಂತ ಪ್ರಭಾವಿ ಎಂಬುದನ್ನು ಪ್ರಪಂಚದಲ್ಲಿನ ಪ್ರಮುಖ ಚಿತ್ರ ನೆಲೆಗಳನ್ನು ಆಧರಿಸಿ ಹೇಳಬಹುದಾಗಿದೆ. ಗ್ರೀಕ್ ಕವಿ ಪ್ಲೂಟಾರ್ಕ್ ಅದಕ್ಕೆಂದೇ ಚಿತ್ರವನ್ನು "ನಿಶಬ್ದವಾದ ಕವಿತೆ" ಎಂದು ವರ್ಣಿಸುತ್ತಾನೆ. ಒಂದು ಚಿತ್ರ ಒಬ್ಬೊಬ್ಬ ನೋಡುಗನಿಗೆ ವೈವಿಧ್ಯಮಯ ಅನುಭವವನ್ನು ನೀಡಬಹುದಾದ ಸಾಧ್ಯತೆಗಳೇ ಹೆಚ್ಚು. ಅದರಲ್ಲೂ ಇತ್ತೀಚಿಗೆ ಆಧುನಿಕ ಚಿತ್ರಗಳ ಒಲವು ವಿಭಿನ್ನ ಅನುಭವಗಳನ್ನು ನೀಡುವಲ್ಲಿ ಮುಂಚೂಣಿಯಲ್ಲಿವೆ ಎಂಬುವುದನ್ನು ಹೇಳುವುದಕ್ಕಿಂತ ಮುಂಚೆ ಪಿಕಾಸೋವಿನ ಒಂದು ಮಾತು ಪರಿಶಿಲನಾರ್ಹವಾಗುತ್ತದೆ. "ಒಂದು ಕಲಾಕೃತಿ ತನ್ನ ವರ್ತಮಾನದಲ್ಲಿ ಸಂಪೂರ್ಣವಾಗಿ ಜೀವಿಸದೇ ಅಪ್ರಸ್ತುತವಾದಲ್ಲಿ ಅದನ್ನು ಗಮನಿಸಲೇಬಾರದು".[೧] ಆಧುನಿಕ ಕಲಾಕೃತಿಗಳ ಭರಾಟೆಯ ಭರದಲ್ಲಿ ಎಷ್ಟೋ ಕಲಾಕೃತಿಗಳು ಪಿಕೋಸೋವಿನ ಸಂದೇಶವನ್ನು ಮುಟ್ಟದೇ ಇರಬಹುದು. ಆದರೆ ಹಿರೇಗೌಡರ ಕಲಾಕೃತಿಗಳು ಪಿಕೋಸವಿನ ಸಂದೇಶವನ್ನು ಸಮರ್ಥವಾಗಿ ಈಡೇರಿಸುತ್ತವೆ.

೦೧. ಕೆ.ವಿ.ಸುಬ್ರಮಣ್ಯಂ : ಕಲಾಸಂವೇದನೆಯ ಒಳನೋಟಗಳು, ಪುಟ ೧೪

ನಮ್ಮ ಪ್ರಾಚೀನ ಚಿತ್ರಕಲೆಯ ಸ್ವರೂಪ ಇಂದು ಇಲ್ಲದಿದ್ದರೂ ಸಾಂಪ್ರದಾಯಿಕ ಸಂದರ್ಭದಲ್ಲಿ ಪ್ರಾಚೀನ ಕಲಾ ಶೈಲಿಯನ್ನು ಇಂದಿನ ಆಧುನಿಕ ಸಂದರ್ಭದಲ್ಲಿಯೂ ಆಗಾಗ ಪುನರಾವರ್ತಿಸಿಕೊಳ್ಳುತ್ತೇವೆ. ನಮ್ಮ ನಡುವಿನ ಆಧುನಿಕೋತ್ತರ ಕಲಾ ಚಳುವಳಿಯಲ್ಲಿ ಪ್ರಕಟಗೊಳ್ಳುತ್ತಿರುವ ಚಿತ್ರಗಳಲ್ಲಿ ಪ್ರಾಚೀನ ಎನ್ನುವಂತಹ ಸಾಂಪ್ರದಾಯಿಕ ರೂಪಾಂಶಗಳು ವಿಕೃತತೆಯ ರೂಪದಲ್ಲಿ ಆಧುನಿಕ ಸಂವೇದನೆಗಳನ್ನು ಹೊತ್ತು ಬರುತ್ತಿರುವುದನ್ನು ಪ್ರಸ್ತುತ ಸಂದರ್ಭದಲ್ಲಿ ಕಾಣಬಹುದಾಗಿದೆ. ಇನ್ನೂ ಸರಳವಾಗಿ ಅರ್ಥೈಸಬೇಕೆಂದರೆ ಅತ್ಯಂತ ಪ್ರಾಚೀನ ಎನ್ನಬಹುದಾದ ಪ್ರಾಗಿತಿಹಾಸದ ಚಿತ್ರಕಲೆಯ ಕೆಲವು ರೂಪಾಂಶಗಳು ಇಂದಿನ ಆಧುನಿಕ ಕಲಾಕೃತಿಗಳಲ್ಲಿ ಕಂಡುಬರುತ್ತವೆ. ಇನ್ನೊಂದು ಉದಾಹರಣೆ ಎಂದರೆ ಗ್ರಾಮೀಣ ಪರಿಸರದ ಜನಪದ ಕಲೆಗಳ ಕೆಲವು ರೂಪಾಂಶಗಳು ಕೂಡ ಇಂದಿನ ಆಧುನಿಕ ಕಲೆಯಲ್ಲಿ ಕಾಣಬರುವುದರ ಹಿಂದೆ ಕಾಲದ ಪುನರಾವರ್ತನೆ ಅಥವಾ ಕಲೆಯ ಪುನರಾವರ್ತನೆ ನಿರಂತರವಾಗಿ ನಡೆದಿದೆ ಎನ್ನಬಹುದು. ಸಾಂದರ್ಭಿಕವಾಗಿರುವ ಈ ವಿಷಯದ ಚರ್ಚೆಯನ್ನು ಇಲ್ಲಿಗೇ ವಿರಾಮಗೊಳಿಸಿ, ಹಿರೇಗೌಡರು ರಚಿಸಿದ ವರ್ಣಚಿತ್ರಗಳನ್ನು ವಿಮರ್ಶಾತ್ಮಕ ನೆಲೆಯಲ್ಲಿ ಅಧ್ಯಯನ ಮಾಡುವ ನಿಟ್ಟಿನಲ್ಲಿ ಈ ಮಹಾಪ್ರಬಂಧ ರೂಪುಗೊಳ್ಳುತ್ತಿದೆ.

ಹಿರೇಗೌಡರು ಒಬ್ಬ ಆಡಳಿತಗಾರರಾಗಿ, ಕಲಾಶಿಕ್ಷಕರಾಗಿ ಮತ್ತು ಕಲಾವಿದರಾಗಿ ನಮ್ಮ ನಡುವೆ ಇದ್ದು ಅನೇಕ ರೇಖಾಚಿತ್ರ, ವರ್ಣಚಿತ್ರಗಳನ್ನು ರಚಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಅಂತರ್ಮುಖಿಯಾಗಿರುವ ಹಿರೇಗೌಡರ ಸೃಜನಶೀಲ ಪ್ರಜ್ಞೆಯನ್ನು ಅಧ್ಯಯನದ ಮುಖಾಂತರ ಬಹಿರ್ಮುಖಗೊಳಿಸುವ ಒಂದು ಗಂಭೀರ ಪ್ರಯತ್ನ ಈ ಮಹಾಪ್ರಬಂಧದಲ್ಲಿ ಅಡಗಿದೆ. ಅವರು ರಚಿಸಿರುವ ಹಲವು ಸಂಖ್ಯೆಗಳ ವರ್ಣಕಲಾಕೃತಿಗಳಲ್ಲಿ ಅಧ್ಯಯನದ ವ್ಯಾಪ್ತಿಗೆ ಪೂರಕವಾಗಿ ಆಯ್ದ ಕಲಾಕೃತಿಗಳನ್ನು ಈ ಕೆಳಗಿನಂತೆ ವರ್ಗೀಕರಿಸಿಕೊಂಡು ಅಧ್ಯಯನ ಮಾಡಲಾಗಿದೆ.

**ವರ್ಗೀಕರಣ**

೧. **ಭಾವಚಿತ್ರ** (ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ)

೧:೧. ಜಲವರ್ಣ ೧:೨. ತೈಲವರ್ಣ

೨. **ಪೂರ್ಣಭಾವಚಿತ್ರಗಳು** (ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ)

೨:೧. ಜಲವರ್ಣ ೨:೨. ತೈಲವರ್ಣ

೩. **ಪ್ರಕೃತಿ ಚಿತ್ರಗಳು**

೩:೧. ಜಲವರ್ಣ ೩:೨. ಅಕ್ರಿಲಿಕ್ ವರ್ಣ

೩:೩. ತೈಲವರ್ಣ ೩:೪. ಮಿಶ್ರ ಮಾಧ್ಯಮ

೪. **ಶಿಲ್ಪವರ್ಣಚಿತ್ರಗಳು**

೪:೧. ಜಲವರ್ಣ ೪:೨. ಇಂಕ್ ೪:೩. ತೈಲವರ್ಣ

೫. **ಆಧುನಿಕ ನೆಲೆಯ ವರ್ಣಚಿತ್ರಗಳು**

೫:೧. ಅಕ್ರಿಲಿಕ್ ವರ್ಣ

೫:೨. ಇಂಕ್

೫:೩. ತೈಲವರ್ಣ (ಆಧುನಿಕ, ನೈಜ, ಧಾರ್ಮಿಕ ಚಿತ್ರಗಳು)

೫:೪. ಡ್ರೈ ಪೇಸ್ಟಲ್

೫:೫. ಮಿಶ್ರ ಮಾಧ್ಯಮ

ಹೀಗೆ ಈ ಮೇಲಿನ ವರ್ಗೀಕರಣದನ್ವಯ ಹಿರೇಗೌಡರ ವರ್ಣ ಕಲಾಕೃತಿಗಳನ್ನು ಅಧ್ಯಯನ ಮಾಡುವುದರ ಜೊತೆಗೆ ಅವರ ಸೃಜನಶೀಲ ಮನಸ್ಸು ದೃಶ್ಯಾತ್ಮಕವಾಗಿ ಪ್ರಕಟಗೊಂಡ ಸ್ವರೂಪದ ಕುರಿತು ಇಲ್ಲಿ ಚರ್ಚಿಸಲಾಗುವುದು.

********

೧. **ಭಾವಚಿತ್ರಗಳು** (ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ)

ಫೋಟೋಗ್ರಫಿಯ ಅನ್ವೇಷಣೆಗಿಂತ ಮೊದಲಿಗೆ ಭಾವಚಿತ್ರಗಳು ಹೆಚ್ಚು ರೂಢಿಯಲ್ಲಿದ್ದವು. ರಾಜಮಹಾರಾಜರ, ರಾಣಿಯರ, ಸೈನ್ಯಾಧಿಕಾರಿಗಳ, ಅಧಿಕಾರಿಗಳ ಈ ಮುಂತಾದ ಸಮಾಜದ ಉನ್ನತ ವರ್ಗದವರು ಮಾತ್ರ ಹಣ ತೆತ್ತು ತಮ್ಮ ಭಾವಚಿತ್ರವನ್ನು, ಕಲಾವಿದರಿಂದ ಬರೆಸಿಕೊಳ್ಳುತ್ತಿದ್ದರು. ರೆನಾಯಸಾನ್ಸ್ ಕಾಲದಲ್ಲಿ ಯುರೋಪ್ ಹಾಗೂ ಅಮೇರಿಕಾ ದೇಶಗಳಲ್ಲಿ ಈ ಪ್ರಕಾರ ರೂಢಿಗೆ ಬಂದಿತು. ಭಾವಚಿತ್ರ ವ್ಯಕ್ತಿಯ (Model) ತದ್ರೂಪ ಚಿತ್ರಣಕ್ಕೆ ಸಹಾಯಕವಾಯಿತು. ಇದೇ ಕಾಲದಲ್ಲೇ ಬಳಕೆಗೆ ಬಂದುದು ತೈಲ ಮಾಧ್ಯಮ. ಕಲಾವಿದನು ಇತರರ ಭಾವಚಿತ್ರಗಳನ್ನು ಸಾಮಾನ್ಯವಾಗಿ ಹೆಚ್ಚು ತಾಂತ್ರಿಕ ಪರಿಣಿತಿಯಿಂದ ಚಿತ್ರಿಸಿದ. ಆತನ ಕುಂಚದ ಬೀಸುಗಳು ಸಾಮಾನ್ಯವಾಗಿ ಒಂದಕ್ಕೊಂದು ಕೂಡಿಕೊಂಡಂತೆ ಆಗಿರುತ್ತಿತ್ತು. ಪೋಪರ (Pope) ಮೊನಾಲಿಸಾಳ ಹಾಗೂ ನೆಪೋಲಿಯನ್ನನ ಭಾವಚಿತ್ರಗಳು ಇದಕ್ಕೆ ಉದಾಹರಣೆ. ಕ್ರಮೇಣ ಕಲಾವಿದರು ತಮ್ಮ ಚಿತ್ರಗಳನ್ನೇ (Self Portrait) ರಚಿಸಿಕೊಂಡರು. ರಂಬ್ರಾಂಟ್, ವೆಲಾಸ್ಕ (Velazquez) ವ್ಯಾನ್‌ಗೋಗ್, ಗಾಗಿನ್, ಬೆಕ್ ಮನ್, ಡ್ಯೂರರ್ ಇವರೇ ಪ್ರಸಿದ್ಧ ಸ್ವ ಭಾವಚಿತ್ರ ಕಲಾವಿದರು. ಕಲಾವಿದರು ತಮ್ಮ ನೆಂಟರಿಷ್ಟರನ್ನು ಅನೇಕ ಬಾರಿ ಚಿತ್ರಿಸಿದ್ದುಂಟು. ಇಂಪ್ರೆಷಿನಿಸಂ ಕಾಲದಲ್ಲಿ ಹಿಂದೆಂದೂ ಆಗಿರದಷ್ಟು ವಿಪುಲವಾಗಿ ಸ್ನೇಹಿತರ, ಸಹಕಲಾವಿದರ/ಕಲಾವಿದೆಯರ, ಸ್ನೇಹಿತರ ಪತ್ನಿ-ಮಕ್ಕಳ ಭಾವಚಿತ್ರಗಳು ಮೂಡಿಬಂದವು. ಡೆಗಾಸನು ತನ್ನ ಅಕ್ಕ-ಭಾವ, ಅವರ ಮಕ್ಕಳ ಚಿತ್ರ ರಚಿಸಿದರೆ, ಮಾನೆಟ್ (Monet) ತನ್ನ ಸಾಹಿತಿ-ಸ್ನೇಹಿತ ಎಮಿಲಿ ಜೋಲನ ಭಾವಚಿತ್ರ ರಚಿಸಿದ.[೧]

೧೯ನೆಯ ಶತಮಾನದ ನಂತರ ಮೂಡಿದ ಭಾವಚಿತ್ರಗಳು ಯಾವ ವ್ಯಕ್ತಿಯ ಚಿತ್ರ ಎಂದಷ್ಟೇ ಹೇಳದೆ, ಚಿತ್ರಣದ ಶೈಲಿಯಲ್ಲಿಯೇ-ರೀತಿಯಲ್ಲಿಯೇ, ಯಾವ ಕಲಾವಿದನ ಶೈಲಿಯಿದು ಎಂದೂ

೧೦. ಎನ್. ಮರಿಶಾಮಾಚಾರ್(ಸಂ) : ಕಲಾಕೋಶ, ೨೩೫

ಸೂಚಿಸುತ್ತದೆ. ವ್ಯಾನ್‌ಗಾಗ್‌ನ ಡಾ.ಗೆಚೆಟ್(Gachet), ಟಾಂಗ್ವೆ (Tanguey) ಆಸ್ಕರ್ ಕೊಕೋಶ್ಕನ(Kokkasehka)ನ ಕೆಲವು ಭಾವಚಿತ್ರಗಳು ಇದಕ್ಕೆ ಉತ್ತಮ ಉದಾಹರಣೆ.

ಆದರೆ ಒಮ್ಮೊಮ್ಮೆ ಭಾವಚಿತ್ರವು ಯಾವ ವ್ಯಕ್ತಿಯನ್ನು ಕುರಿತದ್ದು ಎಂದೂ ಹೇಳಲಾಗದು. ಆದರೆ ಕಲಾವಿದ ಯಾರು ಎಂದು ಕೂಡಲೇ ಹೇಳಿಬಿಡಬಹುದು. ಪಿಕಾಸೋನ ಕಾನ್‌ವೇಲರ್ ಭಾವಚಿತ್ರ (Kahnweiler) ಪಿಕಾಸೋನದೇ ಎಂದು ಚಿತ್ರಣ ರೀತಿಯಿಂದ ಹೇಳಿಬಿಡಬಹುದು. ಆದರೆ ಆ ಚಿತ್ರದಲ್ಲಿರುವ ವ್ಯಕ್ತಿಯ ಚಹರೆಯೇ ಅಸ್ಪಷ್ಟ ಆಕಾರ ಹೊಂದಿದೆ.

ಹೀಗೆ ಭಾವಚಿತ್ರ ಪ್ರಕಾರಗಳು ಶೈಲಿಯುಕ್ತವಾಗಿ ಅತಿ ಭಿನ್ನವಾಗುತ್ತ ಸಾಗಲು-ಹಲವು ಕಾರಣಗಳಿವೆ. ಆದರೆ ಇವುಗಳಲ್ಲೆಲ್ಲಾ ಅತ್ಯಂತ ಮುಖ್ಯಕಾರಣವೆಂದರೆ: ಫೋಟೋಗ್ರಫಿಯ ಅನ್ವೇಷಣೆ. ಮೊದಲು ಹಣವಂತರು ಮಾತ್ರ ತಮ್ಮ ಚಿತ್ರಗಳನ್ನು ಬರೆಯಿಸಿಕೊಳ್ಳುತ್ತಿದ್ದರೆ, ಫೋಟೋಗ್ರಫಿ ಬಂದ ನಂತರ ಸಾಮಾನ್ಯರೂ ಸಹ ಎಲ್ಲರೂ ತಮ್ಮ ಚಿತ್ರ ತೆಗೆಯಿಸಿಕೊಳ್ಳುವಂತಾದರು. ಹಾಗೆಯೇ ಅದಕ್ಕೆ ವೆಚ್ಚವೂ ಅತಿ ಕಡಿಮೆಯಾಗುತ್ತ ಹೋಯಿತು.

ಭಾರತದಲ್ಲಿ ಪಿ.ಸಿ.ಸನ್ಯಾಲ್, ರವೀಂದ್ರನಾಥ ಟ್ಯಾಗೋರ್, ಕೆ.ಕೆ.ಹೆಬ್ಬಾರ್, ಕೆ.ಬಿ.ಕುಲಕರ್ಣಿ, ಬಿ.ಕೆ.ಹುಬ್ಳಿ, ಪಿ.ಟಿ.ರೆಡ್ಡಿ ಮುಂತಾದ ಕೆಲವೇ ಮಂದಿ ಭಾವಚಿತ್ರ ರಚನಾಕಾರರಿದ್ದಾರೆ. ಭಾವಚಿತ್ರ ರೆನಾಯಸಾನ್ಸ್ ಕಾಲದಲ್ಲಿ ಪ್ರಾರಂಭಗೊಂಡಾಗ (Profile)(ಪಕ್ಕಕ್ಕೆ ತಿರುಗಿಸಿದ ಮುಖ) ಭಾವಚಿತ್ರಗಳು, ಅದರಲ್ಲೂ ಹೆಂಗಸರ ಚಿತ್ರಗಳು ವಿಪುಲವಾಗಿದ್ದವು. Simonetta Vespucci ಎಂಬಾಕೆಯ ಚಿತ್ರ Piero di cosimo ಒಂದು ಉತ್ತಮ ಉದಾಹರಣೆ. ನಂತರ ಮುಂದೆ ನಮ್ಮನ್ನೇ ನೋಡುವ ಭಾವಚಿತ್ರಗಳು ರೂಢಿಗೆ ಬಂದವು. (ರಾಫೆಲ್ಲನ Angello Doni ಒಂದು ಉದಾಹರಣೆ) ಸ್ವಲ್ಪ ಪಕ್ಕಕ್ಕೆ ತಿರುಗಿದ ಭಾವಚಿತ್ರಗಳು ಇದ್ದವು. ಲಿಯೋನಾರ್ಡೋ ಡಾ ವಿಂಚಿಯ Young woman with an ermine ಒಂದು ಉದಾಹರಣೆ. ೧೫ನೆಯ ಶತಮಾನದಲ್ಲಿ ಮುಖವನ್ನು ಮಾತ್ರ ಭಾವಚಿತ್ರವೆಂದು ಚಿತ್ರಿಸಿದರೆ, ೧೬ ನೇ. ಶತಮಾನದಲ್ಲಿ ಇಡೀ ದೇಹವನ್ನು ಭಾವಚಿತ್ರವೆಂದು ಚಿತ್ರಿಸಿದರು. Bernhard Strigen (೧೪೬೦-೧೫೨೮) ಮೊದಲು ಹೀಗೆ ಚಿತ್ರಿಸಿದ ಕಲಾವಿದ.[೨]

ಭಾವಚಿತ್ರ ಇಂದು ಅಕಾಡೆಮಿಕ್ ಸಂದರ್ಭದಲ್ಲಿ ಪಠ್ಯದ ಮುಖ್ಯ ವಿಷಯವಾಗಿ ಪ್ರಚಲಿತದಲ್ಲಿದೆ. ಹಿರೇಗೌಡರು ಅಕಾಡೆಮಿಕ್ ನೆರಳಲ್ಲೇ ಬೆಳೆದಿರುವುದರಿಂದ ಭಾವಚಿತ್ರ ರಚನೆಯಲ್ಲಿ ಸಾಕಷ್ಟು ಪರಿಣಿತಿಯನ್ನು ಸಾಧಿಸಿದ್ದಾರೆ. ಇವರಂತೆ ಕರ್ನಾಟಕದ ಜೆ.ಎಸ್.ಖಂಡೇರಾವ್, ವಿಜಯ್ ಸಿಂಧೂರ, ಎಂ.ಬಿ.ಪಾಟೀಲ್, ದಿವಂಗತ ಎಂ.ಎ.ಚೆಟ್ಟಿ ಇನ್ನೂ ಮುಂತಾದವರನ್ನೂ ಕೂಡಾ ಗುರುತಿಸಲಾಗುತ್ತದೆ.

ಸ್ವಾತಂತ್ರ್ಯೋತ್ತರದ ಆದಿಯಲ್ಲಿ ಒಂದೆರಡು ದಶಕಗಳ ಅವಧಿಯಲ್ಲಿ ಭಾವಚಿತ್ರವನ್ನು ಗಂಭೀರ ಕಲಾಪ್ರಕಾರ ಎಂದು ಗುರುತಿಸಲಾಗಿತ್ತು. ಇಷ್ಟೇ ಅಲ್ಲದೇ ಮೈಸೂರಿನ ದಸರಾ ಕಲಾಪ್ರದರ್ಶನ, ಅಕಾಡೆಮಿಗಳ ಕಲಾಪ್ರದರ್ಶನಗಳಲ್ಲಿಯೂ ಭಾವಚಿತ್ರಕ್ಕೆ ಹೆಚ್ಚಿನ ಪ್ರಾಧಾನ್ಯತೆಯನ್ನು ನೀಡಲಾಗಿತ್ತು.

೦೨. ಎನ್. ಮರಿಶಾಮಾಚಾರ್(ಸಂ) : ಕಲಾಕೋಶ, ೨೩೫

ಆದರೆ ಇಂದಿನ ಸಮಕಾಲೀನ ಸಂದರ್ಭದಲ್ಲಿ ಭಾವಚಿತ್ರವನ್ನು ಜೊತೆಗೆ ಪ್ರಕೃತಿ ಚಿತ್ರ, ಸ್ಥಿರ ಚಿತ್ರಗಳನ್ನು ಗಂಭೀರ ಕಲಾಪ್ರಕಾರವೆಂದು ಗುರುತಿಸುತ್ತಿಲ್ಲ. ಇದಕ್ಕೆ ಕಾರಣಗಳು ಇಲ್ಲವೆಂದಲ್ಲ. ಮೇಲಿನ ಮೂರು ಪ್ರಕಾರಗಳು ವ್ಯಕ್ತಿಯನ್ನು ಅಥವಾ ವಸ್ತುವೊಂದನ್ನು ನೇರವಾಗಿ ಅನುಕರಿಸುವುದರಿಂದ ಸೃಜನಶೀಲತೆ ಭಾಗಶಃ ಗೌಣವಾಗುತ್ತದೆ. ಪ್ರಸ್ತುತ ಸಂದರ್ಭದಲ್ಲಿ ಸೃಜನಶೀಲ ಸಂಯೋಜನೆಯಂತಹ ಕಲಾಕೃತಿಗಳಿಗೆ ಹೆಚ್ಚಿನ ಪ್ರಾಧಾನ್ಯತೆಯನ್ನು ರಾಷ್ಟ್ರೀಯ ಹಾಗೂ ಅಂತರಾಷ್ಟ್ರೀಯ ಮಟ್ಟದ ಕಲಾಪ್ರದರ್ಶನಗಳಲ್ಲಿ ನೀಡಿದ್ದನ್ನು ನಾವು ನೋಡುತ್ತಿದ್ದೇವೆ.೧

ಹಿರೇಗೌಡರು ಆಹ್ವಾನಿತ ಗೌರವ ಶಿಕ್ಷಕರಾಗಿ ಅನೇಕ ಕಲಾಶಾಲೆಗಳಲ್ಲಿ ಹಲವಾರು ಭಾವಚಿತ್ರ, ಸಂಯೋಜನಾ ಚಿತ್ರಗಳ ಪ್ರಾತ್ಯಕ್ಷಿಕೆಯನ್ನು ನೀಡಿದ್ದಾರೆ. ದಾವಣಗೆರೆ ಕಲಾಶಾಲೆಯಲ್ಲೂ ಕೂಡ ತಮ್ಮ ಶಿಷ್ಯವೃಂದಕ್ಕೆ ಭಾವಚಿತ್ರಗಳ ಪ್ರಾತ್ಯಕ್ಷಿಕೆಯನ್ನು ನೀಡಿದ್ದಾರಲ್ಲದೇ, ಬಿಡುವಿನ ವೇಳೆಯಲ್ಲೂ ಸಹ ತಮ್ಮ ಸ್ವ ಆಸಕ್ತಿಗೆ ಪೂರಕವಾಗಿ ಕೆಲವು ಭಾವಚಿತ್ರಗಳನ್ನು ರಚಿಸಿದ್ದಾರೆ. ಅನುಕರಣಾ ನೆಲೆಯ ಇಂತಹ ಭಾವಚಿತ್ರಗಳ ರಚನೆಯ ಮೂಲಕ ಹಿರೇಗೌಡರು ತಮ್ಮ ಸೃಜನಶೀಲಕ್ರಿಯೆಗೆ ಹೇಗೆ ದುಡಿಸಿಕೊಂಡಿದ್ದಾರೆ ಎಂಬುದು ಒಂದಾದರೆ, ಇನ್ನೊಂದು ರಾಜ್ಯದ ಇತರ ಕಲಾವಿದರಿಗಿಂತ ಹಿರೇಗೌಡರು ಭಾವಚಿತ್ರ ರಚನೆಯಲ್ಲಿ ಹೇಗೆ ಭಿನ್ನವಾಗಿ ಗೋಚರವಾಗುತ್ತಾರೆ ಎಂಬುದನ್ನು ಇಲ್ಲಿನ ಅಧ್ಯಯನದಲ್ಲಿ ಕಂಡುಕೊಳ್ಳುವ ಪ್ರಯತ್ನವನ್ನು ಮಾಡಲಾಗಿದೆ. ಈ ಹಿಂದೆ ಹೇಳಿದಂತೆ ಹಿರೇಗೌಡರು ಹೆಚ್ಚು ಸಂಖ್ಯೆಯಲ್ಲಿ ಭಾವಚಿತ್ರಗಳನ್ನು ರಚಿಸಿದ್ದು, ಅವುಗಳಲ್ಲಿ ಆಯ್ದ ಕೆಲವು ಭಾವಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**ಭಾಗ ೧. ಭಾವಚಿತ್ರಗಳು** (೧:೧. ಜಲವರ್ಣ)ಶೈಕ್ಷಣಿಕ

ಜಲವರ್ಣಕ್ಕೆ ಬಹು ಪೂರ್ವದಿಂದಲೂ ವರ್ಷಗಳ ಇತಿಹಾಸವಿದೆ. ವರ್ಣ ಮಾಧ್ಯಮಗಳಲ್ಲಿ ಮೊದಲು ಜನ್ಮ ತಾಳಿದ್ದು ಜಲವರ್ಣ. ಅದನ್ನು ಅತ್ಯಂತ ವೈಜ್ಞಾನಿಕವಾಗಿ ದುಡಿಸಿಕೊಂಡಿದ್ದನ್ನು ಬಾದಾಮಿ ಅಜಂತಾ ಮತ್ತು ಎಲ್ಲೋರಾ ಚಿತ್ರಗಳಲ್ಲಿ ಕಾಣಬಹುದಾಗಿದೆ. ಈ ಮಾಧ್ಯಮವು ಪಾರದರ್ಶಕವಾಗಿಯೂ, ಅಪಾರದರ್ಶಕವಾಗಿಯೂ ದುಡಿಸಿಕೊಳ್ಳುವ ತಂತ್ರವನ್ನು ಹೊಂದಿದೆ. ಹಿರೇಗೌಡರು ಈ ಎರಡೂ ತಂತ್ರಗಳಿಂದ ರಚಿಸಿದ ಆಯ್ದ ಭಾವಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

೧. **ಭಾವಚಿತ್ರ,** (೧೯೭೧)

ವಿದ್ಯಾರ್ಥಿಗಳಿಗೆ ಪ್ರಾತ್ಯಕ್ಷಿಕೆ ನೀಡಿದ ಸಂದರ್ಭದಲ್ಲಿ ರಚಿಸಿದ, ಪಾರದರ್ಶಕ ತಂತ್ರದಿಂದ ಕೂಡಿದ ಭಾವಚಿತ್ರ ಇದಾಗಿದೆ. ಸ್ತ್ರೀ ಸಹಜವಾದ ಗುಣಲಕ್ಷಣಗಳನ್ನು ಕುಂಚದ ಬೀಸುಗಳಿಂದ ಚಿತ್ರಿಸಿದ್ದರೂ ಮೃದುವಾದ ಮೈವಳಿಕೆಯ ಭಾವಸೃಷ್ಟಿ ಇಲ್ಲಿದೆ. ಕಂದು, ದಟ್ಟ ಹಳದಿ. ಅಲ್ಲಲ್ಲಿ ದಟ್ಟತೆಯನ್ನು ಸೃಷ್ಟಿಸಲು ತೆಳು ನೀಲಿ, ಹಸಿರು ವರ್ಣಗಳನ್ನು ಸ್ಪರ್ಶ ರೂಪದಲ್ಲಿ ಮಿಶ್ರಿಸಿ ಭಾವ ದಟ್ಟತೆಯನ್ನು ಸೃಷ್ಟಿಸಲು ತೆಳು ನೀಲಿ, ಹಸಿರು ವರ್ಣಗಳನ್ನು ಸ್ಪರ್ಶ ರೂಪದಲ್ಲಿ ಮಿಶ್ರಿಸಿ ಭಾವ



೧. ಭಾವಚಿತ್ರ, ೧೯೭೧



೨. ಭಾವಚಿತ್ರ, ೧೯೭೪

ಈ ಚಿತ್ರದ ವರ್ಣ ಮೇಳಗಳು ಮಸುಕಾಗದೇ ತಾಜಾತನದಿಂದ ಕೂಡಿದ್ದು ಹಿರೇಗೌಡರ ವರ್ಣ ನಿರ್ವಹಣೆಯ ಅನುಭವದ ಆಳವನ್ನು ಪ್ರಕಟಿಸುತ್ತದೆ.

**೨. ಭಾವಚಿತ್ರ, (೧೯೭೪)**

ವಯೋವೃದ್ಧನನ್ನು ಚಿಕ್ಕ ಚಿಕ್ಕ ಕುಂಚದ ಬೀಸುವಿಕೆಗಳಿಂದ ಅಲ್ಪ ವರ್ಣಗಳ ಸಾಂಗತ್ಯದಿಂದ ಚಿತ್ರಿಸಿದ ಕೃತಿ ಇದು. ಹಿಂದಿನ ಕೃತಿಯಲ್ಲಿ ಯೌವ್ವನಯುಕ್ತ ಭಾವಕ್ಕೆ ಪೂರಕವಾದ ವರ್ಣ ನಿರ್ವಹಣೆ ಕಂಡು ಬಂದರೆ, ಈ ಕೃತಿಯಲ್ಲಿ ವೃದ್ಧಾಪ್ಯದ ಗೆರೆಗಳಿಗೆ ಪೂರಕವಾದ ಕುಂಚದ ತಂತ್ರಗಾರಿಕೆ ಇಲ್ಲಿ ಸ್ಪಷ್ಟವಾಗುತ್ತದೆ. ವಯಸ್ಸಿನಲ್ಲಿ ಭಿನ್ನತೆಯನ್ನು ತೋರಿಸುವಾಗ ಅನುಸರಿಸಬಹುದಾದ ಕುಂಚ ತಂತ್ರಗಳಿಗೆ ಇದೊಂದು ಉತ್ತಮ ನಿದರ್ಶನವಾಗಬಲ್ಲ ಕಲಾಕೃತಿ ಎಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಮುಖದ ಬಲಭಾಗದಲ್ಲಿ ದಟ್ಟತೆಯ ಸಂದರ್ಭದಲ್ಲೂ ಹಿರೇಗೌಡರು ಜಲವರ್ಣವನ್ನು ಅಪಾರದರ್ಶಕವಾಗಿ ಹೇಗೆ ದುಡಿಸಿಕೊಳ್ಳಬಹುದು ಎಂಬುದಕ್ಕೆ ಇಲ್ಲಿರುವ ವರ್ಣ ನಿರ್ವಹಣೆ ಸಾಕ್ಷಿಯಾಗಿದೆ. ವೃದ್ಧನ ದಾಡಿ ಮತ್ತು ರುಮಾಲಿನಲ್ಲಿ ಕುಂಚದ ಬೀಸುವಿಕೆಗಳು ದಟ್ಟವಾಗಿದ್ದರೆ, ಮುಖದಲ್ಲಿ ಸೂಕ್ಷ್ಮ ಎನ್ನಬಹುದಾದ ದಟ್ಟ ಬೀಸುಗಳು ಭಾವಕ್ಕೆ ತ್ರಿಮಾನದ ಕಲ್ಪನೆಯನ್ನು ತಂದುಕೊಟ್ಟಿವೆ. ಎರಡೂ ಚಿತ್ರಗಳಲ್ಲಿ ಮಾನವ ಅಂಗಾಂಗ ಶಾಸ್ತ್ರದ ಅನುಸರಿಸುವಿಕೆ ಪ್ರಬುದ್ಧತೆಯಿಂದ ಕೂಡಿದೆ.

**ಉಪಸಂಹಾರ**

ಎರಡೂ ಕಲಾಕೃತಿಗಳು ವಿಭಿನ್ನ ವಯೋಮಾನಗಳಿಗೆ ಸಂಬಂಧಿಸಿದ್ದು, ಅವೆರಡರ ನಡುವಣ ರಚನಾ ತಂತ್ರದ ವ್ಯತ್ಯಾಸಗಳನ್ನು ಹಿರೇಗೌಡರು ಕಲಾಕೃತಿಯೊಂದರ ಮುಖೇನ ಸ್ಪಷ್ಟೀಕರಿಸಬಹುದಾದ ದೃಶ್ಯಾತ್ಮಕ ಉಪನ್ಯಾಸವನ್ನು ನೀಡುತ್ತಾರೆ. ಕುಂಚದ ಬೀಸುಗಳನ್ನು ಆಯಾ ವಯೋಮಾನಕ್ಕೆ ತಕ್ಕಂತೆ ದುಡಿಸಿಕೊಂಡಿರುವ ಕ್ರಮ ಅನನ್ಯವಾದುದು. ಬೇರೆ ಬೇರೆ ವಯೋಮಾನಕ್ಕೆ ತಕ್ಕಂತೆ ರಚನಾ ತಂತ್ರಗಳನ್ನು ಹೇಗೆ ವಿಭಿನ್ನವಾಗಿ ದುಡಿಸಿಕೊಳ್ಳಬಹುದೆಂಬ ದೃಶ್ಯಾತ್ಮಕ ನೀತಿ ಈ ಎರಡೂ ಚಿತ್ರಗಳಲ್ಲಿ ಪ್ರಕಟವಾಗುತ್ತದೆ. ಮಾನವ ಶರೀರ ಶಾಸ್ತ್ರದ ಪ್ರಬುದ್ಧ ಪರಿಕಲ್ಪನೆ ಪ್ರಾಯೋಗಿಕ ನೆಲೆಯಲ್ಲಿ ಅಭಿವ್ಯಕ್ತಗೊಂಡಾಗ ಅದರ ಸ್ವರೂಪದ ಕುರಿತು ಹಿರೇಗೌಡರಿಗೆ ಬಹಳ ಸ್ಪಷ್ಟವಾದ ಪರಿಕಲ್ಪನೆ ಇರುವುದು ಇಲ್ಲಿನ ಚಿತ್ರಗಳ ಅಧ್ಯಯನದಿಂದ ಕಂಡುಬರುತ್ತದೆ.

********

### ೧:೨. ಭಾವಚಿತ್ರಗಳು (ತೈಲವರ್ಣ) ಶೈಕ್ಷಣಿಕ

ತೈಲವರ್ಣ ಸುಮಾರು ೧೪ನೆಯ ಶತಮಾನದಲ್ಲಿ ಕಂಡು ಹಿಡಿಯಲ್ಪಟ್ಟ ಒಂದು ವರ್ಣ ಮಾಧ್ಯಮ. ರೋಮ್, ಇಟಲಿ, ಫ್ಲಾರೆನ್ಸ ನಗರದ ಚರ್ಚುಗಳಲ್ಲಿ ತೈಲವರ್ಣ ದುಡಿಸಿಕೊಂಡು ರಚಿಸಿದ ಅನೇಕ ಭಾವಚಿತ್ರಗಳು, ಪೂರ್ಣ ಭಾವಚಿತ್ರಗಳು ಮತ್ತು ಸಂಯೋಜನಾ ಚಿತ್ರಗಳನ್ನು ಕಾಣಬಹುದಾಗಿದೆ. ಈ ವರ್ಣ ತಿಂಗಳುಗಟ್ಟಲೇ ಒದ್ದೆಯಾಗಿರುವುದರಿಂದ ಒಂದು ಕಲಾಕೃತಿಯನ್ನು ಮತ್ತೆ ಮತ್ತೆ ತಿದ್ದಿ, ತೀಡುವುದಕ್ಕೆ ಈ ಮಾಧ್ಯಮ ತುಂಬ ಸಹಕಾರಿ. ಹಿರೇಗೌಡರು ಎರಡೂ ಮಾಧ್ಯಮಗಳಿಂದ ರಚಿಸಿದ ತೈಲವರ್ಣದ ಆಯ್ದ ಭಾವಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

#### ೧. ಭಾವಚಿತ್ರ, (೧೯೮೧)

ಯುವಕನೋರ್ವನ ಭಾವಚಿತ್ರ ಇದಾಗಿದ್ದು ಬಹುವರ್ಣಗಳನ್ನು ಬದಿಗಿರಿಸಿದ ಹಿರೇಗೌಡರು ಅಲ್ಪ ವರ್ಣಗಳ ಸಾಂಗತ್ಯದಿಂದ ಒಂದು ಉತ್ತಮ ನೆಲೆಯ ಕಲಾಕೃತಿಯೊಂದನ್ನು ಹೇಗೆ ರಚಿಸಿಬಹುದು ಎಂಬುದಕ್ಕೆ ಪ್ರಾತ್ಯಕ್ಷಿಕೆ ನೀಡಿದ ಕಲಾಕೃತಿ ಇದು. ಇಲ್ಲಿ ಎಲ್ಲೋ ಆಕರ್, ವರ್ಮಿಲಿಯನ್, ಸ್ಯಾಪ್ ಗ್ರೀನ್, ಕ್ರಿಮಸನ್ ರೆಡ್, ಕೋಬಾಲ್ಟ್ ಬ್ಲೂ, ವೈಟ್ ಇಂತಹ ವರ್ಣಗಳನ್ನು ಬಳಸಿದ್ದರೂ ಸಹ ಹೆಚ್ಚಾಗಿ ಎಲೋ ಆಕರ್ ಶ್ರೇಣಿಯ ವರ್ಣ ಈ ಭಾವಚಿತ್ರದಲ್ಲಿ ಪ್ರಮುಖವಾಗಿದೆ. ಅಲ್ಲಿಲ್ಲಿ ಡ್ರೈ ಬ್ರಶ್ ತಂತ್ರದ ಸೂಚ್ಯ ಮತ್ತು ದಟ್ಟ ನಿರ್ವಹಣೆಯೊಂದಿಗೆ ಯುವ ವ್ಯಕ್ತಿತ್ವಕ್ಕೆ ಪೂರಕವಾದ ಏಕಪ್ರಕಾರದ ಕುಂಚದ ಸದ್ಬಳಕೆಯಿಂದ ವಿಶಿಷ್ಟ ರೀತಿಯ ಬೀಸುಗಳು ವಿಭಿನ್ನ ಶ್ರೇಣಿಗಳ ಛಾಯೆಗಳೊಂದಿಗೆ ಮೂಡಿವೆ. ಅವಕಾಶದ ಒಂದು ಭಾಗದಲ್ಲಿ ಸಂಯೋಜನೆಗೊಂಡಿರುವ ರೂಪದರ್ಶಿ ದೃಷ್ಟಿ ಕೆಳ ರೇಖೆಯಲ್ಲಿದ್ದು ಅದಕ್ಕೆ ಪೂರಕವಾಗಿ ಅಂಗಾಂಗಗಳು ರಚನೆಗೊಂಡು ಮೃದು ವ್ಯಕ್ತಿತ್ವದ ಭಾವ ಇಲ್ಲಿ ಸ್ಪಷ್ಟವಾಗಿದೆ.



೧. ಭಾವಚಿತ್ರ, ೧೯೮೧



೨. ಕಲಾವಿದ ಸೋಮಶೇಖರ ಸಾಲಿಯವರ ಭಾವಚಿತ್ರ, ೧೯೮೫

೨. ಕಲಾವಿದ ಸೋಮಶೇಖರ ಸಾಲಿಯವರ ಭಾವಚಿತ್ರ, (೧೯೮೫)

ಈ ಹಿಂದಿನ ಎರಡೂ ಕಲಾಕೃತಿಗಳಿಗಿಂತ ವಿಭಿನ್ನ ಚಿಂತನೆಯ ಫಲವಾಗಿ ಮೂಡಿದ ಸಂದರ್ಭ ಸಹಿತವಾಗಿ ರೂಪುಗೊಂಡಿರುವ ಭಾವಚಿತ್ರ ಇದು. ೧೯೮೫ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯು ಮೈಸೂರಿನಲ್ಲಿ ನಡೆದ ವಿಶ್ವಕನ್ನಡ ಸಮ್ಮೇಳನದ ಸಂದರ್ಭದಲ್ಲಿ ಹಮ್ಮಿಕೊಂಡಿದ್ದ ಕಲಾಶಿಬಿರದಲ್ಲಿ ಪಾಲ್ಗೊಂಡಿದ್ದ ಹಿರೇಗೌಡರು ಆಗಿನ ಅಕಾಡೆಮಿಯ ಅಧ್ಯಕ್ಷರಾಗಿದ್ದ ಕಲಾವಿದ ಸೋಮಶೇಖರ ಸಾಲಿಯವರನ್ನು ರೂಪದರ್ಶಿಯನ್ನಾಗಿ ಬಳಸಿಕೊಂಡು ಚಿತ್ರಿಸಿದ ಭಾವಚಿತ್ರವಿದು. ಭಾವಚಿತ್ರ ರಚನೆಗೆ ಒಂದು ಅಲಿಖಿತವಾದ ಪ್ರಾಯೋಗಿಕ ಉದಾಹರಣೆಯ ನಿಯಮವೊಂದಿದ್ದು ಅದು ರೂಪದರ್ಶಿಯ ಹಿನ್ನೆಲೆಯಲ್ಲಿ ಏಕಪ್ರಕಾರವಾದ ವರ್ಣಲೇಪನವಿರಬೇಕು, ಇದರಿಂದಾಗಿ ರೂಪದರ್ಶಿಯ ಭಾವ ಸ್ಪಷ್ಟವಾಗಿ ಗೋಚರವಾಗುವ ಸಾಧ್ಯತೆಗಳು ಎಂಬುದು. ಆದರೆ ಹಿರೇಗೌಡರು ರೂಪದರ್ಶಿಗೆ ಸಮ್ಮೇಳನದ ಸಂದರ್ಭವನ್ನೇ ಹಿನ್ನೆಲೆಯಾಗಿಸಿಕೊಂಡು ಭಾವಚಿತ್ರ ರಚಿಸಿದ ಪರಿ ಅನನ್ಯವಾದುದು. ಜ್ಞಾನವೃದ್ಧರೂ, ವಯೋವೃದ್ಧರೂ ಆದ ಸೋಮಶೇಖರ ಸಾಲಿಯವರ ಭಾವಚಿತ್ರದಲ್ಲಿ ಹಿರೇಗೌಡರ ಎಂದಿನ ವರ್ಣಮೇಳ ಪುನರಾವರ್ತನೆಯಾಗಿದ್ದು, ಅವರ ಸಂಪೂರ್ಣ ಭಾವ ಚಹರೆಯನ್ನು ಸ್ಪಷ್ಟವಾಗಿ ಸೆರೆ ಹಿಡಿದಿದ್ದಾರೆ. ಅವರ ಮುಖದಲ್ಲಿನ ಚರ್ಮದ ಸುಕ್ಕುಗಳನ್ನು ಸಹ ಅತ್ಯಲ್ಪ ಕಡಿಮೆ ವರ್ಣಗಳ ಸಾಂಗತ್ಯದಿಂದ ಸೃಷ್ಟಿಸಿದ್ದು ಅದಕ್ಕೆ ಪೂರಕವಾದ ಹಿನ್ನಲೆಯನ್ನು ಸೃಷ್ಟಿಸುವತ್ತ ಒಲವು ತೋರಿಸಿದ್ದಾರೆ. ಅವಕಾಶದ ೭೫%ರಷ್ಟು ಭಾಗ ಹಿನ್ನೆಲೆಯನ್ನೇ ಆವರಿಸಿದೆ.

ಹಿನ್ನೆಲೆಯೂ ಕೂಡ ಭಾವಚಿತ್ರಕ್ಕೆ ಪೂರಕವಾಗಿ ಒಂದು ಮಹತ್ವದ ಸಂಯೋಜನಾ ಪ್ರಕಾರವಾಗಿ ಗೋಚರವಾಗುತ್ತದೆ. ಅವಕಾಶದ ಮೇಲ್ಭಾಗದ ಅರ್ಧ ವೃತ್ತದಲ್ಲಿ ಮತ್ತು ಬಲಭಾಗದಲ್ಲಿ ಕನ್ನಡದ ವರ್ಣ ಮಾಲೆಗಳನ್ನು ಸೂಚ್ಯವಾಗಿಸಿದ್ದಾರೆ. ಹಿನ್ನೆಲೆಯಲ್ಲಿ ಒಂದು ಸಾಂಸ್ಕೃತಿಕ ಸಮುಚ್ಛಯದಂತೆ ವಿನ್ಯಾಸವೊಂದನ್ನು ಸೃಷ್ಟಿಸಿ ಅದರಲ್ಲಿ ನಾಡಿನ ಕಲೆಗಳನ್ನು, ಶಿಲ್ಪಗಳನ್ನು ಕಲಾವಿದರು ಬಳಸುವ ಕಲರ್ ಪ್ಯಾಲೆಟ್‌ಗಳನ್ನು ಅತ್ಯಂತ ಅಲ್ಪ ವರ್ಣಗಳ ಸಾಂಗತ್ಯದಿಂದ ಸೂಚ್ಯವಾಗಿ ಚಿತ್ರಿಸಿದ್ದಾರೆ. ಇದರ ಮೂಲಕ ಕನ್ನಡ ನಾಡಿನ ಸಾಂಸ್ಕೃತಿಕ ಸಂಪತ್ತಿನ ವಿವರಣೆಯನ್ನು ಮತ್ತು ಕನ್ನಡ ಸಾರಸ್ವತ ಲೋಕದಲ್ಲಿ ಸೋಮಶೇಖರ ಸಾಲಿಯವರ ಘನ ವ್ಯಕ್ತಿತ್ವವನ್ನು ಬಿಂಬಿಸುವ ಹಿರೇಗೌಡರ ಆಶಯ ಒಂದು ಆಧುನಿಕ ಸಂಯೋಜನಾ ಕ್ರಮದಲ್ಲಿ ಪ್ರಕಟವಾಗಿದೆ ಎನ್ನಬಹುದು.

೩. ಭಾವಚಿತ್ರ (೧೯೮೯)

ಕಲಾಶಾಲೆಯ ವಿದ್ಯಾರ್ಥಿಗಳಿಗೆ ಭಾವಚಿತ್ರ ಪ್ರಾತ್ಯಕ್ಷಿಕೆಗಾಗಿ ವಿಶ್ವನಾಥ ಎಲಿಗಾರ ಎಂಬ ಅಲ್ಲಿನ ವಿದ್ಯಾರ್ಥಿಯನ್ನು ಬಳಸಿಕೊಂಡು ಹಿರೇಗೌಡರು ರಚಿಸಿದ ಕಲಾಕೃತಿ ಇದು. ಹಿರೇಗೌಡರ ಎಂದಿನ ವರ್ಣಮೇಳದೊಂದಿಗೆ ಒಂದು ಬಗೆಯಲ್ಲಿ ಡ್ರೈ ಬ್ರಶ್ ತಂತ್ರವನ್ನು ದುಡಿಸಿಕೊಂಡು ರಚಿಸಿದ ಕೃತಿಯಲ್ಲಿ ರೋಮ್ಯಾಂಟಿಕ್ ನೆಲೆಯ ಆಶಯ ಪ್ರಕಟವಾಗಿದೆ. ಮಿಶ್ರವೆನಿಸುವ ವರ್ಣಗಳನ್ನು ಪ್ಯಾಚ್ ರಹಿತವಾಗಿ ದುಡಿಸಿಕೊಂಡು ಆಕರ್ಷಕ ಭಾವವನ್ನು ಸೆರೆಹಿಡಿಯುವಲ್ಲಿ ಹಿರೇಗೌಡರು

ತಮ್ಮ ಅನುಭವದ ಸಾಮರ್ಥ್ಯವನ್ನು ಒರೆಗೆ ಹಚ್ಚಿದ್ದಾರೆ. ರೂಪದರ್ಶಿಯ ತಲೆಗೆ ಸುತ್ತಿರುವ ರುಮಾಲಿನಲ್ಲಿ ಒಂದು ಬಗೆಯ ನೇರವೆನಿಸುವ ಬೀಸುಗಳು, ವರ್ಣದ ತೆಳು ಮತ್ತು ದಟ್ಟ ಛಾಯೆಗಳಿಂದ ಆವೃತ್ತವಾಗಿವೆ. ಹಾಗೆಯೇ ಶರ್ಟ್‌ನಲ್ಲಿಯೂ ಸಹ ವರ್ಣಗಳ ಮಿಶ್ರಣವು ಮೃದುವಾದ ಲೇಪನದ ಅನುಭವ ನೀಡುತ್ತದೆ. ಕೊರಳಲ್ಲಿ ಬಾರುಕೋಲಿನ ವಿನ್ಯಾಸವನ್ನು ಅತ್ಯಂತ ನೈಜ ನೆಲೆಯಲ್ಲಿ ಚಿತ್ರಿಸಿದ್ದಾರೆ. ಮುಖದಲ್ಲಿ ಸಮ್ಮಿಶ್ರವೆನಿಸುವ ವರ್ಣಗಳು ಯುವಕನಲ್ಲಿ ಅಡಗಿರುವ ಯೌವ್ವನದ ಛಾಯೆಯನ್ನು ಪ್ರಕಟಿಸುವಲ್ಲಿ, ಮುಖದ ಉಬ್ಬು ತಗ್ಗುಗಳನ್ನು ತೋರ್ಪಡಿಸಲು ಅಲ್ಲಲ್ಲಿ ಬೆಳಕಿನ ಛಾಯೆಗಳ ಸ್ಪರ್ಶ ತ್ರಿಮಾನದ ಕಲ್ಪನೆಯ ಭಾವ ನೀಡುವಲ್ಲಿ ಪೂರಕವಾಗಿದೆ. ಹಿನ್ನೆಲೆಯಲ್ಲಿ ಕಿಡಕಿ ವಿನ್ಯಾಸ ಮಸುಕಾಗಿ ಗೋಚರವಾಗುತ್ತಿದ್ದು, ಮುಖದಲ್ಲಿನ ವರ್ಣ ಮೇಳವನ್ನೇ ಹಿನ್ನೆಲೆಗೆ ದುಡಿಸಿಕೊಂಡ ಕ್ರಮ ಇಲ್ಲಿದೆ.

**೪. ಭಾವಚಿತ್ರ** (೧೯೯೩)

ಇತರ ಚಿತ್ರಗಳಿಗಿಂತ ಸಂಯೋಜನೆಯಲ್ಲಿ, ವರ್ಣ ಮೇಳದಲ್ಲಿ ತುಸು ವಿಭಿನ್ನವೆನಿಸುವ ಕಲಾಕೃತಿ ಇದು. ಅವಕಾಶದ ಕೆಳಭಾಗದಲ್ಲಿ ಚೌಕಟ್ಟಿನ ರಚನೆ ಅದರ ಮೇಲೆ ಬಾಸ್ ಎಂಬ ಆಂಗ್ಲ ಬರವಣಿಗೆ ಇವುಗಳನ್ನು ಹೊರಹಾಕಿ ಒಳಭಾಗದಲ್ಲಿ ರೂಪದರ್ಶಿಯ ರಚನೆ ಇಲ್ಲಿದೆ. ಈ ಚಿತ್ರದಲ್ಲಿ ರೂಪದರ್ಶಿಯ ಭಾವಕ್ಕೆ ಜೀವಕಳೆ ತರುವಲ್ಲಿ ಅಗತ್ಯವೆನಿಸುವ ವರ್ಣಗಳು ಅರ್ಧ ಸಮ್ಮಿಶ್ರಣದ ನೆಲೆಯಲ್ಲಿ, ಇನ್ನರ್ಧ ಬೀಸುಗಳ ನೆಲೆಯಲ್ಲಿ ಸಂರಚನೆಗೊಂಡಿದೆ. ಮುಖದಲ್ಲಿ ಚರ್ಮರಚನೆಗೆ ದುಡಿಸಿಕೊಂಡಿರುವ ವರ್ಣಗಳು ಸಜೀವ ಕಳೆ ತರುವಲ್ಲಿ ಸೂಚ್ಯವಾಗಿ ಮೂಡಿವೆ. (ನೋಡಿ ಒಳಚೌಕದ ಆಯ್ದ ಕಣ್ಣಿನ ಭಾಗ)ಅಲ್ಲಲ್ಲಿ ಬೆಳಕಿನ ಛಾಯೆಗಳು ರೂಪದರ್ಶಿಯ ಭಾವವನ್ನು ಮೃದುತ್ವಗೊಳಿಸಿವೆ. ವಿಶೇಷವಾಗಿ ಈ ಭಾವಚಿತ್ರದಲ್ಲಿ ಯೆಲೋ ಆಕರ್ ಮತ್ತು ಸ್ಯಾಪ್ ಗ್ರೀನ ವರ್ಣಗಳು ಸಮ್ಮಿಶ್ರಣಗೊಂಡು ಮುಖ್ಯ ಪಾತ್ರವಹಿಸಿವೆ. ಹಾಗೆಯೇ ರೂಪದರ್ಶಿಯ ಉಡುಪಿನಲ್ಲಿ ಅಲ್ಪ ವರ್ಣಗಳನ್ನು ಬಳಸಿ ಕುಂಚದಿಂದ ತಿಕ್ಕಿರುವುದರಿಂದ ಮಡಿಕೆಯ ಅನುಭವ ದಕ್ಕುತ್ತದೆ. ಹಿನ್ನೆಲೆಯಲ್ಲಿ ಸಾಂಪ್ರದಾಯಿಕವಾದ ವರ್ಣಗಳು ಅಪರಿಚಿತ ಆಕೃತಿಗಳಾಗಿ ಮೂಡಿರುವುದರಿಂದ ರೂಪದರ್ಶಿಯ ಆಕೃತಿ ಮುನ್ನೆಲೆಯಲ್ಲಿ ಪ್ರಾಶಸ್ತ್ಯ ಕಂಡುಕೊಳ್ಳುತ್ತದೆ.

**೫. ಕಲಾವಿದ ಪಿ.ಆರ್.ತಿಪ್ಪೇಸ್ವಾಮಿಯವರ ಭಾವಚಿತ್ರ** (೧೯೯೩)

ಹಿರಿಯ ಕಲಾವಿದ, ಕಲಾಸಾಹಿತಿ, ವಸ್ತು ಸಂಗ್ರಹಾಲಯಗಳ ವಿನ್ಯಾಸಕ ಎಂದೇ ಪ್ರಸಿದ್ಧಿಯನ್ನು ಪಡೆದ ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದ ಪಿ.ಆರ್.ತಿಪ್ಪೇಸ್ವಾಮಿಯವರ ಭಾವಚಿತ್ರವಿದು. ರೋಮ್ಯಾಂಟಿಕ್ ನೆಲೆಯಲ್ಲಿ ರಚಿತಗೊಂಡ ಈ ಕೃತಿಯಲ್ಲಿ ನೈಜವಾದದ ನೆಲೆಯ ವರ್ಣ ತಂತ್ರ ಮತ್ತು ಮೇಳಗಳದೇ ಮೇಲುಗೈ. ಹಿರೇಗೌಡರು ರೂಪದರ್ಶಿಯ ಗುಣ ಲಕ್ಷಣಗಳ ಆಳವನ್ನು ಅತೀ ಆಸ್ಥೆಯಿಂದ ಪರಿಶೀಲಿಸಿ ಹೆಚ್ಚು ವಿವರವಾಗಿ ಚಿತ್ರಿಸಿರುವುದು ಕಂಡು ಬರುತ್ತದೆ. ರಮಣೀಯವೆನಿಸುವ ವರ್ಣಗಳು ರೂಪದರ್ಶಿಯ ಮುಖಭಾವವನ್ನು ತ್ರಿಮಾನಕ್ಕೆ ತರುವಲ್ಲಿ



೫. ಕಲಾವಿದ ಪಿ.ಆರ್.ತಿಪ್ಪೇಸ್ವಾಮಿಯವರ ಭಾವಚಿತ್ರ, ೧೯೯೩



೬. ಭಾವಚಿತ್ರ, ೧೯೯೬



೭. ಭಾವಚಿತ್ರ, ೧೯೯೬

ಉತ್ತಮ ಕುಂಚ ತಂತ್ರವನ್ನು ಹೊಂದಿವೆ. ವಿಶೇಷವಾಗಿ ರೂಪದರ್ಶಿಯ ಚಸ್ಮಾದ ಮೇಲಿನ ಬೆಳಕಿನ ಛಾಯೆಗಳು ಪ್ರತಿಫಲನಗೊಂಡು ಆಕರ್ಷಕವೆನಿಸುತ್ತವೆ. ಉಡುಪಿನಲ್ಲಿ ಕಂಡು ಬರುವ ವರ್ಣ ಲೇಪನ ಬಟ್ಟೆಯ ದಪ್ಪದ ಅನುಭವವನ್ನು ನೀಡುತ್ತದೆ. ಅದರ ಮೇಲಿನ ಅಲಂಕಾರಿಕ ವಿನ್ಯಾಸಗಳನ್ನು ಅತ್ಯಂತ ವಿವರವಾಗಿ ರಚಿಸಿರುವ ಹಿರೇಗೌಡರು, ಹಿನ್ನೆಲೆಯಲ್ಲಿ ಸೂಚ್ಯವಾದ ಪ್ರಕೃತಿಯನ್ನು ಚಿತ್ರಿಸಿದ್ದಾರೆ.

**೬. ಭಾವಚಿತ್ರ (೧೯೯೬)**

ಚಿತ್ರ೫ರಲ್ಲಿ ಪಿ.ಆರ್.ತಿಪ್ಪೇಸ್ವಾಮಿಯವರ ಭಾವ ಚಿತ್ರ ರಮಣೀಯ ನೆಲೆಯಲ್ಲಿ ಅಭಿವ್ಯಕ್ತಗೊಂಡಿದ್ದರೆ, ಈ ಭಾವಚಿತ್ರ ಪೂರ್ಣವಾಗಿ ಅಕಾಡೆಮಿಕ್ ನೆಲೆಯಲ್ಲಿ ಚಿತ್ರಿತಗೊಂಡಿದೆ. ಚಿತ್ರ೫ರ ಹಾಗೆ ಇಲ್ಲಿ ವಿವರ ರಚನೆಗೆ ಆಸ್ಪದ ನೀಡದ ಹಿರೇಗೌಡರು ದಟ್ಟವಾದ ಕುಂಚದ ಬೀಸುಗಳನ್ನು ದುಡಿಸಿಕೊಂಡು ರೂಪದರ್ಶಿಯ ಭಾವಚಹರೆಯನ್ನು ಸೆರೆಹಿಡಿಯುವ ಯತ್ನವಿದು. ಅಲ್ಪ ಸಮಯದಲ್ಲಿ ರಚಿಸಿರುವ ಈ ಭಾವಚಿತ್ರದಲ್ಲಿ ಸಾಂಪ್ರದಾಯಿಕ ಭಾವ ಸಂಯೋಜನೆ ಅಳವಡಿಸಿ, ಮುಖದಲ್ಲಿ ಅಲ್ಲಲ್ಲಿ ಬೆಳಕಿನ ಛಾಯೆಗಳನ್ನು ಕಾಗದದ ಅವಕಾಶದಲ್ಲಿಯೇ ದುಡಿಸಿಕೊಂಡು ಭಾವಕ್ಕೆ ತ್ರಿಮಾನದ ಅನುಭವದ ಸ್ಪರ್ಶ ಇಲ್ಲಿದೆ. ಹಿನ್ನೆಲೆಯಲ್ಲಿ ಸಾಂಪ್ರದಾಯಿಕ ವರ್ಣ ಲೇಪನದೊಂದಿಗೆ ರೂಪದರ್ಶಿಯ ಆಕೃತಿ ಮುನ್ನೆಲೆಯಲ್ಲಿ ಕಾಣುವಂತೆ ಚಿತ್ರಿಸಿರುವುದು ವಿಶೇಷವಾಗಿದೆ.

**೭. ಭಾವಚಿತ್ರ (೧೯೯೬)**

ಹಿರೇಗೌಡರ ಭಾವಚಿತ್ರಗಳ ಸರಣಿಯಲ್ಲಿಯೇ ತೀರಾ ವಿಭಿನ್ನವಾದ ಭಾವಚಿತ್ರವಿದು. ಸಾಧುವಿನ ಭಾವಚಹರೆಗೆ ಪೂರಕವಾಗಿ ವರ್ಣ ಮೇಳವನ್ನು ಮತ್ತು ಕುಂಚದ ಬೀಸುಗಳನ್ನು ವೇಗವಾಗಿ ದುಡಿಸಿಕೊಂಡು ರಚಿಸಿದ ಕಲಾಕೃತಿ ಇದಾಗಿದೆ. ಎಲ್ಲವೂ ಸಜೀವ ಕಳೆಗೆ ಪೂರಕವಾದ ಎಲ್ಲ ಅಂಶಗಳನ್ನೂ ದುಡಿಸಿಕೊಂಡ ಹಿರೇಗೌಡರು ರೋಮ್ಯಾಂಟಿಕ್ ನೆಲೆಯ ಕಲಾವಿದರು ಎಂಬ ಅಂಗಳದಿಂದ ಹೊರಬಂದು ಪ್ರಯೋಗಶೀಲ ಕಲಾವಿದರೆಂದು ಮತ್ತು ಈ ರಚನೆಯ ಮೂಲಕ ಒಬ್ಬ ಅತ್ಯುತ್ತಮ ಅಕಾಡೆಮಿಕ್ ಕಲಾವಿದರೆಂಬ ಹೆಸರಿಗೆ ಭಾಜನರಾಗಲು ದಾಪುಗಾಲು ಹಾಕಿದ್ದಾರೆ. ಸಾಧುವಿನ ಚರ್ಮದ ವರ್ಣ ಛಾಯೆಯನ್ನು ಪ್ರಬುದ್ಧವಾಗಿ ಗ್ರಹಿಸಿರುವ ಹಿರೇಗೌಡರು ವರ್ಣದ ಬೀಸುಗಳನ್ನು ಸ್ನಾಯುಗಳು ರೂಪುಗೊಂಡಿರುವದಕ್ಕೆ ಪೂರಕವಾಗಿ ದುಡಿಸಿಕೊಂಡಿದ್ದಾರೆ ಅದೇ ಬಗೆಯ ನಿರ್ವಹಣೆಯನ್ನು ಸಾಧುವಿನ ರುಮಾಲಿನಲ್ಲಿ ಮತ್ತು ದೇಹದ ಮೇಲಿನ ಉಡುಪಿನಲ್ಲಿಯೂ ಸಹ ಕಾಣಬಹುದು. ಸ್ನಾಯುಗಳ ಉಬ್ಬುವಿಕೆಯನ್ನು ತೋರ್ಪಡಿಸಲು ಸೂಚ್ಯವಾದ ಬೆಳಕಿನ ಛಾಯೆಗಳನ್ನು ಸಮರ್ಥವಾಗಿ ದುಡಿಸಿಕೊಂಡಿರುವುದರಿಂದ ಹಿರೇಗೌಡರ ಭಾವಚಿತ್ರಗಳ ಸರಣಿಲ್ಲಿಯೇ ವಿಭಿನ್ನ ಕಲಾಕೃತಿ ಎಂದು ಉಲ್ಲೇಖಿಸಿದ್ದು.

**ಉಪಸಂಹಾರ**

ಹಿರೇಗೌಡರು ರಚಿಸಿರುವ ಏಳು ತೈಲ ವರ್ಣದ ಭಾವಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಚಿತ್ರ ೧,೬ ಮತ್ತು ೭ನೆಯ ಭಾವಚಿತ್ರಗಳು ಪೂರ್ಣವಾಗಿ ಅಕಾಡೆಮಿಕ್

ನೆಲೆಯಲ್ಲಿ ರಚನೆಗೊಂಡಿವೆ. ಇಲ್ಲಿ ಬಲವಾದ ಕುಂಚದ ಬೀಸುಗಳು ರೂಪದರ್ಶಿಗಳ ಸ್ನಾಯುಗಳಿಗೆ ತ್ರಿಮಾನದ ಛಾಯೆಯನ್ನು ನೀಡುತ್ತವೆ. ಹಾಗೆಯೇ ಆ ಬೀಸುಗಳ ವೇಗೋತ್ಕರ್ಷ ಸಹ ಭಾವಗಳಿಗೆ ಒಂದು ಸಜೀವ ಕಳೆಯನ್ನು ತಂದಿದೆ. ಚಿತ್ರ ೨ ಹಿರೇಗೌಡರ ಭಾವಸರಣಿಯಲ್ಲಿ ವಿಶಿಷ್ಟ ಬಗೆಯ ಸಂಯೋಜನಾ ಕ್ರಮಕ್ಕೆ ಒಳಗಾದರೆ, ಅದೇ ಬಗೆಯ ಆದರೆ ಅಲ್ಪ ದೂರದ ನೆಲೆಯಲ್ಲಿ ರಚನೆಗೊಂಡಿರುವುದು ಪಿ.ಆರ್.ತಿಪ್ಪೇಸ್ವಾಮಿ ಭಾವಚಿತ್ರ, ಇದು ಪೂರ್ಣವಾಗಿ ರೋಮ್ಯಾಂಟಿಕ್ ನೆಲೆಯಲ್ಲಿ ರಚನೆಗೊಂಡಿದೆ. ಇದರಂತೆಯೇ ಚಿತ್ರ ೩ ಸಹ. ಚಿತ್ರ ೪ ಚೌಕಟ್ಟಿನೊಳಗೆ ಸಂಯೋಜನೆಗೊಂಡು, ಸಣ್ಣ ಪ್ರಮಾಣದ ಕುಂಚದ ಬೀಸುಗಳನ್ನು ಅಳವಡಿಸಿಕೊಂಡು ಅಕಾಡೆಮಿಕ್ ನೆಲೆಯಲ್ಲಿ ರಚನೆಗೊಂಡ ಕಲಾಕೃತಿ ಇದು. ಒಟ್ಟಿನಲ್ಲಿ ಇಲ್ಲಿನ ಏಳು ಭಾವಚಿತ್ರಗಳ ಅಧ್ಯಯನದಿಂದ ಹಿರೇಗೌಡರು ಪ್ರಯೋಗಶೀಲರೆಂದು ಮತ್ತು ಅವರ ಪ್ರಯೋಗಗಳು ಕೇವಲ ಅಲಂಕಾರಕ್ಕೆ ಸೀಮಿತಗೊಳ್ಳದೇ ಕಲಾಪ್ರಜ್ಞೆಯ ವೃದ್ಧಿಗಾಗಿ ಪೂರಕವಾಗಬಲ್ಲ ಭಾವಚಿತ್ರಗಳೆಂದು ಹೇಳಬಹುದು.

********

**೧.೨. ಭಾವಚಿತ್ರಗಳು (ಸಾಮಾಜಿಕ)**

ಹಿರೇಗೌಡರು ತಮ್ಮ ಶೈಕ್ಷಣಿಕ ಕಾರ್ಯಕಲಾಪಗಳೊಡನೆ ಸಾಮಾಜಿಕ ಸಂಪರ್ಕದಲ್ಲಿದ್ದುದರಿಂದ ಅನೇಕ ಘನ ವ್ಯಕ್ತಿತ್ವವುಳ್ಳವರ ಭಾವಚಿತ್ರಗಳನ್ನು ರಚಿಸಿದ್ದು, ಆಯ್ದ ತೈಲ ವರ್ಣದ ಭಾವಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**೧. ಜಿ.ಡಿ. ಬಿರ್ಲಾ ಅವರ ಭಾವಚಿತ್ರ (೧೯೭೪)**

ಹರಿಹರದ ಬಿರ್ಲಾ ಕಾರ್ಖಾನೆಯ ಸಂಗ್ರಹದಲ್ಲಿರುವ ಈ ಕಲಾಕೃತಿ ಬಿರ್ಲಾ ಸಮೂಹದ ಉದ್ದಿಮೆಗಳ ಜನಕ ಜಿ.ಡಿ.ಬಿರ್ಲಾ ಅವರದು. ಫೋಟೋ ರಿಯಲಿಸಮ್‌ನ ನೆಲೆಯಲ್ಲಿ ರಚನೆಗೊಂಡ ಈ ಕಲಾಕೃತಿಯಲ್ಲಿ ಹಿರೇಗೌಡರ್ ಅವರು ಬಿರ್ಲಾರವರ ಮುತ್ಸದ್ದಿತನಕ್ಕೆ ಪೂರಕವಾದ ಮೃದುವಾದ ವರ್ಣಮೇಳದಿಂದ ಅವರ ಮುಖದಲ್ಲಿ ಮೃದುತ್ವವನ್ನು ಸಾಕಾರಗೊಳಿಸಿದ್ದಾರೆ. ಸಾಂಪ್ರದಾಯಿಕ ಭಾವಚಿತ್ರ ರಚನಾ ಶೈಲಿಯಲ್ಲಿ ರಚನೆಗೊಂಡ ಈ ಕಲಾಕೃತಿ ಹಿನ್ನೆಲೆಯಲ್ಲಿ ಎಂದಿನ ಹಸಿರು ಶ್ರೇಣಿಯ ವರ್ಣಗಳ ಲೇಪನದಿಂದ ಆಕೃತಿ ಮುನ್ನೆಲೆಯಲ್ಲಿ ಸ್ಪಷ್ಟಗೊಳ್ಳುತ್ತದೆ.

**೨. ಭಾವಚಿತ್ರ (೧೯೭೫)**

ದಾವಣಗೆರೆಯ ಕಲಾಭಿಮಾನಿಗಳಲ್ಲಿ ಸಂಗ್ರಹಗೊಂಡಿರುವ ಈ ಭಾವಚಿತ್ರ ಸಹ ಫೋಟೋರಿಯಲಿಸಮ್‌ನ ತಂತ್ರದಿಂದ ರಚಿತಗೊಂಡಿದೆ. ಹಿಂದಿನ ಚಿತ್ರದಲ್ಲಿ ಆಧುನಿಕ ಭಾವ ಸೃಷ್ಟಿಗೊಂಡಿದ್ದರೆ, ಈ ಚಿತ್ರದಲ್ಲಿ ದೇಸೀ ಭಾವ ಪ್ರಕಟವಾಗಿದೆ. ಅಂದರೆ ಒಂದು ಬಗೆಯಲ್ಲಿ ಸಾಂಪ್ರದಾಯಿಕ ಪೋಷಾಕುಗಳಿಂದ ಕೂಡಿರುವ ಈ ಕೃತಿಯಲ್ಲಿ ಹಿರೇಗೌಡರು ಸಾಂಪ್ರದಾಯಿಕ



೧. ಜಿ.ಡಿ. ಬಿರ್ಲಾ ಅವರ ಭಾವಚಿತ್ರ, ೧೯೭೪



೨. ಭಾವಚಿತ್ರ, ೧೯೭೫



೩. ಭಾವಚಿತ್ರ, ೧೯೭೫



೪. ಗುರುದೇವ ರವೀಂದ್ರನಾಥ ಟಾಗೋರ್ ಅವರ ಭಾವಚಿತ್ರ, ೧೯೭೬

ಭಾವಚಿತ್ರ ರಚನಾ ವಿಧಾನವನ್ನೇ ಅನುಸರಿಸಿದ್ದಾರೆ. ಮುಖದಲ್ಲಿರುವ ರಚನಾ ತಂತ್ರ ವಿವರಗಳು ಆಕೃತಿಯ ಇತರ ಪೋಷಾಕಿನಲ್ಲಿಯೂ ಪುನರಾವರ್ತನೆಗೊಂಡಿವೆ. ಹಿನ್ನೆಲೆಯಲ್ಲಿ ಗಾಢ ವರ್ಣ ಲೇಪನವಿದ್ದರೂ ಆಕೃತಿಯ ಕುತ್ತಿಗೆಯ ಹಿಂಬದಿ ವರ್ಣವನ್ನು ತೆಳುಗೊಳಿಸುವ ಕ್ರಮವನ್ನು ಹಿರೇಗೌಡರು ಅನುಸರಿಸಿದ್ದಾರೆ.

**೩. ಭಾವಚಿತ್ರ** (೧೯೭೫)

ಹಿಂದಿನ ಎರಡೂ ಭಾವಚಿತ್ರಗಳು ಮುತ್ಸದ್ದಿಗಳ ಕೃತಿಗಳಾದರೆ ಈ ಭಾವಚಿತ್ರ ಸುಮಾರು ೪೫-೫೦ರ ಆಸುಪಾಸಿನ ವ್ಯಕ್ತಿಗಳದ್ದು. ಹಿಂದಿನ ಎರಡೂ ಚಿತ್ರಗಳ ಭಾವಕ್ಕೂ ಈ ಚಿತ್ರದ ಭಾವಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಹಿಂದಿನ ಭಾವಚಿತ್ರಗಳೆರಡರಲ್ಲಿ ಸೌಮ್ಯ ಭಾವ ಪ್ರಕಟವಾಗಿದ್ದರೆ, ಇಲ್ಲಿ ಒಂದು ಬಗೆಯ ಸೇನಾನಿಯ ವೀರತ್ವದ ನೋಟ ಪ್ರಕಟವಾಗುತ್ತದೆ. ಏಕೆಂದರೆ ಕಣ್ಣಿನಲ್ಲಿ ಬೆಕ್ಕಿನ ಸ್ವರೂಪ, ಉಗ್ರತೆಯೆ ಭಾವವನ್ನು ಪ್ರಕಟಿಸುವ ಮೀಸೆಗಳಿಂದ ಅಂತಹ ಭಾವ ಪ್ರಕಟವಾಗಿದೆ. ಆಧುನಿಕ ಎನ್ನುವ ಪೋಷಾಕಿನ ರಚನೆಯೊಂದಿಗೆ ಎಂದಿನ ಭಾವಚಿತ್ರದ ಸಾಂಪ್ರದಾಯಿಕ ವಿಧಾನ ಇಲ್ಲಿ ರೂಪುಗೊಂಡಿದೆ.

**೪. ಗುರುದೇವ ರವೀಂದ್ರನಾಥ ಟಾಗೋರ್ ಅವರ ಭಾವಚಿತ್ರ** (೧೯೭೬)

ಶ್ರೇಷ್ಠ ತತ್ವಜ್ಞಾನಿ, ಸೃಜನಶೀಲ ಕಲಾವಿದರೂ ಮತ್ತು ವಿಶ್ವಭಾರತಿ ವಿಶ್ವವಿದ್ಯಾಲಯದ ಸಂಸ್ಥಾಪಕರೂ ಆಗಿದ್ದ ರವೀಂದ್ರನಾಥ ಟಾಗೋರರ ಮುತ್ಸದ್ದೀ ವ್ಯಕ್ತಿತ್ವದ ಸ್ಪಷ್ಟ ಭಾವವನ್ನು ಸೆರೆ ಹಿಡಿಯುವಲ್ಲಿ ಯಶಸ್ಸು ಕಂಡಿರುವ ಹಿರೇಗೌಡರು ಈ ಕಲಾಕೃತಿಯನ್ನು ಅವರು ಬಾಲ್ಯವನ್ನು ಕಳೆದ ಮತ್ತು ಶಾಲಾ ಅಧ್ಯಯನ ಮಾಡಿದ ಗುಡಿಗೇರಿಯ ಶಾಲೆಗೆ ಕೃತಜ್ಞತಾ ಪೂರ್ವಕವಾಗಿ ನೀಡಿದ್ದು. ಈ ಹಿಂದಿನ ಮೂರು ಚಿತ್ರಗಳಿಗಿಂತ ತೀರ ವಿಭಿನ್ನ ಮಾದರಿಯಲ್ಲಿ ರಚನೆಗೊಂಡಿರುವ ಈ ಕಲಾಕೃತಿ ರವೀಂದ್ರರ ಪರಿಪೂರ್ಣವೆನಿಸುವ ವ್ಯಕ್ತಿತ್ವವನ್ನು ಹಿರೇಗೌಡರು ಅತ್ಯಂತ ಸೂಕ್ಷ್ಮ ರಚನಾ ತಂತ್ರದಿಂದ ರಚಿಸಿದ್ದಾರೆ. ಈ ಚಿತ್ರದಲ್ಲಿ ಟಾಗೋರರ ಕೇಶ ವಿನ್ಯಾಸ, ಮುಖದಲ್ಲಿ ಸ್ನಾಯುಗಳನ್ನು, ಅವರು ನೆಟ್ಟ ದೃಷ್ಟಿಯಿಂದ ಈ ಕೃತಿ ಅಪ್ಯಾಯಮಾನವೆನಿಸುತ್ತದೆ. ಹಿನ್ನೆಲೆಯಲ್ಲಿ ಆಕೃತಿಗೆ ಸ್ಪಷ್ಟತೆ ನೀಡುವ ಉದ್ದೇಶದಿಂದ ಮಸುಕಾದ ಪ್ರಕೃತಿಯನ್ನು ಚಿತ್ರಿಸಿದ್ದು, ಟಾಗೋರರ ಪ್ರಕೃತಿ ಪ್ರೀತಿಯನ್ನು ಸಾಂಕೇತಿಕವಾಗಿ ತೋರ್ಪಡಿಸುವ ಆಶಯ ಹಿರೇಗೌಡರದು.

**೫. ಭಾವಚಿತ್ರ** (೧೯೮೯)

ಪಂಜಾಬಿ ವ್ಯಕ್ತಿಯ ಭಾವಚಿತ್ರವಿದು. ಪಂಜಾಬಿ ಪುರುಷರೂ ತಮ್ಮ ಕೇಶಗಳನ್ನು ಧಾರ್ಮಿಕ ಹಿನ್ನೆಲೆಯ ಕಾರಣವಾಗಿ ಕತ್ತರಿಸುವುದಿಲ್ಲ. ಆ ಕಾರಣದಿಂದ ಕೇಶಗಳನ್ನು ಒಗ್ಗೂಡಿಸಿ ಪೇಟ ಕಟ್ಟುವ ಪದ್ಧತಿ ಅಲ್ಲಿದೆ. ಅದಕ್ಕೆ ಪೂರಕವಾಗಿ ವ್ಯಕ್ತಿಯ ಭಾವಚಿತ್ರದಲ್ಲಿ ಮುಖ ರಚನೆಗೆ ಹೆಚ್ಚು ಒತ್ತು ನೀಡಿದಂತೆ ಅವರ ಪೋಷಾಕಿಗೂ ಅಷ್ಟೇ ಮಹತ್ವ ನೀಡಲಾಗಿದೆ. ವೀರತ್ವದಲ್ಲಿಯೂ



೫. ಭಾವಚಿತ್ರ, ೧೯೮೯



೬. ಭಾವಚಿತ್ರ, ೧೯೯೦

ಸೌಮ್ಯಭಾವವನ್ನು ಪ್ರಕಟಿಸಲು ಪ್ರಯತ್ನಿಸಿರುವ ಹಿರೇಗೌಡರು ಪ್ರತಿ ಹಂತದಲ್ಲೂ ಪೋಟೋರಿಯಲಿಸಮ್‌ನ ತಂತ್ರಗಳನ್ನೇ ಇಲ್ಲಿ ಅನುಸರಿಸಿರುವುದು ಕಂಡು ಬರುತ್ತದೆ.

**೬. ಭಾವಚಿತ್ರ (೧೯೯೦)**

ಇಲ್ಲಿನ ಆರು ಭಾವಚಿತ್ರಗಳಲ್ಲಿ ಈ ಚಿತ್ರ ಮಾತ್ರ ಯುವತಿಯ ರಚನೆ. ಸುಮಾರು ೨೫ರ ಆಸುಪಾಸಿನ ವಯೋಮಾನದ ಈ ಯುವತಿಯಲ್ಲಿ ಆಧುನಿಕ ಜೀವನ ಪದ್ಧತಿಯ ವ್ಯಕ್ತಿತ್ವವನ್ನು ಕಾಣಬಹುದು. ಅವಳ ಉಡುಪು, ಕೇಶವಿನ್ಯಾಸ, ಮುಖ ಚಹರೆ ಇವೆಲ್ಲವೂ ಅವಳ ಭಾವಾಭಿರುಚಿಯನ್ನು ಪ್ರಕಟಿಸುತ್ತವೆ. ಇಲ್ಲಿ ಹಿರೇಗೌಡರು ಹೆಚ್ಚಾಗಿ ಪಿಂಕ್ ರೋಸ್ ಶ್ರೇಣಿಯ ವರ್ಣಗಳನ್ನು ವಿವಿಧ ಛಾಯೆಗಳಾಗಿ ಮಾರ್ಪಡಿಸಿ ರಚಿಸಿದ ಕೃತಿ ಇದು. ಹಿನ್ನೆಲೆಯಲ್ಲಿ ಇತರ ಭಾವಚಿತ್ರಗಳಿಗಿಂತ ಭಿನ್ನವಾದ ಅಂದರೆ, ಕಿಡಕಿಯ ವಿನ್ಯಾಸವನ್ನು ಮಸುಕಾಗಿ ರಚಿಸಿದ್ದು ಅದರಲ್ಲಿ ಕುಂಚದಿಂದ ವಿವಿಧ ಛಾಯೆಗಳಲ್ಲಿ ಏರಿಳಿತಗಳನ್ನು ದುಡಿಸಿಕೊಂಡಿದ್ದಾರೆ.

**ಉಪಸಂಹಾರ**

ಹಿರೇಗೌಡರು ರಚಿಸಿದ ಆರು ಸಾಮಾಜಿಕ ಹಿನ್ನೆಲೆಯ ಭಾವಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಸಾಮಾಜಿಕ ಹಿನ್ನೆಲೆಯಲ್ಲಿ ಈ ಭಾವಚಿತ್ರಗಳನ್ನು ರಚಿಸುವಾಗ ಸಾಮಾನ್ಯವಾಗಿ ಹಿರೇಗೌಡರು ಪೋಟೋರಿಯಲಿಸಮ್‌ನ ತಂತ್ರದೊಂದಿಗೆ ಎಂದಿನ ಭಾವಚಿತ್ರದ ಸಾಂಪ್ರದಾಯಿಕ ರಚನಾ ವಿಧಾನವನ್ನು ಇಲ್ಲಿಯೂ ಅನುಸರಿಸಿದ್ದಾರೆ. ಈ ಬಗೆಯ ತಂತ್ರವನ್ನು ಅನುಸರಿಸುವುದಕ್ಕೆ ಕಾರಣಗಳು ಇಲ್ಲವೆಂದಲ್ಲ. ಜನರ ಅಭಿರುಚಿಗೆ ಅನುಗುಣವಾದ ರಚನಾ ತಂತ್ರವನ್ನು ಕಲಾವಿದ ಅನುಸರಿಸುವುದು ಅನಿವಾರ್ಯ. ಏಕೆಂದರೆ ಅಕಾಡೆಮಿಕ್ ಶೈಲಿ ನಮ್ಮಲ್ಲಿ ಅಷ್ಟೊಂದು ಜನಪ್ರಿಯತೆಯನ್ನು, ಮಾನ್ಯತೆಯನ್ನು ಗಳಿಸದ ಹಿನ್ನೆಲೆಯಲ್ಲಿ ಜನರಿಗೆ ಪೋಟೋ ರಿಯಲಿಸಮ್ ತಂತ್ರಗಾರಿಕೆಯೇ ಹೆಚ್ಚು ಪ್ರಿಯವೆನಿಸುತ್ತವೆ. ಹೀಗಾಗಿ ಹಿರೇಗೌಡರು ಅಕಾಡೆಮಿಕ್ ಶೈಲಿಯ ರಚನೆಗಳಿಗಿಂತ ಭಿನ್ನವಾಗಿ, ವಿಶೇಷವಾಗಿ ಗ್ರಾಹಕರಿಗೆ ತೃಪ್ತಿ ಎನಿಸುವ ನೆಲೆಯಲ್ಲಿ ಇಲ್ಲಿನ ಭಾವಚಿತ್ರಗಳನ್ನು ರಚಿಸಿಕೊಟ್ಟಿದ್ದಾರೆ. ರವೀಂದ್ರ ನಾಥ ಟಾಗೋರರ ಮತ್ತು ಚಿತ್ರ ೬ರಲ್ಲಿ ಹಿನ್ನೆಲೆಯನ್ನು ಸಾಂಪ್ರದಾಯಿಕ ರಚನಾ ತಂತ್ರಕ್ಕಿಂತ ಭಿನ್ನವಾಗಿ ರಚಿಸಿದ್ದು, ಆಕೃತಿಗಳಲ್ಲಿ ಎಂದಿನ ಫೋಟೋ ರಿಯಲಿಸಮ್ ಪುನರಾವರ್ತನೆ ಪ್ರಮುಖ ಆಶಯವಾಗಿದೆ.

*******

### ೧.೩. ಭಾವಚಿತ್ರಗಳು (ಧಾರ್ಮಿಕ)

ಹಿರೇಗೌಡರು ತಮ್ಮ ಶೈಕ್ಷಣಿಕ ಕಾರ್ಯಕಲಾಪಗಳೊಡನೆ ಧಾರ್ಮಿಕ ಆಸಕ್ತಿಯನ್ನೂ ಕೂಡ ಹೊಂದಿರುವರು. ನಾಡಿನ ಹಲವಾರು ಹರಗುರು ಚರಮೂರ್ತಿಗಳ ಆಶೀರ್ವಾದ, ಪ್ರೋತ್ಸಾಹ, ಗೌರವಾದರಗಳನ್ನು ಸ್ವೀಕರಿಸಿರುವ ಹಿರೇಗೌಡರು ಧಾರ್ಮಿಕ ಆಶಯದ ಹಿನ್ನೆಲೆಯಲ್ಲಿ ಅನೇಕ ಹರಗುರು–ಚರಮೂರ್ತಿಗಳ ಭಾವಚಿತ್ರಗಳನ್ನು ರಚಿಸಿದ್ದು, ಅವುಗಳಲ್ಲಿ ಲಭ್ಯವಾದ ಎರಡು ತೈಲ ವರ್ಣದ ಭಾವಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**೧. ಶ್ರೀ ಮೃತ್ಯುಂಜಯ ಅಪ್ಪಗಳು, ಮುರುಘಾಮಠ, ಧಾರವಾಡ** (೧೯೭೪)

ಉತ್ತರ ಕರ್ನಾಟಕದಲ್ಲಿ ಧಾರವಾಡದ ಮುರುಘಾಮಠದ ಕೊಡುಗೆ ಅಪಾರವಾದುದು. ಬಡ ವಿದ್ಯಾರ್ಥಿಗಳಿಗೆ ಆಶ್ರಯವನ್ನಿತ್ತು, ಅವರ ವಿದ್ಯಾರ್ಜನೆಗೆ ಸಕಲ ನೆರವನ್ನೂ ನೀಡಿದ ಶ್ರೀ ಮೃತ್ಯುಂಜಯ ಅಪ್ಪಗಳು ನಾಡಿನಾದ್ಯಂತ ಅಪಾರ ಭಕ್ತವೃಂದವನ್ನು ಹೊಂದಿರುವರು. ಅವರ ಭಕ್ತರಲ್ಲಿ ಒಬ್ಬರಾದ ಹಿರೇಗೌಡರು ದಾವಣಗೆರೆ ಕಲಾಶಾಲೆಯಲ್ಲಿ ಅಧ್ಯಾಪಕರಾಗಿ ನೇಮಕಗೊಂಡ ಮೇಲೆ ಶ್ರೀ ಮೃತ್ಯುಂಜಯ ಅಪ್ಪಗಳವರ ಭಾವಚಿತ್ರವನ್ನು ರಚಿಸಿದ್ದು, ಅಕಾಡೆಮಿಕ್ ಶೈಲಿಗೆ ಭಿನ್ನವಾದ ಪೋಟೋರಿಯಲಿಸಮ್ ಶೈಲಿಯಲ್ಲಿ ಚಿತ್ರಿತಗೊಂಡಿದ್ದು. ಶರಣರಲ್ಲಿ ಇರಬಹುದಾದ ಸಾತ್ವಿಕ ಕಳೆ, ಆಧ್ಯಾತ್ಮಿಕ ಚೈತನ್ಯಗಳೆಲ್ಲವನ್ನೂ ಹಿರೇಗೌಡರು ತುಂಬ ಮೃದುವಾದ ವರ್ಣಗಳ ಸಾಂಗತ್ಯದಿಂದ ಸೆರೆ ಹಿಡಿದಿದ್ದು, ನೆರಳು ಬೆಳಕಿನ ಛಾಯೆಗಳನ್ನು ಸಹ ಅಷ್ಟೇ ಸಮರ್ಪಕವಾಗಿ ದುಡಿಸಿಕೊಂಡಿರುವ ಬಗೆಯನ್ನು ಇಲ್ಲಿ ಕಾಣಬಹುದು. ಅವರು ಧರಿಸಿರುವ ಚಸ್ಮಾದಲ್ಲಿ ಪಾರದರ್ಶಕ ತಂತ್ರವನ್ನು ವಿವಿಧ ವರ್ಣಗಳ ಪ್ರತಿಫಲನದ ಕ್ರಿಯೆಯನ್ನು ಹಿರೇಗೌಡರು ಅಂದವಾಗಿ ರಚಿಸಿದ್ದಾರೆ. ಪೂಜ್ಯರು ಧರಿಸಿರುವ ಪೇಟದಲ್ಲಿ ಮಡಿಕೆಗಳನ್ನು ಕೂಡ ಸೂಕ್ಷ್ಮ ತಂತ್ರದಿಂದ ರಚಿಸಿದ್ದು ಹಾಗೆಯೇ



೧. ಶ್ರೀ ಮೃತ್ಯುಂಜಯ ಅಪ್ಪಗಳು, ಮುರುಘಾಮಠ, ಧಾರವಾಡ, ೧೯೭೪



೨. ಶ್ರೀ ಮಹಾಂತಪ್ಪಗಳು, ಮುರುಘಾಮಠ, ಧಾರವಾಡ, ೧೯೭೪

ಅವರ ಉಡುಪಿನಲ್ಲಿ ನೀರಿಗೆಗಳು ಮೂಡಿವೆ. ಹಿನ್ನೆಲೆಯಲ್ಲಿ ಎಂದಿನ ಗಾಢ ವರ್ಣದ ಲೇಪನದಿಂದ ಪೂಜ್ಯರ ಆಕೃತಿ ಮುನ್ನೆಲೆಯಲ್ಲಿ ಸ್ಪಷ್ಟಗೊಳಿಸಿದ್ದಾರೆ.

**೨. ಶ್ರೀ ಮಹಾಂತಪ್ಪಗಳು, ಮುರುಘಾಮಠ, ಧಾರವಾಡ** (೧೯೭೪)

ಶ್ರೀ ಮೃತ್ಯುಂಜಯ ಅಪ್ಪಗಳ ಉತ್ತರಾಧಿಕಾರಿಯಾಗಿ ಮುರುಘಾಮಠದ ಪರಂಪರೆಯನ್ನು ಮುಂದುವರೆಸಿಕೊಂಡು ಬಂದವರು ಶ್ರೀ ಮಹಾಂತಪ್ಪಗಳು. ಎಂದಿನ ಭಾವಚಿತ್ರದ ರಚನಾ ಸಂಪ್ರದಾಯವನ್ನು ಇಲ್ಲಿ ಅನುಸರಿಸಿದ್ದು, ಫೋಟೋರಿಯಲಿಸಮ್‌ನ ನೆಲೆಯಲ್ಲಿ ದೃಶ್ಯಾತ್ಮಕವಾಗಿ ನಿರೂಪಿತಗೊಂಡಿದೆ. ಎಡ ಪಾರ್ಶ್ವದ ಮೇಲ್ಭಾಗದಿಂದ ಬಿದ್ದ ಬೆಳಕಿನ ಛಾಯೆಯಿಂದ ಅಪ್ಪಗಳ ಕಣ್ಣಿನ ಭಾಗದಲ್ಲಿ ನೆರಳಿನ ಛಾಯೆ ಮೂಡಿದ್ದರೂ ಹಿರೇಗೌಡರು ನೇತ್ರಾನಂದಕರವಾದ ನೇತ್ರಗಳಿಗೆ ಭಾವ ತುಂಬುವುದರ ಮೂಲಕ ಸ್ಪಷ್ಟೀಕರಿಸಿದ್ದಾರೆ. ಅಪ್ಪಗಳ ಮುಖದ ಮೇಲಿನ ಸ್ನಾಯುಗಳಿಗೆ ಪೂರಕವಾಗಿ ಮೃದುವಾದ ವರ್ಣಗಳ ಲೇಪನದಿಂದ ದುಂಡಾದ ಭಾವ ಇಲ್ಲಿ ಪ್ರಕಟವಾಗಿದೆ. ಕಾವಿ ವರ್ಣದ ಉಡುಪಿನಲ್ಲಿ ಮಡಿಕೆಗಳನ್ನು ರಿಯಲಿಸಮ್‌ನ ಮಾದರಿಯಲ್ಲಿ ರಚಿಸಿರುವ ಹಿರೇಗೌಡರು ಹಿನ್ನೆಲೆಯಲ್ಲಿ ಎಂದಿನ ವರ್ಣದ ಲೇಪನ ಮಾಡುವುದರ ಮೂಲಕ ಆಕೃತಿಗೆ ಸ್ಪಷ್ಟೀಕರಣ ಕೊಟ್ಟಿದ್ದಾರೆ.

**ಉಪಸಂಹಾರ**

ಹಿರೇಗೌಡರು ರಚಿಸಿದ ಎರಡು ಧಾರ್ಮಿಕ ಹಿನ್ನೆಲೆಯ ಭಾವಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಎರಡೂ ಚಿತ್ರಗಳಲ್ಲಿ ಆ ವ್ಯಕ್ತಿಗಳ ಹಿನ್ನೆಲೆಗೆ ಪೂರಕವಾದ ಚೈತನ್ಯಮಯ, ಸಾತ್ವಿಕ ಭಾವವನ್ನು ಹಿರೇಗೌಡರು ಅಲ್ಪ ವರ್ಣಗಳ ಸಾಂಗತ್ಯದಿಂದ ರಚಿಸಿದ್ದಾರೆ. ಫೋಟೋರಿಯಲಿಸಮ್‌ನ ರಚನಾ ತಂತ್ರದ ಅನುಕರಣೆ ಇಲ್ಲಿದ್ದು ಎಂದಿನ ಭಾವಚಿತ್ರದ ರಚನಾ ಸಂಪ್ರದಾಯದ ಮುಂದುವರಿಕೆಯಾಗಿರುತ್ತದೆ. ಸಾಮಾಜಿಕ ವ್ಯಕ್ತಿಗಳ ಭಾವಚಿತ್ರಗಳಿಗಿಂತ ಭಿನ್ನವಾದ ಭಾವ ಧಾರ್ಮಿಕ ಹಿನ್ನೆಲೆಯ ವ್ಯಕ್ತಿಗಳಲ್ಲಿ ಸ್ಪಷ್ಟವಾಗಿ ತೋರಿಸುವ ಹಿರೇಗೌಡರ ಈ ಭಾವಚಿತ್ರಗಳು ಅನನ್ಯವಾದವು.

********

**ಭಾಗ ೨. ಪೂರ್ಣಭಾವಚಿತ್ರಗಳು** (ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ)

ಹಿರೇಗೌಡರು ತಮ್ಮ ಅಕಾಡೆಮಿಕ್ ಸಂದರ್ಭದಲ್ಲಿ ಕೇವಲ ಅಕಾಡೆಮಿಕ್ ಶೈಲಿಯ ಕಲಾಕೃತಿಗಳಿಗೆ ಬದ್ಧವಾಗದೇ ಸಾಮಾಜಿಕ, ಧಾರ್ಮಿಕ ನೆಲೆಯ ಕಲಾಕೃತಿಗಳನ್ನು ರಚಿಸಿರುವುದನ್ನು ಹಿಂದಿನ ಭಾವಚಿತ್ರಗಳ ಅಧ್ಯಯನ ಸಂದರ್ಭದಲ್ಲಿ ಕಂಡುಕೊಳ್ಳಲಾಗಿದೆ. ಹಿರೇಗೌಡರು ಪೂರ್ಣಭಾವಚಿತ್ರಗಳನ್ನು ಜಲವರ್ಣದ ಮಾಧ್ಯಮಗಳಿಗಿಂತ ತೈಲವರ್ಣದ ಪೂರ್ಣಭಾವಚಿತ್ರಗಳನ್ನು ಹೆಚ್ಚಾಗಿ ರಚಿಸಿರುವುದು ಕಂಡು ಬರುತ್ತದೆ. ಇಲ್ಲಿ ಹಿರೇಗೌಡರು ರಚಿಸಿದ ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಮತ್ತು ಐತಿಹಾಸಿಕ ಹಿನ್ನೆಲೆಯುಳ್ಳ ವ್ಯಕ್ತಿಗಳ ಪೂರ್ಣಭಾವ ಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**೨.೧. ಜಲವರ್ಣ** (ಶೈಕ್ಷಣಿಕ ಪೂರ್ಣಭಾವಚಿತ್ರಗಳು)

**೧. ಪೂರ್ಣಭಾವಚಿತ್ರ,** (೧೯೭೨)

ಕಲಾಶಾಲೆಯ ವಿದ್ಯಾರ್ಥಿಗಳಿಗಾಗಿ ಪ್ರಾತ್ಯಕ್ಷಿಕೆ ನೀಡಿದ ಜಲವರ್ಣದ ಕಲಾಕೃತಿ ಇದು. ವೃದ್ಧನೋರ್ವನ ದೇಹದ ಅರ್ಧ ಭಾಗವನ್ನು ಮಾತ್ರ ಅಂದರೆ ಮುಖ ಮತ್ತು ಬಲಗೈಯನ್ನು ಚಿತ್ರಿಸಿದ ಕೃತಿ ಇದು. ಪಾರದರ್ಶಕ ತಂತ್ರದಿಂದ ವೇಗವಾದ ಕುಂಚದ ಬೀಸುವಿಕೆಗಳನ್ನು ಸಮರ್ಥವಾಗಿ ದುಡಿಸಿಕೊಂಡ ಕಲಾಕೃತಿ ಇದು. ಮುಖದಲ್ಲಿ ಅತ್ಯಂತ ಸೂಚ್ಯವಾದ ಕುಂಚದ ಬೀಸುಗಳು ವೃದ್ಧನ ಅಂಗಾಂಗಗಳನ್ನು ರೂಪಿಸಿವೆ. ಕೆಲವೇ ಕೆಲವು ವರ್ಣ ಛಾಯೆಗಳಲ್ಲಿ ಕಾಗದದ ಅವಕಾಶವನ್ನೇ ಪ್ರಖರ ಬೆಳಕಿನ ಛಾಯೆಗಳನ್ನಾಗಿ ದುಡಿಸಿಕೊಂಡ ಅನನ್ಯತೆ ಇಲ್ಲಿದೆ. ದಟ್ಟವಾದ ಬೀಸುವಿಕೆಗಳೇ ಈ ಚಿತ್ರದ ಜೀವಾಳವೆನ್ನಬಹುದು. ಆಕೃತಿಯು ವಿವರವಾದ ರಚನಾ ತಂತ್ರಕ್ಕೆ ಒಳಗಾಗದೇ



೧. ಪೂರ್ಣಭಾವಚಿತ್ರ, ೧೯೭೨

ಇದ್ದರೂ, ಮಾಂತ್ರಿಕವೆನ್ನಬಹುದಾದ ಭಾವಸ್ಫುರಣೆಯನ್ನು ಅತ್ಯಂತ ಸ್ಪಷ್ಟವಾಗಿ ಪ್ರಕಟಪಡಿಸುತ್ತದೆ ಈ ಕೃತಿ. ವೃದ್ಧ ಧರಿಸಿರುವ ಕೋಟು, ಅವನ ಅಂಗಿಯ ಮಡಿಕೆಗಳೆಲ್ಲ ಬಲವಾದ ಕುಂಚದ ಬೀಸುಗಳಿಂದಲೇ ಆವೃತವಾಗಿವೆ. ಜಲವರ್ಣವನ್ನು ಪಾರದರ್ಶಕವಾಗಿ ವೇಗೋತ್ಕರ್ಷದ ಬೀಸುಗಳಿಂದ ಒಂದು ಪೂರ್ಣಭಾವಚಿತ್ರವನ್ನು ಹೇಗೆ ರಚಿಸಬಹುದು ಎಂಬುದಕ್ಕೆ ಈ ಕಲಾಕೃತಿ ಒಂದು ನಿದರ್ಶನವಾದರೆ, ಪೂರ್ಣ ಬಾವ ಚಿತ್ರವೊಂದನ್ನು ವಿಭಿನ್ನವಾಗಿ ಹೇಗೆ ಸಂಯೋಜಿಸಬಹುದು ಎಂಬುದಕ್ಕೆ ಕೂಡ ಈ ಕಲಾಕೃತಿ ಒಂದು ಉತ್ತಮ ಮಾನದಂಡವಾಗಿ ತನ್ನ ಮೌಲ್ಯವನ್ನು ಎತ್ತಿ ಹಿಡಿಯುತ್ತದೆ.

### ೨.೨. ತೈಲವರ್ಣ

ಹಿರೇಗೌಡರು ತೈಲವರ್ಣ ಮತ್ತು ಅಕ್ರಿಲಿಕ್ ವರ್ಣ ಮಾಧ್ಯಮದಲ್ಲಿ ಮಾಡಿದಷ್ಟು ಪ್ರಯೋಗಗಳನ್ನು ಇತರ ಮಾಧ್ಯಮಗಳಲ್ಲಿ ಮಾಡಿದ್ದರೂ ಸಹ ತೈಲವರ್ಣದ ಪಾರುಪತ್ಯವೇ ಎದ್ದು ಕಾಣುತ್ತದೆ. ಹಿರೇಗೌಡರು ತೈಲವರ್ಣದಲ್ಲಿ ರಚಿಸಿದ ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಮತ್ತು ಐತಿಹಾಸಿಕ ಪೂರ್ಣಭಾವಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ೨.೨.೧. ಶೈಕ್ಷಣಿಕ ಪೂರ್ಣಭಾವಚಿತ್ರಗಳು

ಶೈಕ್ಷಣಿಕ ಭಾವಚಿತ್ರಗಳನ್ನು ಹಿರೇಗೌಡರು ಸಾಮಾನ್ಯವಾಗಿ ತಾವು ಪ್ರಾಚಾರ್ಯರಾಗಿ ಸೇವೆ ಸಲ್ಲಿಸುತ್ತಿದ್ದ ದಾವಣಗೆರೆಯ ಕಲಾಶಾಲೆಯ ವಿದ್ಯಾರ್ಥಿಗಳಿಗಾಗಿ ರಚಿಸಿದ್ದಾರೆ. ಅದಕ್ಕೆ ಪೂರಕವಾದ ಶೈಕ್ಷಣಿಕ ಗುಣ ಲಕ್ಷಣಗಳನ್ನು, ರಚನಾ ತಂತ್ರಗಳನ್ನು ಇಲ್ಲಿನ ಕಲಾಕೃತಿಗಳಲ್ಲಿ ಕಾಣಬಹುದಾಗಿದ್ದು, ಹಿರೇಗೌಡರು ರಚಿಸಿದ ಆಯ್ದ ಪೂರ್ಣಭಾಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ೧. ಪೂರ್ಣಭಾವಚಿತ್ರ (೧೯೭೪)

ಕಲಾಶಾಲೆಯಲ್ಲಿ ಅಧ್ಯಯನ ಮಾಡುತ್ತಿದ್ದ ವಿದ್ಯಾರ್ಥಿಯೋರ್ವಳನ್ನು ರೂಪದರ್ಶಿಯನ್ನಾಗಿ ಬಳಸಿಕೊಂಡು ಹಿರೇಗೌಡರು ರಚಿಸಿದ ಪೂರ್ಣಭಾವಚಿತ್ರವಿದು. ರೂಪದರ್ಶಿಯ ಅಂಗಾಂಗ ರಚನೆಯಲ್ಲಿ ಪ್ರಬುದ್ಧತೆಯೇ ಮೈವೆತ್ತಿದ ರಚನೆ ಇದು. ಅಷ್ಟೇ ಅಲ್ಲದೇ ವೇಗೋತ್ಕರ್ಷವುಳ್ಳ ಕುಂಚದ ಬೀಸುಗಳನ್ನು ಹೊಂದಿ ರೂಪದರ್ಶಿಯ ಮೈವಳಿಕೆಯಲ್ಲಿ ತ್ರಿಮಾನದ ಕಲ್ಪನೆಯನ್ನು ಹಿರೇಗೌಡರು ಅತ್ಯಂತ ಸಮರ್ಥವಾಗಿ ಬಿಂಬಿಸಿದ್ದಾರೆ. ರೂಪದರ್ಶಿಯ ಮುಖದಲ್ಲಿ ಬೆಳಕಿನ ಛಾಯೆಗೆ ತಕ್ಕ ಹಾಗೆ ವರ್ಣಗಳನ್ನು ವಿವಿಧ ಶ್ರೇಣಿಗಳಲ್ಲಿ ದುಡಿಸಿಕೊಂಡಿದ್ದಾರೆ. ಹಾಗೆಯೇ ರೂಪದರ್ಶಿಯ ವಸ್ತ್ರವಿನ್ಯಾಸಗಳನ್ನು ತಾಜಾ ವರ್ಣಗಳ ಸಾಂಗತ್ಯದಿಂದ ನೈಜವಾದದ ಹಿನ್ನೆಲೆಯಲ್ಲಿ ರಚಿಸಿದ್ದರೂ ಅವುಗಳಲ್ಲಿ ಅಕಾಡೆಮಿಕ್ ಸ್ಪರ್ಶವಿದೆ. ಕಲಾವಿದರು ಭಾವಚಿತ್ರ ರಚನೆಗಾಗಿ ರೂಪದರ್ಶಿಗಳನ್ನು ಆಯ್ಕೆ ಮಾಡಿಕೊಳ್ಳುವಾಗ ದುಂಡುಮೊಗ ಅಥವಾ ಕೋಲು ಮುಖದ ಗುಣಲಕ್ಷಣಗಳನ್ನು ಹೊಂದಿರುವರಿಗೆ ಆದ್ಯತೆ ನೀಡಿದರೆ ಹಿರೇಗೌಡರು ಎಲ್ಲ ಬಗೆಯ ವ್ಯಕ್ತಿತ್ವವನ್ನು



೧. ಪೂರ್ಣಭಾವಚಿತ್ರ, ೧೯೭೪





೨. ಪೂರ್ಣಭಾವಚಿತ್ರ, ೧೯೯೧





೩. ಪೂರ್ಣಭಾವಚಿತ್ರ, ೧೯೯೨

ಹೊಂದಿರುವರನ್ನು ಸಹ ಭಾವಚಿತ್ರ ರಚನೆಗೆ ಬಳಸಿಕೊಳ್ಳುತ್ತಾರೆ. ಈ ಚಿತ್ರದಲ್ಲಿ ನೀಳಕಾಯದ ದುಂಡುಮೊಗದ ರೂಪದರ್ಶಿಯನ್ನೇ ಆಯ್ಕೆ ಮಾಡಿಕೊಂಡಿದ್ದು ಭಾವಚಿತ್ರ ರಚನೆಗೆ ತಕ್ಕಂತೆ ಅವಳನ್ನು ಕೂರಿಸಿರುವ ಭಂಗಿಯೂ ಸಹ ಸ್ತ್ರೀ ಸಹಜ ಗುಣಗಳಿಗೆ ಪೂರಕವಾಗಿದ್ದು, ಅದು ದೃಶ್ಯ ರೂಪ ಪಡೆದ ಫಲಿತದಲ್ಲಿಯೂ ಸಹ ಆಕರ್ಷಕ ಭಂಗಿಯಾಗಿ ಗೋಚರವಾಗುತ್ತದೆ. ಕುಳಿತಿರುವ ಪೀಠವು ಹಿನ್ನೆಲೆಯ ಮಸುಕಾದ ವಿವಿಧ ವರ್ಣ ಛಾಯೆಗಳಲ್ಲಿ ಒಂದಾಗಿ ಹೋಗಿದ್ದರೂ ರೂಪದರ್ಶಿಯ ಸೊಬಗಿಗೆ ಪೂರಕವಾದ ತಂತ್ರ ನಿರ್ವಹಣೆಯನ್ನು ಹೊಂದಿದ ಅನನ್ಯ ಕಲಾಕೃತಿ ಇದು.

೨. ಪೂರ್ಣಭಾವಚಿತ್ರ, ೧೯೯೧

ಹಿಂದಿನ ಕಲಾಕೃತಿಗಿಂತ ಈ ಕಲಾಕೃತಿ ಭಿನ್ನವಾದರೂ ಹಿಂದಿನ ಕಲಾಕೃತಿಯ ತಾಂತ್ರಿಕ ನಿರ್ವಹಣೆಯೂ ಇಲ್ಲಿಯೂ ಕೂಡ ಪುನರಾವರ್ತನೆಯಾಗಿದೆ. ದಟ್ಟವಾದ ಕುಂಚದ ಬೀಸುವಿಕೆಗಳು ರೂಪದರ್ಶಿಯ ಮೈವಳಿಕೆಯನ್ನು ಸೃಷ್ಟಿಸಿವೆ. ಕಾಗದದ ಎಡಪಾರ್ಶ್ವದಲ್ಲಿ ಸಂಯೋಜನೆಗೊಂಡ ರೂಪದರ್ಶಿಯನ್ನು ಶೈಕ್ಷಣಿಕ ಶಿಸ್ತಿನಲ್ಲಿ ರಚಿಸಲಾಗಿದೆ. ಒಟ್ಟಾರೆ ರಚನೆಯಲ್ಲಿ ರೂಪದರ್ಶಿಯ ವಸ್ತ್ರವಿನ್ಯಾಸ, ದೈಹಿಕ ವಿನ್ಯಾಸಗಳು ಒಂದು ಬಗೆಯ ಕ್ಯೂಬಿಸ್ಟ್ ಬೀಸುಗಳನ್ನು ನೆನಪಿಸುತ್ತವೆ. ಹಿನ್ನೆಲೆಯಲ್ಲಿ ಒಳಾಂಗಣದ ವಿನ್ಯಾಸವನ್ನು ಮಸುಕಾದ ತಂತ್ರದಲ್ಲಿ ರಚಿಸಿದ್ದು, ಹಿನ್ನೆಲೆಯಲ್ಲಿರುವ ವರ್ಣಗಳು ರೂಪದರ್ಶಿಯಲ್ಲಿರುವ ವರ್ಣಗಳೇ ಆಗಿವೆ. ಇಂತಹ ಅಪರೂಪದ ವರ್ಣಗಳ ಸಾಂಗತ್ಯವನ್ನು ಹೊಂದಿದ ಕೃತಿಯಲ್ಲಿ ಅಕಾಡೆಮಿಕ್ ಮಾದರಿಯ ವಿವರಗಳು ಸ್ಪಷ್ಟವಾಗುವ ತಂತ್ರಗಾರಿಕೆಯನ್ನು ಅನುಸರಿಸಿವೆ.

೩. ಪೂರ್ಣಭಾವಚಿತ್ರ, (೧೯೯೨)

ಹಿಂದಿನ ಎರಡೂ ಪೂರ್ಣಭಾವಚಿತ್ರಗಳಿಗಿಂತ ವಿಭಿನ್ನವಾದ ಶೈಲೀಕೃತ ನೆಲೆಯಲ್ಲಿ ಅನನ್ಯ ಸಂಯೋಜನೆಯೊಂದಿಗೆ ರೂಪಣಗೊಂಡ ಭಾವಚಿತ್ರವಿದು. ಹಿರೇಗೌಡರ ಜೇಷ್ಠ ಪುತ್ರಿಯಾದ ವೀಣಾ ಅವರನ್ನೇ ರೂಪದರ್ಶಿಯನ್ನಾಗಿಸಿಕೊಂಡು ಒಂದು ಬಗೆಯಲ್ಲಿ ಅಧ್ಯಯನಾತ್ಮಕ ಮಾದರಿಯಲ್ಲಿ ಪೂರ್ಣಭಾವಚಿತ್ರವಿದು. ಹಿಂದಿನ ಎರಡು ಚಿತ್ರಗಳಲ್ಲಿ ಅಕಾಡೆಮಿಕ್ ತಾಂತ್ರಿಕ ನಿರ್ವಹಣೆ ಇಲ್ಲಿ ಪುನರಾವರ್ತನೆಯಾಗದೇ ರಮಣೀಯತೆಯತ್ತ ಪಲ್ಲಟಗೊಂಡಿವೆ. ರೂಪದರ್ಶಿಯ ರಚನೆಯಲ್ಲಿ ಹಿರೇಗೌಡರು ತೋರಿರುವ ಆಸಕ್ತಿ ಹಿನ್ನೆಲೆಯಲ್ಲೂ ಮುಂದುವರೆದಿರುವ ಕಾರಣಗಳನ್ನು ಅನ್ವೇಷಿಸಿದರೆ, ಹಿರೇಗೌಡರ ಪ್ರಕೃತಿ ಪ್ರೀತಿ ಅಧ್ಯಯನದಲ್ಲಿ ಮೂರ್ತರೂಪ ಪಡೆದಿದೆ. ಮೊದಲನೆಯದಾಗಿ ರೂಪದರ್ಶಿಯಲ್ಲಿ ಸಮ್ಮಿಶ್ರಣಗೊಳಿಸಿದ ವರ್ಣ ಮೇಳದಿಂದ ಆಕೃತಿ ರಚನೆಗೆ ಒಲವು ತೋರಿದ ಹಿರೇಗೌಡರು, ಫೋಟೊರಿಯಲಿಸಂ ಸಮೀಪದಲ್ಲಿ ಅಭಿವ್ಯಕ್ತಿಸುವ ಕ್ರಮ ಇಲ್ಲಿದೆ. ವಸ್ತ್ರವಿನ್ಯಾಸದಲ್ಲಿ ಹಿರೇಗೌಡರು ಅಲ್ಲಲ್ಲಿ ಪ್ರಖರ ಬೆಳಕಿನ ಸೂಚ್ಯ ಸೆಳಕುಗಳನ್ನು ಆಕೃತಿಯಲ್ಲಿ ಸ್ಪರ್ಶಿಸಿದ್ದಾರೆ. ನೆರಳಿನ ಛಾಯೆಯನ್ನೂ ಸಹ ಸಮ್ಮಿಶ್ರ ಮಾದರಿಯ ತಂತ್ರವನ್ನು ಅನುಸರಿಸಿ ಆಕೃತಿಯನ್ನು ಪೂರ್ಣಗೊಳಿಸಿರುವ

ಬಗೆ ಇಲ್ಲಿದೆ. ಎರಡನೆಯದಾಗಿ ಹಿನ್ನೆಲೆಯಲ್ಲಿ ತಮ್ಮ ಮನೆಯ ಆವರಣದಲ್ಲಿರುವ ಅಲಂಕಾರಿಕ ಪುಷ್ಪಗಳನ್ನು ವಿವರವಾಗಿ ಅಧ್ಯಯನಕ್ಕೆ ಒಳಪಡಿಸಿರುವ ಹಿರೇಗೌಡರು ರೂಪದರ್ಶಿಯ ಕಣ್ಣೋಟಕ್ಕೆ ಭಂಗ ಬರದ ಹಾಗೆ ಪೂರಕವಾಗಿಯೇ ಅವುಗಳನ್ನು ದೃಶ್ಯಾತ್ಮಕವಾಗಿ ದುಡಿಸಿಕೊಂಡಿರುವ ಕ್ರಮಕ್ಕೆ ಹೆಚ್ಚು ಆಸ್ಥೆ ತೋರಿದ್ದಾರೆ, ಅವುಗಳಲ್ಲಿ ಸಹ ನೆರಳು ಬೆಳಕಿನ ಛಾಯೆಗಳ ಕಣ್ಣಾ ಮುಚ್ಚಾಲೆಯನ್ನು ಸ್ಥಿರವಾಗಿಸುವ ಆಶಯದಿಂದ ಈ ಕೃತಿ ಅನನ್ಯ ನೆಲೆಯಲ್ಲಿ ಪ್ರಾತಿನಿಧ್ಯ ಪಡೆಯುತ್ತದೆ.

**ಉಪಸಂಹಾರ**

ಹಿರೇಗೌಡರು ತೈಲವರ್ಣದ ಮಾಧ್ಯಮದಿಂದ ರಚಿಸಲ್ಪಟ್ಟ ಅಕಾಡೆಮಿಕ್ ಶೈಲಿಯ ಮೂರು ಪೂರ್ಣಭಾವಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಮೊದಲೆರಡು ಕಲಾಕೃತಿಗಳು ಪೂರ್ಣವಾಗಿ ಅಕಾಡೆಮಿಕ್ ನೆಲೆಯ ತಂತ್ರಗಳನ್ನು, ಸಂಯೋಜನಾ ಕ್ರಮಗಳನ್ನು ಹೊಂದಿದ್ದರೆ, ಮೂರನೆಯ ಪೂರ್ಣಭಾವಚಿತ್ರ ಫೋಟೋರಿಯಲಿಸಮ್ ತಂತ್ರಕ್ಕೆ ಒಳಪಟ್ಟಿದೆ. ಅಂದರೆ ರೂಪದರ್ಶಿಗೆ ರಚನೆಯ ಸಂದರ್ಭದಲ್ಲಿ ದೊರಕಿದ ಪ್ರಾತಿನಿಧ್ಯವನ್ನು ಹಿನ್ನೆಲೆಯಲ್ಲೂ ನೀಡಿದ ಹಿರೇಗೌಡರು ತಮ್ಮ ಶೈಲೀಕೃತ ಸಂಯೋಜನೆಗೆ ನಿದರ್ಶನವಾಗಿ ಈ ಕಲಾಕೃತಿಯನ್ನು ರಚಿಸಿದ್ದಾರೆ. ಪ್ರಾತ್ಯಕ್ಷಿಕೆ ಕಲಾಕೃತಿಗಳಿಗೂ, ಸ್ವ ಆಸಕ್ತಿಯಿಂದ ತಮ್ಮ ಮನೆಯಲ್ಲಿ ರಚಿಸಿದ ಕಲಾಕೃತಿಗಳೆರಡರ ಮಧ್ಯೆ ಕಂಡು ಬರುವ ವ್ಯತ್ಯಾಸವನ್ನು ಸಾಮಾನ್ಯ ನೋಡುಗನೂ ಸ್ಪಷ್ಟವಾಗಿ ಗುರುತಿಸಬಹುದಾಗಿದೆ. ಪ್ರಾತ್ಯಕ್ಷಿಕೆ ಕಲಾಕೃತಿಗಳಲ್ಲಿ ವೇಗೋತ್ಕರ್ಷದಿಂದ ಕೂಡಿದ ಬೀಸುಗಳನ್ನು ದುಡಿಸಿಕೊಂಡ ಹಿರೇಗೌಡರು ಸ್ವ ತೃಪ್ತಿಗಾಗಿ ರಚಿಸಿದ ಕಲಾಕೃತಿಗಳಲ್ಲಿ ವರ್ಣಗಳನ್ನು ಫೋಟೋ ರಿಯಲಿಸಮ್‌ನ ಶೈಲಿಯಲ್ಲಿ ಚಿತ್ರಿಸಿದ್ದಾರೆ. ಹೀಗೆ ಹಿರೇಗೌಡರು ಎರಡು ಬಗೆಯ ದೃಶ್ಯಾತ್ಮಕ ಪ್ರಯೋಗಗಳನ್ನು ನೀಡಿದ್ದು ಅವುಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

********

### ೨.೨.೨. ಸಾಮಾಜಿಕ ಪೂರ್ಣಭಾವಚಿತ್ರಗಳು

### ೧. ಕುವೆಂಪು (೧೯೯೭)

ರಾಷ್ಟ್ರಕವಿ ಕುವೆಂಪು ಕವಿಯಾಗಿ, ಸಾಹಿತಿಯಾಗಿ, ಮಹಾಕವಿಯ ಗೌರವವನ್ನು ಪಡೆದವರು. ಕುಪ್ಪಳ್ಳಿಯ ಸುಂದರ ಪರಿಸರದಲ್ಲಿ ಜನಿಸಿದ ಕುವೆಂಪು ಸಹಜವಾಗಿಯೇ ಪ್ರಕೃತಿ ಆರಾಧಕರು. ಪ್ರಕೃತಿಯೇ ಅವರಿಗೆ ಮೊದಲ ಗುರು. ಇವರಿಂದ ಅಭಿವ್ಯಕ್ತಗೊಂಡ ಕಾವ್ಯಗಳಿಂದ ಸ್ಫೂರ್ತಿ ಪಡೆದ ಹಿರೇಗೌಡರು ಕುವೆಂಪು ಅವರ ಕುರಿತ ಪೂರ್ಣಭಾವಚಿತ್ರವನ್ನು ಚಿತ್ರಿಸಿ ಅವರಿಗೆ ದೃಶ್ಯಾತ್ಮಕವಾದ ಗೌರವವನ್ನು ಸಲ್ಲಿಸಿದ್ದಾರೆ. ಈ ಭಾವಚಿತ್ರದಲ್ಲಿ ಹಿರೇಗೌಡರು ಕುವೆಂಪುರವರನ್ನು ಅತ್ಯಂತ ವಿವರವಾಗಿ ಚಿತ್ರಿಸಿರುವ ಕ್ರಮವನ್ನು ಫೋಟೋರಿಯಲಿಸಮ್ ಹಿನ್ನೆಲೆಯಲ್ಲಿ ನೋಡಬಹುದಾಗಿದೆ. ಕುವೆಂಪು ಅವರ ದೈಹಿಕ ವ್ಯಕ್ತಿತ್ವವನ್ನು ಸ್ಪಷ್ಟವಾಗಿ ಗ್ರಹಿಸಿರುವ ಹಿರೇಗೌಡರು ಅವರ ಕೇಶವಿನ್ಯಾಸ, ತೆಳುವಾದ ಉಡುಪುಗಳನ್ನು ಅತ್ಯಂತ ತಾಂತ್ರಿಕವಾದ ಕುಂಚಗಳನ್ನು ದುಡಿಸಿಕೊಂಡು ರಚಿಸಿದ್ದಾರೆ. ಅವರ ಅಂಗಾಂಗ ರಚನೆಯಲ್ಲೂ ಸಹ ಹಿರೇಗೌಡರು ಸ್ಪಷ್ಟ ಗ್ರಹಿಕೆ ಒಳಗಾಗಿ ಪ್ರಬುದ್ಧವಾದ ರಚನೆಯಲ್ಲಿ ಯಶಸ್ಸು ಗಳಿಸಿದ್ದಾರೆ. ಹಿನ್ನೆಲೆಯಲ್ಲಿ ಕುವೆಂಪು ಅವರಿಗೆ ಪ್ರೇರಣೆ ನೀಡಿದ ರಾಮಕೃಷ್ಣ ಪರಮಹಂಸರು, ಶಾರದಾ ಮಾತೆಯವರು ಹಾಗೂ ವಿವೇಕಾನಂದರ ಭಾವಚಿತ್ರಗಳನ್ನು ರಚಿಸಿದ ಹಿರೇಗೌಡರು, ಕುವೆಂಪು ಕಾವ್ಯದಲ್ಲಿ ಹಾಸು ಹೊಕ್ಕಾಗಿರುವ ಕುಪ್ಪಳಿಯ ರಮ್ಯ ಪರಿಸರವನ್ನು ಸೂಚ್ಯವಾಗಿ ಚಿತ್ರಿಸಿದ್ದಾರೆ. ಪ್ರಕೃತಿಯ ಆವರಣದಿಂದ ಬಂದ ಬೆಳಕಿನ ಛಾಯೆಗಳು ಕುವೆಂಪುರವರ ಒಳಾವರಣವನ್ನು ಪ್ರವೇಶಿಸಿದಾಗ ಉಂಟಾಗಿರುವ ಪ್ರತಿಫಲನವನ್ನು ಅತ್ಯಾಕರ್ಷಕವಾಗಿ ರಚಿಸಿದ್ದಾರೆ. ಕುವೆಂಪುರವರು ಕುಳಿತಿರುವ ಕಟ್ಟಿಗೆ ಕುರ್ಚಿ, ನೆಲಕ್ಕೆ ಊರಿರುವ ಅವರ ಪಾದ, ಮೇಜು, ಹೂವಿನ ಕುಂಡಲಗಳ ಪ್ರತಿಫಲನದ ಅಧ್ಯಯನ ಹಿರೇಗೌಡರಿಗೆ ಇರುವ ನೈಜ ಅನುಭವಕ್ಕೆ ಒಂದು ಸೂಕ್ತ ನಿದರ್ಶನವಾಗಿದೆ.









೧. ಕುವೆಂಪು. ೧೯೯೭

ಹಿರೇಗೌಡರು ರೂಪದರ್ಶಿಯನ್ನು ಚಿತ್ರಿಸುವಲ್ಲಿ ತೋರಿದ ಆಸಕ್ತಿಯನ್ನು ಮನೆಯ ಒಳಾವರಣದಲ್ಲಿರುವ ಅಲಂಕಾರಿಕ ವಸ್ತುಗಳಲ್ಲಿಯೂ ತೋರಿಸುತ್ತಾರೆ. ಇಲ್ಲಿ ಪ್ರತ್ಯೇಕವಾದ ಚೌಕದಲ್ಲಿ ತೋರಿಸಲ್ಪಟ್ಟಿರುವ ಮೇಜಿನ ರಚನೆಯನ್ನೇ ಅಧ್ಯಯನಕ್ಕೆ ಒಳಪಡಿಸಿದಾಗ ರಚನೆಯ ವಿಧಾನ, ಮೇಜಿನ ಮೇಲಿರುವ ಬಟ್ಟೆಯ ಪಾರದರ್ಶಕ ವಿನ್ಯಾಸ, ಗ್ರಂಥಗಳ ವಿನ್ಯಾಸ ರಚನೆಯನ್ನು ಬಹು ಸೂಕ್ಷ್ಮವಾಗಿ ಫೋಟೋ ರಿಯಲಿಸ್ಟರ ಹಾಗೆ ಚಿತ್ರಿಸಿರುವ ಹಿರೇಗೌಡರು ಮೇಜಿನ ಪ್ರತಿಫಲನವನ್ನು ನೆಲದಲ್ಲಿ ತೋರಿಸಿ, ಶುಭ್ರತೆಯ ಪರಿಸರದಲ್ಲಿ ಶುಭ್ರ ಮನಸ್ಸಿನ ಕುವೆಂಪು ಅವರನ್ನು ದೃಶ್ಯಾತ್ಮಕವಾಗಿ ತೋರ್ಪಡಿಸಿರುವ ಕ್ರಮ ನಿಜಕ್ಕೂ ಅನನ್ಯವಾದುದು.

********

### ೨.೨.೩. ಧಾರ್ಮಿಕ ಪೂರ್ಣಭಾವಚಿತ್ರಗಳು

**೧. ಶ್ರೀ ಶಿವಕುಮಾರ ಸ್ವಾಮಿಗಳು, ಸಿದ್ಧಗಂಗಾ ಮಠ, ತುಮಕೂರು** (೧೯೭೪)

ನಡೆದಾಡುವ ದೇವರೆಂದೇ ಸದ್ಭಕ್ತರಲ್ಲಿ ಪ್ರಸಿದ್ಧರಾಗಿರುವ ತುಮಕೂರಿನ ಸಿದ್ಧಗಂಗಾ ಮಠಾಧೀಶರಾದ ಶ್ರೀ ಶಿವಕುಮಾರ ಸ್ವಾಮಿಗಳವರನ್ನು ಹಿರೇಗೌಡರು ೩೪ ವರ್ಷಗಳ ಹಿಂದೆ ರಚಿಸಿರುವ ಈ ಪೂರ್ಣಭಾವಚಿತ್ರ ಸದ್ಯ ತುಮಕೂರಿನ ಸಿದ್ಧಗಂಗಾ ಶಿಕ್ಷಕರ ತರಬೇತಿ ಮಹಾವಿದ್ಯಾಲಯದಲ್ಲಿ ಸಂಗ್ರಹಗೊಂಡಿದೆ. ಮೂಲತಃ ತೈಲ ವರ್ಣದಲ್ಲಿ ರಚಿಸಿದ ಈ ಕಲಾಕೃತಿಯ ವರ್ಣ ಚಿತ್ರ ಅಂದಿನ ಸಂದರ್ಭದಲ್ಲಿ ಲಭ್ಯವಾಗಿಲ್ಲ. ಆಗಿನ್ನೂ ಕಪ್ಪು ಬಿಳುಪಿನ ಫೋಟೋಗಳ ಕಾಲ. ಇಲ್ಲಿನ ಕಪ್ಪು ಬಿಳುಪಿನ ಚಿತ್ರವನ್ನು ವರ್ಣ ಸಂಯೋಜನೆಯ ಹೊರತಾಗಿ ಅಧ್ಯಯನ ಮಾಡಲಾಗಿದೆ. ಪೂಜ್ಯರ ಚೈತನ್ಯಮಯವಾದ ವ್ಯಕ್ತಿತ್ವವನ್ನು ಪ್ರಬುದ್ಧವಾಗಿ ಗ್ರಹಿಸಿರುವ ಹಿರೇಗೌಡರು ಅವರ ಮುಖದ ಲಕ್ಷಣವನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಹಾಗೆಯೇ ಅವರು ಧರಿಸಿರುವ ವಸ್ತ್ರವಿನ್ಯಾಸವನ್ನು ಸಹ ಫೋಟೋ ರಿಯಲಿಸ್ಟ್‌ರ ಹಾಗೆ ಚಿತ್ರಿಸಿದ್ದಾರೆ. ಮೃದುವಾದ ಕಾವಿ ಬಟ್ಟೆಯನ್ನು ವಿಶಿಷ್ಟ ರೀತಿಯಲ್ಲಿ ವರ್ಣಗಳ ಸಮ್ಮಿಶ್ರಣದಿಂದ, ಕುಂಚದ ತಂತ್ರಗಾರಿಕೆಯಿಂದ ಅದರಲ್ಲಿ ಮೃದುತ್ವವನ್ನು ತಂದಿದ್ದಾರೆ.

**೨. ಶ್ರೀಗುರು ತಿಪ್ಪೇರುದ್ರಸ್ವಾಮಿಗಳು, ನಾಯಕನ ಹಟ್ಟಿ** (೧೯೭೭)

ಇದೊಂದು ವಿಶಿಷ್ಟವಾಗಿ ಸಂಯೋಜನೆಗೊಂಡ ಭಾವಚಿತ್ರ. ಫೋಟೋ ರಿಯಲಿಸ್ಟರಂತೆ ಶ್ರೀಗಳವರನ್ನು ಚಿತ್ರಿಸಿರುವ ಹಿರೇಗೌಡರು, ಶ್ರೀಗಳ ಮಹಾತ್ಮೆಯನ್ನು, ಕ್ಷೇತ್ರದ ಪರಿಸರವನ್ನು ಒಂದು ಶೈಲೀಕೃತ ಸಂಯೋಜನೆಯ ಮುಖಾಂತರ ತೋರ್ಪಡಿಸಿರುವ ಕ್ರಮವನ್ನು ಇಲ್ಲಿ ಕಾಣಬಹುದು.



೧. ಶ್ರೀ ಶಿವಕುಮಾರ ಸ್ವಾಮಿಗಳು, ಸಿದ್ಧಗಂಗಾ ಮಠ
ತುಮಕೂರು, ೧೯೭೪







೨. ಶ್ರೀಗುರು ತಿಪ್ಪೇರುದ್ರಸ್ವಾಮಿಗಳು
ನಾಯಕನಹಟ್ಟಿ, ೧೯೭೭



೩. ಬಸವಣ್ಣ, ೧೯೮೭



೪. ಶಿವಶರಣೆ ನೀಲಾಂಬಿಕೆ, ೧೯೮೭

ಆಧ್ಯಾತ್ಮಿಕ ಭಾವವನ್ನು ಪ್ರಬುದ್ಧವಾಗಿ ಗ್ರಹಿಸಿ ಅಭಿವ್ಯಕ್ತಪಡಿಸಿರುವ ಹಿರೇಗೌಡರು ಮುಖದಲ್ಲಿ ಫೋಟೋಜೆನಿಕ್ ಭಾವಕ್ಕೆ ಪೂರಕವಾದ ರಚನಾ ತಂತ್ರವನ್ನು ಅನುಸರಿಸಿ, ಅಂಗಾಂಗಗಲ್ಲಿ ವಿವರಕ್ಕೆ ಆಸ್ಪದ ನೀಡಿದ್ದಾರೆ. ಹಾಗೆಯೇ ಶ್ರೀಗಳ ವಸ್ತ್ರ ವಿನ್ಯಾಸದಲ್ಲಿಯೂ ವಿವರವಾದ ಮಡಿಕೆಗಳನ್ನು ಚಿತ್ರಿಸಿರುವುದರೊಂದಿಗೆ, ಅವಕಾಶದ ಮಧ್ಯದಲ್ಲಿ ಶ್ರೀಗಳ ಆಕೃತಿಯನ್ನು ರಚಿಸಿದ್ದಾರೆ. ಹಿನ್ನೆಲೆಯಲ್ಲಿ ಈಶ್ವರ ಲಿಂಗುವನ್ನು ಕೆಳಭಾಗದಲ್ಲಿ ಶ್ರೀಗಳ ಸ್ಮಾರಕವಾಗಿ ನಿರ್ಮಾಣಗೊಂಡಿರುವ ಗೋಪುರದ ವಿನ್ಯಾಸವನ್ನು, ಪರಿಸರವನ್ನು ಸೂಚ್ಯವಾಗಿ ತೋರ್ಪಡಿಸಲು ಮರದ ವಿನ್ಯಾಸವನ್ನು ಚಿತ್ರಿಸಿದ್ದಾರೆ. ಇಷ್ಟೆಲ್ಲ ಸಂಕೇತಗಳನ್ನು ಹಿನ್ನೆಲೆಯಾಗಿ ದುಡಿಸಿಕೊಂಡ ಹಿರೇಗೌಡರು ಅವುಗಳನ್ನು ಮಸುಕಾದ ನೆಲೆಯಲ್ಲಿ ಚಿತ್ರಿಸಿ ಆಕೃತಿಗೆ ಸ್ಪಷ್ಟತೆಯನ್ನು ಒದಗಿಸುತ್ತಾರೆ.

**೩. ಬಸವಣ್ಣ** (೧೯೮೭)

ಹಿರೇಗೌಡರ ಶರಣರ ಕುರಿತು ಅನೇಕ ಭಾವಚಿತ್ರಗಳನ್ನು ಮತ್ತು ಪೂರ್ಣಭಾವಚಿತ್ರಗಳನ್ನು ರಚಿಸಿದ್ದು, ಅವುಗಳಲ್ಲಿ ಮುಖ್ಯವಾಗಿ ಕ್ರಾಂತಿಕಾರಿ ಬಸವಣ್ಣನ ಮತ್ತು ನೀಲಾಂಬಿಕೆಯ ಪೂರ್ಣಭಾವಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ನಾವು ನಿತ್ಯ ನೋಡುವ ಬಸವಣ್ಣನು ಕಿರೀಟಧಾರಿಯಾಗಿದ್ದು, ಅದು ಅತ್ಯಂತ ಪ್ರಚಲಿತ ಪೂರ್ಣಭಾವಚಿತ್ರವಾಗಿ ಜನಮನದಲ್ಲಿ ಹಾಸುಹೊಕ್ಕಾಗಿದೆ. ಆದರೆ ಹಿರೇಗೌಡರು ಪ್ರಚಲಿತವಿರುವ ಭಾವಚಿತ್ರಕ್ಕೆ ವಿಭಿನ್ನವಾಗಿ ತಮ್ಮದೇ ಕಲ್ಪನೆಯಲ್ಲಿ ಬಸವಣ್ಣನ ಭಾವಚಿತ್ರವನ್ನು ರಚಿಸಿದ್ದಾರೆ. ಬಿಜ್ಜಳನ ಆಸ್ಥಾನದಲ್ಲಿ ಮಂತ್ರಿಯಾಗಿದ್ದ ಬಸವಣ್ಣನು ರಾಜ ಮರ್ಯಾದೆಯನ್ನು ತ್ಯಜಿಸಿ ವಿರಕ್ತ ಪರಂಪರೆಗೆ ಧುಮುಕಿದಾಗಿನ ಸಂದರ್ಭವನ್ನು ಚಿತ್ರಿಸಿದ್ದಾರೆ. ಸಂಪೂರ್ಣ ಶರಣ ಸ್ವರೂಪಿಯಾಗಿ ಹಿರೇಗೌಡರಿಂದ ರೂಪು ಪಡೆದ ಇಲ್ಲಿನ ಬಸವಣ್ಣನ ಪ್ರತಿಮೆ ಫೋಟೋ ರಿಯಲಿಸ್ಟ್ ನೆಲೆಯಲ್ಲಿ ರಚನೆಗೊಂಡದ್ದು. ಕೈಯಲ್ಲಿ ವಚನಗಳನ್ನು ಒಳಗೊಂಡ ತಾಳೆಗರಿಗಳ ಕಟ್ಟುಗಳನ್ನು ಹಿಡಿದುಕೊಂಡು ಶರಣ ಸಂಸ್ಕೃತಿಯನ್ನು ಪ್ರಸಾರ ಮಾಡುವ ಸ್ಥಿತಿಯ ಭಾವದಲ್ಲಿ ಈ ಪೂರ್ಣಭಾವಚಿತ್ರ ರಚನೆಗೊಂಡಿದೆ. ಮೃದುವಾದ ಆಧ್ಯಾತ್ಮಿಕ ಮುಖ ವಿನ್ಯಾಸ, ಆಕೃತಿಯ ವಸ್ತ್ರ ವಿನ್ಯಾಸಗಳು ಸ್ಪಷ್ಟ ಗ್ರಹಿಕೆಯ ಮಡಿಕೆಗಳ ರಚನೆಯಿಂದ ಈ ಕೃತಿ ಆಕರ್ಷಕ. ಹಿನ್ನೆಲೆಯಲ್ಲಿ ಪ್ರಭಾವಳಿಯಿಂದ ಆವೃತಗೊಂಡ ದಟ್ಟ ವರ್ಣ ಛಾಯೆ ಅವಕಾಶದ ತುಂಬೆಲ್ಲ ವಿವಿಧ ಶ್ರೇಣಿಯಲ್ಲಿ ಹರಡಿಕೊಂಡಿದೆ. ಕೆಳಗೆ ಶರಣರ ಭಕ್ತಿ ಸೂಚಕವಾಗಿ ಹೂವುಗಳನ್ನು ಚಿತ್ರಿಸಿರುವ ಹಿರೇಗೌಡರು ಒಟ್ಟಾರೆ ಶರಣ ನಿಲುವಿಗೆ ಪೂರಕವಾದ ಭಾವ ಪಕೃತಿಯನ್ನು ಅವಕಾಶದಲ್ಲಿ ಪಸರಿಸಿ ಒಂದು ಅನನ್ಯ ಕೃತಿಯನ್ನು ಲೋಕಾರ್ಪಣಗೊಳಿಸಿದ್ದಾರೆ.

**೪. ಶಿವಶರಣೆ ನೀಲಾಂಬಿಕೆ,** (೧೯೮೭)

ಬಸವಣ್ಣನ ಅನುಭವ ಮಂಟಪದಲ್ಲಿ ಮಹತ್ವದ ಸ್ಥಾನ ಪಡೆದವರಲ್ಲಿ ಶರಣೆ ನೀಲಾಂಬಿಕೆಯೂ ಕೂಡ ಒಬ್ಬಳು. ನೀಲಾಂಬಿಕೆ ಲಿಂಗ ಪೂಜೆಯಲ್ಲಿ ತಲ್ಲೀನಳಾದ ದೃಶ್ಯವನ್ನು ಹೊಂದಿದ ಈ ಕೃತಿ ಸ್ತ್ರೀ ವ್ಯಕ್ತಿತ್ವವನ್ನು ಪುರುಷ ವ್ಯಕ್ತಿಗಳಿಗಿಂತ ಹೇಗೆ ವಿಭಿನ್ನವಾಗಿ ರೂಪಿಸುತ್ತಾರೆ ಎಂಬುದಕ್ಕೆ ಈ



೫. ಅರಿಹಂತ, ೧೯೮೭



೬. ಶ್ರೀ ರಾಮಕೃಷ್ಣ ಪರಮಹಂಸ, ೧೯೮೮

ಕಲಾಕೃತಿ ಒಂದು ಸೂಕ್ತ ನಿದರ್ಶನ. ಸದೃಢ ಕಾಯದ ಶರಣತ್ವದ ಭಾವವನ್ನು ಹೊಂದಿದ ನೀಲಾಂಬಿಕೆಯ ಪ್ರತಿಮೆಯಲ್ಲಿ ಹಿರೇಗೌಡರು ಎಂದಿನ ಫೋಟೋರಿಯಲಿಸ್ಟರ ರಚನಾ ತಂತ್ರವನ್ನೇ ಪುನರಾವರ್ತಿಸಿದ್ದಾರೆ. ವಿವರವಾದ ಅಂಗಾಂಗಗಳಲ್ಲಿ ಶರಣತ್ವಕ್ಕೆ ಪೂರಕವಾದ ವರ್ಣ ಮೇಳಗಳ ಸಾಂಗತ್ಯವನ್ನು ಸಮರ್ಥವಾಗಿ ದುಡಿಸಿಕೊಂಡಿರುವ ಹಿರೇಗೌಡರು ಎಂದಿನಂತೆ ವಸ್ತ್ರ ವಿನ್ಯಾಸದಲ್ಲೂ ವಿವರವಾದ ರಚನಾ ತಂತ್ರವನ್ನು ಬಳಸಿಕೊಂಡು ಸೀರೆಯ ಪಾರದರ್ಶಕತೆಯನ್ನು ಅತ್ಯಂತ ಸುಸ್ಪಷ್ಟವಾಗಿ ಪ್ರಕಟಿಸಿದ್ದಾರೆ. ಇಂತಹ ಪಾರದರ್ಶಕ ಅನುಭವ ಬಸವಣ್ಣನವರ ಆಕೃತಿಯ ವಸ್ತ್ರ ವಿನ್ಯಾಸದಲ್ಲಿ ಕಂಡು ಬರುವುದಿಲ್ಲ. ಸ್ತ್ರೀ ಪುರುಷರ ಧರಿಸುವ ವಸ್ತ್ರಾಭರಣಗಳ ವ್ಯತ್ಯಾಸವನ್ನು ಸೂಕ್ಷ್ಮವಾಗಿ ಗ್ರಹಿಸಿ ಅನುಭವಕ್ಕೆ ತಂದುಕೊಂಡು ಅನುಭಾವಕ್ಕೆ ಪರಿವರ್ತಿಸುವ ಪ್ರಮಿತಿ ಹಿರೇಗೌಡರಲ್ಲಿರುವುದನ್ನು ಈ ಕೃತಿ ಪ್ರಕಟಿಸುತ್ತದೆ. ಆಕೃತಿಗೆ ನೀಡಿರುವ ನೈಜ ಸ್ಪರ್ಶ, ಕೃತಿಯಲ್ಲಿನ ಪೂಜಾ ಸಾಮಗ್ರಿಗಳಲ್ಲಿಯೂ ಪುನರಾವರ್ತನೆಯಾಗಿದೆ. ದಟ್ಟ ಹಿನ್ನೆಲೆಯಲ್ಲಿ ಆಕೃತಿಯನ್ನು ಸ್ಪಷ್ಟಗೊಳಿಸಿರುವ ಹಿರೇಗೌಡರು ಅಂದಿನ ಒಳಾವರಣವನ್ನು ಮಸುಕಾದ ನೆಲೆಯಲ್ಲಿ ಚಿತ್ರಿಸಿ ಒಟ್ಟಾರೆ ಕೃತಿಗೆ ದೃಶ್ಯಾತ್ಮಕ ಮೌಲ್ಯವನ್ನು ತಂದುಕೊಡುತ್ತಾರೆ.

**೫. ಅರಿಹಂತ, (೧೯೮೭)**

ಈ ಪೂರ್ಣಭಾವಚಿತ್ರ ಅಜಂತಾದ ಗುಹೆಗಳಲ್ಲಿ ರಚನೆಯಾಗಿರುವ ಅರಿಹಂತನನ್ನೇ ನೆನಪಿಸುತ್ತದೆ. ತೆಳು ಕೆಂಪು ವರ್ಣದ ಕಲ್ಲಿನಲ್ಲಿ ರಚಿತಗೊಂಡ ಮಹಾವೀರನನ್ನು ಚಿತ್ರಿಸಿದ್ದನ್ನು ದ್ವಿಮಾನದಲ್ಲಿ ರಚಿತಗೊಂಡ ಚಿತ್ರವಿದು. ಅತ್ಯಲ್ಪ ವರ್ಣಗಳ ಸಂಯೋಜನೆಯಿಂದ ಆಧ್ಯಾತ್ಮಿಕ ಮೌಲ್ಯಗಳನ್ನು ಪ್ರತಿಪಾದಿಸುವ ಪೂರ್ಣ ಭಾವಚಿತ್ರವೊಂದನ್ನು ಹೇಗೆ ಪ್ರಸ್ತುತ ಪಡಿಸಬಹುದು ಎಂಬುದಕ್ಕೆ ಈ ಕಲಾಕೃತಿ ಒಂದು ನಿದರ್ಶನವಾಗಬಲ್ಲದು. ಪದ್ಮಾಸನದಲ್ಲಿ ಕುಳಿತಿರುವ ಅರಿಹಂತನನ್ನು, ಯೋಗದ ಸಂಕೇತಗಳನ್ನು ದೇಹದ ಮೇಲೆ ಚಿತ್ರಿಸಿರುವ ಹಿರೇಗೌಡರು ಅವನಿಗೆ ಹಿನ್ನೆಲೆಯಲ್ಲಿ ವಿನ್ಯಾಸಯುಕ್ತ ಪ್ರಭಾವಳಿಯನ್ನು ಚಿತ್ರಿಸಿದ್ದಾರೆ. ಅದಕ್ಕೆ ಪೂರಕವಾಗಿ ಪೀಠದಲ್ಲಿ ಪುಷ್ಪಗಳನ್ನು, ಆನೆಗಳನ್ನು ಚಿತ್ರಿಸಿದ್ದು, ಕಲ್ಲಿನ ಪರಿಣಾಮವನ್ನು ವರ್ಣಗಳಲ್ಲಿ ತೋರ್ಪಡಿಸುವ ಮಹತ್ವದ ಪ್ರಯೋಗವಿದು.

**೬. ರಾಮಕೃಷ್ಣ ಪರಮಹಂಸರು, (೧೯೮೮)**

ಭಾರತ ಕಂಡ ಮಹಾನ್ ಸಂತರಲ್ಲಿ ರಾಮಕೃಷ್ಣ ಪರಮಹಂಸರೂ ಕೂಡ ಒಬ್ಬರು. ಆಧ್ಯಾತ್ಮಿಕ ವ್ಯಕ್ತಿತ್ವವುಳ್ಳ ರಾಮಕೃಷ್ಣರ ಭಾವಚಿತ್ರವನ್ನು ಹಿರೇಗೌಡರು ಫೋಟೋರಿಯಲಿಸ್ಟರ ನೆಲೆಯಲ್ಲಿಯೇ ಚಿತ್ರಿಸಿದ್ದಾರೆ. ರಾಮಕೃಷ್ಣರ ಅತ್ಯಂತ ಪ್ರಚಲಿತವಿರುವ ಭಾವಚಿತ್ರವೊಂದನ್ನು ಆಧಾರವಾಗಿಟ್ಟುಕೊಂಡು ಮರುಸೃಷ್ಟಿ ಮಾಡಿರುವ ಈ ಚಿತ್ರದಲ್ಲಿ ರಾಮಕೃಷ್ಣರ ಆಧ್ಯಾತ್ಮಿಕ ಮುಗ್ಧತೆಯನ್ನು ಹಿರೇಗೌಡರು ಬಹು ಸ್ಪಷ್ಟವಾಗಿ ಗ್ರಹಿಸಿದ್ದನ್ನು ಅವರ ಅಂಗರಚನೆಯಲ್ಲಿಯೇ ಕಾಣಬಹುದಾಗಿದೆ. ಅವರ ಮುಖದಲ್ಲಿ ಬಹು ಸೂಕ್ಷ್ಮ ರಚನಾ ತಂತ್ರವನ್ನು ಅನುಸರಿಸಿರುವ ಹಿರೇಗೌಡರು ಭಾವ ಸ್ಫುರಣಕ್ಕೆ ಅಗತ್ಯವಾದ ವರ್ಣಗಳ ಸಾಂಗತ್ಯದಿಂದ ರೂಪಿಸಿದ್ದಾರೆ. ರಾಮಕೃಷ್ಣರ ಕೇಶ ವಿನ್ಯಾಸ, ಮುಖ ರಚನೆಯಲ್ಲಿ

ಪೂರ್ಣವಾಗಿ ಆಧ್ಯಾತ್ಮಿಕ ಭಾವದ ಸ್ಪರ್ಶ ನೀಡಿದ್ದಾರೆ. ರಾಮಕೃಷ್ಣರ ಬಲಪಾರ್ಶ್ವದ ದೇಹ ಎಡ ಪಾರ್ಶ್ವಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿದ್ದು, ಅಂಗಾಂಗಳ ರಚನೆಯನ್ನು, ಅದಕ್ಕೆ ಹೊದ್ದುಕೊಂಡಿರುವ ವಸ್ತ್ರ ವಿನ್ಯಾಸದಲ್ಲಿ ಅವರ ಎಂದಿನ ರಚನಾ ತಂತ್ರಗಾರಿಕೆಯನ್ನೇ ಹೊಂದಿದೆ. ಎಂದಿನ ಸಂಯೋಜನಾ ಕ್ರಮವನ್ನು ಹೊಂದದ ಈ ಕೃತಿಯಲ್ಲಿ ಒಟ್ಟು ಕ್ಯಾನ್ವಾಸಿನ ವಿನ್ಯಾಸವನ್ನೇ ಬದಲುಗೊಳಿಸಿದ ಹಿರೇಗೌಡರು ಕ್ಯೂಬಿಸ್ಟ ಶೈಲಿಯಂತೆ ಧ್ಯಾನ ಮುದ್ರೆಯ ಸ್ವರೂಪವನ್ನು ನೀಡಿದ್ದಾರೆ.

**೭. ಮರುಳಸಿದ್ಧ, (೧೯೮೯)**

ಯಾವುದೇ ಬಗೆಯ ಚಿತ್ರಗಳ ಆಧಾರವಿಲ್ಲದೇ ಪುರಾಣಗಳ ಆಧಾರದ ಮೇಲೆ ಸಿರಿಗೆರೆಯ ಬೃಹನ್‌ಮಠದ ಮರುಳಸಿದ್ದೇಶ್ವರರನ್ನು ಹಿರೇಗೌಡರು ಕಲ್ಪಿಸಿಕೊಂಡು ಮೂರ್ತ ರೂಪ ನೀಡಿದ ಕೃತಿ ಇದು. ಸಾಂಕೇತಿಕವಾದ ಈಶ್ವರ ಮತ್ತು ಇಷ್ಟಲಿಂಗದ ವಿನ್ಯಾಸದ ಹಿನ್ನೆಲೆಯಲ್ಲಿ ಒಡಮೂಡಿದ ಮರುಳಸಿದ್ಧೇಶ್ವರರು ಇಷ್ಟಲಿಂಗ ಪೂಜಾನುಷ್ಠನದಲ್ಲಿ ತಲ್ಲೀನರಾಗಿದ್ದಾರೆ. ಫೋಟೋ ರಿಯಲಿಸ್ಟಿಕ್ ನೆಲೆಯಲ್ಲಿ ರೂಪಣಗೊಂಡ ಈ ಚಿತ್ರದಲ್ಲಿ ಹಿರೇಗೌಡರು ಆಧ್ಯಾತ್ಮಕ ಭಾವವನ್ನು ಮೈಮನಗಳಲ್ಲಿ ತುಂಬಿಸಿದ್ದಾರೆ. ಪ್ರಬುದ್ಧ ಅಂಗಾಂಗಗಳ ರಚನೆ, ಅದಕ್ಕೆ ಪೂರಕವಾದ ವಸ್ತ್ರ ವಿನ್ಯಾಸ, ರುದ್ರಾಕ್ಷಿಗಳನ್ನು ಅತ್ಯಂತ ನೈಜ ನೆಲೆಯಲ್ಲಿ ರಚಿಸಿದ್ದಾರೆ.

**೮. ಬಸವಣ್ಣ (೧೯೯೬)**

ಬಿಜ್ಜಳನ ಆಸ್ಥಾನದಿಂದ ಸಕಲ ರಾಜಭೋಗದಿಂದ ಪರಿತ್ಯಕ್ತಗೊಂಡ ಬಸವಣ್ಣ ತ್ರಿವೇಣಿ ಸಂಗಮದ ಹಿನ್ನೆಲೆಯ ಅನುಭವ ಮಂಟಪದಲ್ಲಿ ತಾಳೆಗರಿಗಳ ಮೇಲೆ ವಚನಗಳನ್ನು ಬರೆಯುತ್ತಿರುವ ದೃಶ್ಯವನ್ನು ಹೊಂದಿರುವ ಒಂದು ಸಂಯೋಜನೆ. ಈ ಕಲಾಕೃತಿಯೂ ಫೋಟೋರಿಯಲಿಸಮ್ ನೆಲೆಯಲ್ಲಿ, ಆದರೆ ಸೃಜನಾತ್ಮಕವಾದ ರಚನೆ. ಹಿನ್ನೆಲೆಯಲ್ಲಿ ತ್ರಿವೇಣಿ ಸಂಗಮವನ್ನು ಬಿಂಬಿಸುವಂಥ ನೀರಿನಿಂದ ಆವೃತವಾದ ಸುಂದರ ಪ್ರಕೃತಿ, ಮುನ್ನೆಲೆಯಲ್ಲಿ ಬಸವಣ್ಣನ ಪ್ರಚಲಿತ ಚಿತ್ರಕ್ಕಿಂತ ವಿಭಿನ್ನವಾಗಿ ಚಿತ್ರಿಸಿರುವ ಆಕೃತಿಯಲ್ಲಿ ಶರಣ ಸಂಸ್ಕೃತಿಯ ಭಾವವನ್ನು ಪ್ರಕಟಿಸಿದ್ದಾರೆ. ಅದಕ್ಕೆ ಪೂರಕವಾದ ವರ್ಣಗಳ ನಿರ್ವಹಣೆಯಿಂದ ಉತ್ತಮ ಸಂಯೋಜನಾ ಕ್ರಮವನ್ನು ಅನುಸರಿಸಿದ ಹಿರೇಗೌಡರು ಬಸವಣ್ಣನವರ ವಸ್ತ್ರ ವಿನ್ಯಾಸಗಳನ್ನು ನೈಜ ನೆಲೆಯಲ್ಲಿ ವೈಭವೀಕರಿಸಿದ್ದಾರೆ. ಕೈಯಲ್ಲಿ ಲೇಖನಿ, ತಾಳೆಗರಿಗಳ ರಚನೆಯನ್ನು ಶುಭ್ರ ವರ್ಣಗಳ ಸಾಂಗತ್ಯದಿಂದ ನೈಜ ರಚನಾ ತಂತ್ರಗಾರಿಕೆಯ ಆಧಾರದ ಮೇಲೆ ಆಕೃತಿಗೆ ಜೀವ ಕಳೆ ತುಂಬುವ ಪ್ರಯತ್ನವನ್ನು ಮಾಡಿದ್ದಾರೆ.

**೯. ಐರಣಿ ಸ್ವಾಮಿಗಳು, (೧೯೯೮)**

ರಾಣೇಬೆನ್ನೂರು ತಾಲೂಕಿನ ಐರಣಿ ಗ್ರಾಮದ ಹೊಳೆಮಠದ ಸ್ವಾಮಿಗಳ ಭಾವಚಿತ್ರವಿದು. ಪದ್ಮಾಸನದಲ್ಲಿ ರಚಿತಗೊಂಡ ಆಕೃತಿಯಲ್ಲಿ ಅಂದಿನ ಪೂಜ್ಯರ ಆಧ್ಯಾತ್ಮಿಕ ಕಳೆಯನ್ನು ಮುಖದಲ್ಲಿ ಸ್ಪಷ್ಟವಾಗಿ ಗ್ರಹಿಸಿರುವ ಹಿರೇಗೌಡರು, ಮುಖಾರವಿಂದದಲ್ಲಿ ಮಂದಹಾಸ ವಿವರಗಳು ಸ್ಫುರಿಸುವುದಕ್ಕೆ



೯. ಐರಣಿ ಸ್ವಾಮಿಗಳು, ೧೯೯೮



೧೦. ಶಿವಶರಣೆ ಅಕ್ಕಮಹಾದೇವಿ. ೨೦೦೪

ಪೂರಕವಾದ ವರ್ಣಗಳನ್ನು ದುಡಿಸಿಕೊಂಡಿದ್ದಾರೆ. ಅವರ ನೇತ್ರ, ಕೇಶವಿನ್ಯಾಸಗಳೆಲ್ಲವುಗಳಿಗೆ ಸಾತ್ವಿಕ ಭಾವ ತುಂಬಿದ್ದಾರೆ. ಬ್ರಹ್ಮಚರ್ಯವನ್ನು ಬಿಂಬಿಸುವ ಅಂಗಾಂಗಗಳಿಗೆ ಮೃದುವಾದ ಸ್ಪರ್ಶಾನುಭವದ ವರ್ಣ ತಂತ್ರಗಾರಿಕೆಯನ್ನು ದುಡಿಸಿಕೊಂಡಿರುವ ಹಿರೇಗೌಡರು ಆಕೃತಿಯ ಸ್ಪಷ್ಟತೆಗೆ ಪೂರಕವಾದ ಹಿನ್ನೆಲೆಯನ್ನು ದಟ್ಟವಾಗಿಸಿದ್ದು, ಎಂದಿನ ಭಾವಚಿತ್ರದ ರಚನೆಯ ಸಾಂಪ್ರದಾಯಿಕ ಶೈಲಿಯನ್ನೇ ಇಲ್ಲಿ ಅನುಸರಿಸಿದ್ದಾರೆ.

**೧೦. ಶಿವಶರಣೆ ಅಕ್ಕಮಹಾದೇವಿ,** (೨೦೦೪)

ಬಸವಣ್ಣನ ಅನುಭವ ಮಂಟಪದಲ್ಲಿ ಪ್ರಸಿದ್ಧ ಶರಣೆಯಾಗಿ ಬಾಳಿದ ಶಿವಶರಣೆ ಅಕ್ಕಮಹಾದೇವಿಯ ಪೂರ್ಣಭಾವಚಿತ್ರವಿದು. ದೇಹವನ್ನು ತನ್ನ ಕೇಶಗಳಿಂದಲೇ ಮುಚ್ಚಿಕೊಂಡ ಅಕ್ಕಮಹಾದೇವಿ ಲೋಕಕ್ಕೆ ಶರಣಾಮೃತವನ್ನು ಬೋಧಿಸುವ ಶೈಲಿಯಲ್ಲಿ ರಚಿತಗೊಂಡಿದ್ದಾಳೆ. ಶರಣತ್ವ ಭಾವ ಸಾಕಾರಗೊಂಡಿರುವ ಈ ಭಾವಚಿತ್ರದಲ್ಲಿ ಹಿರೇಗೌಡರು ನೈಜಕ್ಕೆ ಹತ್ತಿರವೆನಿಸುವ ಬಗೆಯಲ್ಲಿ ವರ್ಣಗಳನ್ನು ದುಡಿಸಿಕೊಂಡು, ಎಂದಿನ ಭಾವಚಿತ್ರ ರಚನಾ ಪದ್ಧತಿಯನ್ನೇ ಪುನರಾವರ್ತಿಸಿದ್ದಾರೆ. ಹಿನ್ನೆಲೆಯಲ್ಲಿ ಏಕಪ್ರಕಾರವಾದ ವರ್ಣ ಲೇಪನಕ್ಕೆ ಅವಕಾಶ ನೀಡದ ಹಿರೇಗೌಡರು ತಮ್ಮ ಎಂದಿನ ಪ್ರಾಕೃತಿಕ ವಿನ್ಯಾಸಗಳನ್ನು ಮಸುಕಾಗಿ ರಚಿಸುವುದರ ಮೂಲಕ ಆಕೃತಿಗೆ ಸ್ಪಷ್ಟತೆಯನ್ನು ಒದಗಿಸಿದ್ದಾರೆ.

**ಉಪಸಂಹಾರ**

ಹಿರೇಗೌಡರು ರಚಿಸಿದ ಧಾರ್ಮಿಕ ಹಿನ್ನೆಲೆಯ ೧೦ ಪೂರ್ಣಭಾವಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಶರಣರು, ಸಾಧಕರ ಭಾವಚಿತ್ರಗಳನ್ನು ಹಿರೇಗೌಡರು ರಚಿಸುವಾಗ ಎರಡು ಬಗೆಯ ನೆಲೆಯಲ್ಲಿ ಚಿತ್ರಿಸಿದ್ದು ಕಂಡು ಬರುತ್ತದೆ. ಮೊದಲನೆಯದು ಎಂದಿನ ಭಾವಚಿತ್ರ ರಚನಾ ಪದ್ಧತಿಯಂತೆ ಏಕ ಪ್ರಕಾರವಾದ ವರ್ಣಲೇಪನದ ಹಿನ್ನೆಲೆಯಲ್ಲಿ ಆಕೃತಿಯನ್ನು ಪ್ರಧಾನೀಕರಿಸುವುದು, ಇನ್ನೊಂದು ಶೈಲೀಕೃತವೆನ್ನಬಹುದಾದ ಹಿನ್ನೆಲೆ; ಅಂದರೆ ಹಿನ್ನೆಲೆಯಲ್ಲಿ ಪ್ರಾಕೃತಿಕ, ಧಾರ್ಮಿಕ, ಐತಿಹಾಸಿಕ ಮುಂತಾದವುಗಳ ರೂಪಾಂಶಗಳನ್ನು ಮಸುಕಾಗಿ ದುಡಿಸಿಕೊಳ್ಳುವುದರ ಮೂಲಕ ಆಕೃತಿಗೆ ಸಂಬಂಧಪಟ್ಟ ಸಾರಾಂಶವನ್ನು ವಿವರಿಸುವ ಬಗೆಯಲ್ಲಿ ಕೃತಿಗಳನ್ನು ರಚಿಸುವುದು ಕಂಡು ಬರುತ್ತದೆ. ಇನ್ನು ಆಕೃತಿಗಳಲ್ಲಿ ಎಂದಿನ ಫೋಟೋರಿಯಲಿಸ್ಟರ ತಂತ್ರಗಾರಿಕೆಯನ್ನೇ ದುಡಿಸಿಕೊಳ್ಳುವ ಹಿರೇಗೌಡರು ಸ್ತ್ರೀ ಮತ್ತು ಪುರುಷ ಆಕೃತಿಗಳ ಮೇಲಿನ ವಸ್ತ್ರವಿನ್ಯಾಸಗಳಲ್ಲಿ ವಿಭಿನ್ನತೆಯನ್ನು ತೋರ್ಪಡಿಸುತ್ತಾರೆ. ಅವರ ಸಾಮಾಜಿಕ ಚಿತ್ರಗಳಲ್ಲಿ ಕಂಡು ಬರುವ ಭಾವ ಸ್ಫುರಣೆಯಲ್ಲಿ ಸಾಂಸಾರಿಕತೆ ಪ್ರಕಟವಾದರೆ, ಧಾರ್ಮಿಕ ಭಾವಚಿತ್ರಗಳಲ್ಲಿ ಪೂರ್ಣವಾಗಿ ಆಧ್ಯಾತ್ಮಿಕ ಭಾವವನ್ನು ಸ್ಪಷ್ಟವಾಗಿ ಗ್ರಹಿಸಿ ಅಭಿವ್ಯಕ್ತಿಸುವ ಕ್ರಮವನ್ನು ಇಲ್ಲಿನ ಭಾವಚಿತ್ರಗಳಲ್ಲಿ ಕಾಣಬಹುದಾಗಿದೆ. ಒಟ್ಟಾರೆ ಅನನ್ಯ ನೆಲೆಯ ಧಾರ್ಮಿಕ ಭಾವಚಿತ್ರಗಳನ್ನು ರಚಿಸಿರುವ ಹಿರೇಗೌಡರು ಪ್ರತಿ ಭಾವಚಿತ್ರದಲ್ಲೂ ಪ್ರಯೋಗಾತ್ಮಕವಾದ ತಂತ್ರಗಳಿಗೆ ಒತ್ತು ಕೊಟ್ಟಿರುವುದನ್ನು ಗಮನಿಸಬಹುದಾಗಿದೆ.

### ೨.೨.೪. ಐತಿಹಾಸಿಕ ಪೂರ್ಣಭಾವಚಿತ್ರಗಳು

**ರಾಜಾ ವೀರ ಮದಕರಿನಾಯಕ (೧೯೯೭)**

ಚಿತ್ರದುರ್ಗದ ಹುಲಿ ರಾಜಾ ವೀರ ಮದಕರಿನಾಯಕನ ಭಾವಚಿತ್ರವಿದು.ಅರಮನೆಯ ಒಳಾವರಣದಲ್ಲಿ ನಿಂತ ಭಂಗಿಯಲ್ಲಿ ರಚಿಸಿರುವ ಮದಕರಿನಾಯಕನ ಪ್ರತಿಮೆ ಹಿರೇಗೌಡರ ಕಲ್ಪನೆಯ ಕುಂಚದಲ್ಲಿ ಅರಳಿದ್ದು. ಸಕಲ ರಾಜಭೋಗತ್ವದ ವಸ್ತ್ರಾಭರಣಗಳಿಂದ ಅಲಂಕೃತನಾದ ದೃಢಕಾಯದ ವ್ಯಕ್ತಿತ್ವವನ್ನು ಹೊಂದಿದ ಮದಕರಿನಾಯಕನ ಪ್ರತಿಮೆಯಲ್ಲಿ ಕೃತಿಕಾರರ ಸೂಕ್ಷ್ಮಾತಿ ಸೂಕ್ಷ್ಮವಾದ ಕಲಾ ನೈಪುಣ್ಯತೆಯನ್ನು ಗಮನಿಸಬಹುದಾಗಿದೆ ಎಂದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ. ಮದಕರಿನಾಯಕನ ರಾಜಗಾಂಭೀರ್ಯವನ್ನು ಸ್ಪಷ್ಟವಾಗಿ ಗ್ರಹಿಸಿರುವ ಹಿರೇಗೌಡರು ಪ್ರತಿಮೆಯಲ್ಲಿ ಪ್ರತಿ ಅಂಗಾಂಗವನ್ನು ಪ್ರಮಾಣಬದ್ಧವಾಗಿ, ವಿವರಬದ್ಧವಾಗಿ ನಿರೂಪಿಸಿದ್ದಾರೆ. ಹಾಗೆಯೇ ವಸ್ತ್ರಾಭರಣಗಳಲ್ಲಿ, ಮುಖದಲ್ಲಿ ರಾಜಭೋಗದ ಲಕ್ಷಣಗಳನ್ನು ಸ್ಪಷ್ಟಗೊಳಿಸಿದ್ದಾರೆ. ನಾಯಕನ ವಸ್ತ್ರಗಳಲ್ಲಿ ರೇಷ್ಮೆ ಜರತಾರಿಯ ಲಕ್ಷಣವನ್ನು ಬಹು ತಾಂತ್ರಿಕವಾಗಿ, ಪಾರದರ್ಶಕವಾಗಿ ಚಿತ್ರಿಸಿದ್ದಾರೆ. ಹಿನ್ನೆಲೆಯಲ್ಲಿ ಅರಮನೆಯ ಅಲಂಕಾರಿಕ ವಿನ್ಯಾಸಗಳನ್ನು, ಅಲಂಕಾರಿಕ ಕುಂಡಲಗಳನ್ನು ಮಸುಕಾದ ಎಲೆಯಲ್ಲಿ ಚಿತ್ರಿಸಿ ಅಂದಿನ ವೈಭೋಗದ ಕಲ್ಪನೆಯನ್ನು ಸಾಕಾರಗೊಳಿಸಿದ್ದಾರೆ. ಹಿನ್ನೆಲೆಯ ಕಿಟಕಿ ಚೌಕಟ್ಟಿನೊಳಗೆ ಚಿತ್ರದುರ್ಗ ಬೆಟ್ಟದ ಕಲ್ಲುಬಂಡೆಗಳ ಸಮೂಹವನ್ನು ಸೂಚ್ಯವಾಗಿ ಚಿತ್ರಿಸಿದ್ದಾರೆ. ಹೀಗೆ ಹಿರೇಗೌಡರು ರಚಿಸಿರುವ ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಮತ್ತು ಐತಿಹಾಸಿಕ ಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

********



ರಾಜಾ ವೀರ ಮದಕರಿ ನಾಯಕ, ೧೯೯೭

**ಭಾಗ ೩. ಪ್ರಕೃತಿ ಚಿತ್ರಗಳು**

ಹಿರೇಗೌಡರು ಕಲಾಶಾಲೆಯ ಪ್ರಾಚಾರ್ಯರಾಗಿದ್ದ ಸಂದರ್ಭದಲ್ಲಿ ಕಲಾಶಾಲೆಯಿಂದ ಹಮ್ಮಿಕೊಳ್ಳುತ್ತಿದ್ದ ಯೋಜನಾ ಪ್ರವಾಸದ ಪರಿವೀಕ್ಷಣೆಗೆ ಹೋದಾಗ ವಿದ್ಯಾರ್ಥಿಗಳಿಗೆ ಪ್ರಕೃತಿಯ ಕುರಿತಾದ ಪ್ರಾತ್ಯಕ್ಷಿಕೆಗಳನ್ನು ಬಹು ಸಂಖ್ಯೆಯಲ್ಲಿ ನಡೆಸಿಕೊಟ್ಟಿದ್ದಾರೆ. ಅಷ್ಟೇ ಅಲ್ಲದೇ ಅವರೇ ಬೇರೆ ಬೇರೆ ಸಂದರ್ಭದಲ್ಲಿ ಬೇರೆ ಬೇರೆ ಸ್ಥಳಗಳಿಗೆ ಹೋದಾಗ ಸ್ವ ತೃಪ್ತಿಗಾಗಿ ಬಹುಸಂಖ್ಯೆಯ ಪ್ರಕೃತಿಚಿತ್ರಗಳನ್ನು ರಚಿಸಿದ್ದುಂಟು. ಅಂತಹ ಹಲವಾರು ಚಿತ್ರಗಳಲ್ಲಿ ಕೆಲವು ಆಯ್ದ ಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅವುಗಳಲ್ಲಿ ಜಲವರ್ಣ, ಅಕ್ರಿಲಿಕ್ ವರ್ಣ, ತೈಲ ವರ್ಣ ಹಾಗೂ ಮಿಶ್ರ ಮಾಧ್ಯಮದ ಕಲಾಕೃತಿಗಳನ್ನು ಈ ಅಧ್ಯಯನ ಒಳಗೊಂಡಿದೆ.

**೩:೧. ಜಲವರ್ಣ**

**೧. ಹಂಪಿ ಪರಿಸರ (೧೯೮೨)**

ವಿಜಯನಗರದ ಪರಿಸರ ಪಾಂಪೆ ನಗರದಷ್ಟೇ ಸುಂದರ. ಕಲಾವಿದರಿಗೆ ಸ್ವರ್ಗವಾದ ಹಂಪಿಯಲ್ಲಿ ಎಲ್ಲಿ ಕೂತರೂ ಒಂದಲ್ಲ ಒಂದು ಬಗೆಯ ದೃಶ್ಯ ಚೌಕಟ್ಟುಗಳು ದೊರೆಯುತ್ತವೆ. ಅಂತಹ ಚೌಕಟ್ಟಿನಲ್ಲಿ ಪ್ರಾಪ್ತವಾಗುವ ಪ್ರಕೃತಿಯನ್ನು ಕಾಗದದಲ್ಲಿ ಒಡಮೂಡಿಸಿದರೆ ಒಂದು ದೃಶ್ಯ ಕಾವ್ಯವಾಗಿ ಹೊರಹೊಮ್ಮುತ್ತದೆ ಎಂಬುದಕ್ಕೆ ಹಿರೇಗೌಡರು ರಚಿಸಿದ ಹಂಪಿ ಪರಿಸರದ ಅನೇಕ ಚಿತ್ರಗಳೇ ನಿದರ್ಶನ. ಅಂತಹ ಚಿತ್ರಗಳಲ್ಲಿ ಒಂದಾದ ಈ ಚಿತ್ರ ಪುರಂದರ ಮಂಟಪದ ಸೂಚ್ಯ ರಚನೆ. ಹಿನ್ನೆಲೆಯಲ್ಲಿ ದೂರದ ಕಡಿದಾದ ಬೆಟ್ಟಗಳು ನೈಜ ವರ್ಣಗಳಿಗಿಂತ ವಿಭಿನ್ನವಾದ ವರ್ಣಗಳಲ್ಲಿ ಸೂಚ್ಯವಾಗಿ ರಚನೆಗೊಂಡಿವೆಯಲ್ಲ ಎಂದು ಭಾವಿಸುವ ಮುನ್ನ ಯಥಾದರ್ಶನದ ಸಂದರ್ಭದಲ್ಲಿ ಆಕಾಶದ ವಾತಾವರಣದಲ್ಲಿ ದೂರದ ಬೆಟ್ಟಗಳೆಲ್ಲ ನೀಲ ವರ್ಣದಲ್ಲಿ ಗೋಚರಿಸುವ ಸತ್ಯವನ್ನು



೧. ಹಂಪಿ ಪರಿಸರ, ೧೯೮೨



೨. ಮುಂಜಾನೆಯ ಮಂಜು, ೧೯೮೨



೩. ಮುಂಜಾನೆಯ ಮಂಜು, ೧೯೮೨




೪. ಕೃಷ್ಣ ಎಸ್ಟೇಟ್, ಚಿಕ್ಕಮಗಳೂರು, ೧೯೮೩

ಇಲ್ಲಿ ಕಾಣಬಹುದು. ಇನ್ನು ಕಾಗದದ ಬಲಭಾಗದಲ್ಲಿ ಸಂಯೋಜನೆಗೊಂಡಿರುವ ಪುರಂದರ ಮಂಟಪ ನೆರಳಿನ ಛಾಯೆಯಲ್ಲಿ ದಟ್ಟವರ್ಣದ ಲೇಪನದ ಮೂಲಕ ವಿನ್ಯಾಸಗೊಂಡಿದೆ. ಅದರ ಆಚೆ ಈಚೆ ತುಂಗಭದ್ರೆಯ ಹರಿವು ಕಾಗದದ ಬಿಳಿಯ ಅವಕಾಶದಲ್ಲಿ ವರ್ಣ ರಹಿತವಾಗಿ ಗೋಚರಿಸುತ್ತದೆ. ಒಟ್ಟು ಪರಿಸರದ ಉದ್ದಗಲಗಳನ್ನು ಬಿಂಬಿಸುವುದಕ್ಕೆ ಮತ್ತು ನಿರ್ಜನ ವಾತಾವರಣವನ್ನು ಚಿತ್ರದಿಂದ ಮುಕ್ತಗೊಳಿಸುವುದಕ್ಕಾಗಿ ಅಲ್ಲಲ್ಲಿ ಮಾನವಾಕೃತಿಗಳನ್ನು ವಿವಿಧ ಕ್ರಿಯೆಗಳಲ್ಲಿ ತೊಡಗಿರುವಂತೆ ಸೂಚ್ಯವಾದ ಕುಂಚದ ಬೀಸುವಿಕೆಗಳಿಂದ ಚಿತ್ರಿಸಲಾಗಿದೆ. ಸಂಯೋಜನೆಯ ದೃಷ್ಟಿಯಿಂದ ಮತ್ತು ದಟ್ಟವಾದ ಕುಂಚದ ಬೀಸುವಿಕೆಗಳ ನಿಲುವಿನಿಂದ ಈ ಕಲಾಕೃತಿ ವಿಶಿಷ್ಟ ನೆಲೆಯ ಸ್ಥಾನವನ್ನು ಪಡೆಯುತ್ತದೆ.

**೨. ಮುಂಜಾನೆಯ ಮಂಜು, (೧೯೮೨)**

ಅತ್ಯಂತ ಅಲ್ಪವರ್ಣಗಳ ಸಾಂಗತ್ಯದಿಂದ ಒಡಮೂಡಿದ ಪ್ರಕೃತಿ ಚಿತ್ರ. ದಾವಣಗೆರೆ ಕಲಾಶಾಲೆ ಆವರಣ ಚಳಿಗಾಲದ ಸಂದರ್ಭದಲ್ಲಿ ಕಂಡದ್ದನ್ನು ಹಿರೇಗೌಡರು ಅತ್ಯಂತ ಸೂಚ್ಯವಾಗಿ ಮತ್ತು ತಾಂತ್ರಿಕವಾಗಿ ರಚಿಸಿದ ರಮ್ಯ ಪ್ರಕೃತಿ ಚಿತ್ರವಿದು. ಕಾಗದದಕ್ಕೆ ಮೊದಲು ನೀರಿನ ಲೇಪನ ಮಾಡಿ ನಂತರದಲ್ಲಿ ಹಳದಿ ವರ್ಣವನ್ನು ಲೇಪಿಸಿ, ಅಲ್ಲಲ್ಲಿ ಹಸಿರು ವರ್ಣದ ಸ್ಪರ್ಶ ನೀಡಿ, ಕುಂಚದ ಹಿಂಬದಿಯಿಂದ ರೇಖೆಗಳನ್ನು ಎಳೆದಾಗ ಅವು ಸಸ್ಯಗಳ ಕಾಂಡಗಳಂತೆ ಕಂಡುಬರುತ್ತವೆ. ಇಲ್ಲಿ ವಿವರವಾದ ಪ್ರಾಕೃತಿಕ ವಿನ್ಯಾಸಗಳು ಗೋಚರವಾಗದಿದ್ದರೂ, ಚಳಿಗಾಲದ ಸಂದರ್ಭದಲ್ಲಿ ಪ್ರಕೃತಿಯ ಸಸ್ಯಗಳು ಕಾಣುವ ಬಗೆಯನ್ನು ಹಿರೇಗೌಡರು ತಮ್ಮ ವಿಶಿಷ್ಟ ತಂತ್ರದ ಬಗೆಯಿಂದ ಸೆರೆ ಹಿಡಿಯುವ ಚಾಣಾಕ್ಷತನವನ್ನು ಇಲ್ಲಿ ಕಾಣಬಹುದಾಗಿದೆ. ಸಂಯೋಜನೆ ದೃಷ್ಟಿಯಿಂದ ಈ ಕಲಾಕೃತಿ ಮಹತ್ವದ್ದಾಗುತ್ತದೆ. ಅವಕಾಶದ ಕೆಳಭಾಗದಲ್ಲಿ ಸಸ್ಯಗಳ ವಿನ್ಯಾಸ, ಹಾಗೆಯೇ ಮೇಲ್ಭಾಗದಲ್ಲಿ ಮುಸುಕಿದ ಮೋಡಗಳ ರಚನೆಗಳೆರಡೂ ಸಮ್ಮಿಶ್ರವಾಗಿ ಮುಂಜಾನೆಯ ಇಬ್ಬನಿಯ ಭಾವ ಇದಕ್ಕೆ ದಕ್ಕುತ್ತದೆ.

**೩. ಮುಂಜಾನೆಯ ಮಂಜು, (೧೯೮೨)**

ಈ ಚಿತ್ರವೂ ಸಹ ದಾವಣಗೆರೆ ಕಲಾಶಾಲೆಯ ಮುಂಭಾಗದ ರಸ್ತೆಯಲ್ಲಿ ಕುಳಿತು ಹಿರೇಗೌಡರು ರಚಿಸಿದ್ದು. ಹಿಂದಿನ ಚಿತ್ರದ ಶೀರ್ಷಿಕೆಯನ್ನು ಈ ಚಿತ್ರವೂ ಸಹ ಹೊಂದಿದ್ದರೂ ಅದಕ್ಕಿಂತ ಭಿನ್ನವಾದ ಅನುಭವವನ್ನು ನೀಡುತ್ತದೆ. ತಂತಿಬೇಲಿ, ದೂರದಲ್ಲಿ ಗೋಚರವಾಗುವ ನೀರಿನ ತೊಟ್ಟಿ ಇವೆರಡರ ಮಧ್ಯೆ ಜನರ ಆಕೃತಿಗಳು ಚಿತ್ರಕ್ಕೆ ಪುಟವಿಟ್ಟಂತೆ ರಚನೆಯಾಗಿವೆ. ಎಡ ಪಾರ್ಶ್ವದಲ್ಲಿ ಎತ್ತರದ ಗಿಡಗಂಟೆಗಳು ನೀರಿನ ಹರಡುವಿಕೆ ತಂತ್ರದಿಂದ ರಚನೆಯಾಗಿವೆ. ಚಿತ್ರದ ಭೂ ರೂಪಗಳು ಆಕಾಶಕ್ಕೆ ವಿರುದ್ಧವಾಗಿ ಅರ್ಧ ವರ್ತುಳಾಕಾರದಲ್ಲಿ ಸಂಯೋಜನೆಗೆ ಒಳಪಡಿಸಿದ ಕ್ರಮ, ಹಿನ್ನೆಲೆ ಮತ್ತು ಮುನ್ನೆಲೆಯ ವಾತಾವರಣಕ್ಕೆ ಪೂರಕವಾಗಿ ನೀರಿನ ತೊಟ್ಟಿಯನ್ನು ಅತ್ಯಂತ ಸೂಚ್ಯವಾಗಿಸಿದ ಹಿರೇಗೌಡರು ಇಡೀ ಚಿತ್ರವನ್ನು ನೀರಿನ ಹರಡುವಿಕೆ ತಂತ್ರದಿಂದ ರಚಿಸಲ್ಪಟ್ಟು, ಚಳಿಗಾಲದ ವಾತಾವರಣದಲ್ಲಿ ನಗರದ ವಾತಾವರಣ ಗೋಚರವಾಗುವ ಬಗೆಯನ್ನು ದೃಶ್ಯಾತ್ಮಕವಾಗಿ ಇಲ್ಲಿ ಪ್ರಕಟಿಸಿದ್ದಾರೆ.



೫. ಹಳೇಬೀಡು ಪರಿಸರ, ೧೯೮೩



೬. ಮಡಿಕೇರಿ ಪರಿಸರ, ೧೯೯೨

**೪. ಕೃಷ್ಣ ಎಸ್ಟೇಟ್, ಚಿಕ್ಕಮಗಳೂರು, (೧೯೮೩)**

ಕರ್ನಾಟಕದ ಗಿರಿಶೃಂಗಗಳ ಸ್ವರ್ಗ, ಕಾಫಿ ನಾಡು ಎಂದು ಪ್ರಸಿದ್ಧವಾಗಿರುವ ಚಿಕ್ಕಮಗಳೂರು ಬಳಿಯ ಕೃಷ್ಣ ಎಸ್ಟೇಟ್‌ನ ಚಿತ್ರವಿದು. ಹಿನ್ನೆಲೆಯಲ್ಲಿ ಕಡಿದಾದ ಬೆಟ್ಟ, ಅದರ ಕೆಲಭಾಗದಲ್ಲಿ ತೋಟ, ಎಸ್ಟೇಟ್ ಮನೆ, ಇದರ ಮುಂಭಾಗದಲ್ಲಿ ಕಾಫಿ ಬೀಜಗಳನ್ನು ಒಣಗಿಸುವ ಆವರಣ ಮತ್ತು ಆ ಕಾರ್ಯದಲ್ಲಿ ತೊಡಗಿಸಿಕೊಂಡಿರುವ ಕಾರ್ಮಿಕರು ಈ ಚಿತ್ರದ ಪ್ರಮುಖ ವಸ್ತುಗಳು. ಹಿಂದಿನ ಎರಡೂ ಚಿತ್ರಗಳಿಗಿಂತ ವಿಭಿನ್ನ, ಚಿತ್ರ ೧ರಂತೆ ರಚನಾ ತಂತ್ರಗಾರಿಕೆಯನ್ನು ಹೊಂದಿದ ಈ ಚಿತ್ರದಲ್ಲಿ ಎಲ್ಲ ಬಗೆಯ ವರ್ಣಗಳು ಕುಂಚದ ಪ್ಯಾಚ್‌ಗಳಲ್ಲಿ ರಚನೆಗೊಂಡಿವೆ. ಸೂಚ್ಯವಾಗಿ ಚಿತ್ರಿತಗೊಂಡ ಬೆಟ್ಟ, ವಿವರಕ್ಕೆ ದಕ್ಕುವ ಮನೆಗಳು, ಅದರ ಮುನ್ನೆಲೆಯಲ್ಲಿ ಸೂಚ್ಯವಾಗಿ ಗೋಚರವಾಗುವ ಕಾರ್ಮಿಕರನ್ನು ಹಿರೇಗೌಡರು ಯಥಾದರ್ಶನದ ಸ್ಪಷ್ಟ ಅನುಭವದ ಹಿನ್ನೆಲೆಯಲ್ಲಿ ಅನುಭಾವಗೊಳಿಸಿರುವ ಪ್ರಕ್ರಿಯೆಯನ್ನು ಇಲ್ಲಿ ಕಾಣಬಹುದು.

**೫. ಹಳೇಬೀಡು ಪರಿಸರ, (೧೯೮೩)**

ಹೊಯ್ಸಳ ಶಿಲ್ಪಕಲೆಯ ತವರು ಹಳೇಬೀಡಿನ ಕೆರೆಯ ದೃಶ್ಯವಿದು. ಅಲ್ಪ ನೀರಿನಿಂದ ಆವೃತವಾಗಿರುವ ಕೆರೆಯ ಹಿನ್ನೆಲೆಯಲ್ಲಿ ಬಹುಭಾಗ ಆಕಾಶವೇ ರಚನೆಗೊಂಡು. ಇಡೀ ಚಿತ್ರಕ್ಕೆ ನಾಯಕನಂತೆ ಒಣಗಿದ ಮರವೊಂದರ ಕಾಂಡ ಪರಿಸರದ ಉದ್ದಗಲಗಳನ್ನು ಅಳೆಯುತ್ತದೆ. ಇಲ್ಲಿ ನೀರಿನ ಹರಡುವಿಕೆಯ ತಂತ್ರವನ್ನು ಅನುಸರಿಸಿದ ಹಿರೇಗೌಡರು ಕುಂಚದ ದಟ್ಟ ಬೀಸುಗಳಿಂದ ಮೂಡುವ ವರ್ಣಗಳಿಗೆ ಆಕಾರ ಕಟ್ಟುವ ತಂತ್ರವನ್ನು ಪಾಲಿಸಿದ್ದಾರೆ. ಕಾಗದದ ಎಡ ಮತ್ತು ಬಲ ಪಾರ್ಶ್ವಗಳಿಂದ ಒಳ ಭಾಗದಲ್ಲಿ ಹರಿದಾಡಿದ ಕುಂಚದ ಬೀಸುಗಳು ನೀರಿನ ಪರಿಣಾಮವನ್ನು, ದೂರದ ಬೆಟ್ಟಗಳನ್ನು, ಮೈಮೇಲೆ ಬೀಳುತ್ತಿರುವಂತಹ ಅನುಭವವನ್ನು ನೀಡುವ ಮುಸುಕಿದ ಕಾರ್ಮೋಡವನ್ನು ಸೃಷ್ಟಿಸಿವೆ. ಹತ್ತಿರ ಮತ್ತು ದೂರದ ದೃಶ್ಯಾತ್ಮಕ ಅನುಭವಕ್ಕೆ ಇದೊಂದು ಮಹತ್ವದ ದೃಶ್ಯಕಾವ್ಯವಾಗಿದೆ.

**೬. ಮಡಿಕೇರಿ ಪರಿಸರ, (೧೯೯೨)**

ಕಾವೇರಿಯ ಉಗಮಕ್ಕೆ ತನ್ನ ಉದರವನ್ನು ಕಾಪಿಟ್ಟುಕೊಂಡ ಕೊಡಗಿನ ಪರಿಸರಕ್ಕೆ ಮಾರು ಹೋಗದವರು ವಿರಳ. ಹಿರೇಗೌಡರು ಅಕಾಡೆಮಿಯ ಕಲಾಶಿಬಿರವೊಂದಕ್ಕೆ ಹೋದಾಗ ಮಡಿಕೇರಿಯ ಮಲೆಗಳನ್ನು, ಸುಂದರ ಕಾನನಗಳನ್ನು ಚಿತ್ರಿಸುವ ಅವಕಾಶವನ್ನು ಈ ಚಿತ್ರದ ಮೂಲಕ ಸಾರ್ಥಕಪಡಿಸಿಕೊಂಡಿದ್ದಾರೆ. ಈ ಹಿಂದಿನ ಚಿತ್ರಗಳಿಗಿಂತ ತುಸು ಭಿನ್ನ ಮಾದರಿಯಲ್ಲಿ ರೂಪುಗೊಂಡ ಈ ಚಿತ್ರದಲ್ಲಿ ಮೊದಲಿಗೆ ರೇಖೆಗಳಿಂದ ಚಿತ್ರದ ಆಕಾರಗಳೆಲ್ಲವನ್ನೂ ಚಿತ್ರಿಸಿಕೊಂಡು, ನಂತರದಲ್ಲಿ ಅವುಗಳಿಗೆ ವರ್ಣಗಳನ್ನು ತುಂಬಿದ ಹಿರೇಗೌಡರು ಬಹು ವರ್ಣಗಳನ್ನು ದುಡಿಸಿಕೊಂಡು ಪ್ರಕೃತಿಯ ದೂರ ಮತ್ತು ಸಾಮಿಪ್ಯದ ವಿವರಗಳನ್ನು ವಿವಿಧ ಶ್ರೇಣಿಗಳಲ್ಲಿ ಚಿತ್ರೀಕರಿಸಿದ್ದಾರೆ. ಈ ಚಿತ್ರದಲ್ಲಿ ಆಳದ ಅನುಭವ (ಬೆಟ್ಟದ ಇಳಿಜಾರು) ತೋರ್ಪಡಿಸಲು ಹಿರೇಗೌಡರು ಹಳದಿ ವರ್ಣವನ್ನು



೭. ದಾವಣಗೆರೆ ಕಲಾಶಾಲೆ, ೧೯೯೪



೮. ಬಾದಾಮಿ ಬಂಡೆ, ೧೯೯೭

ಪಾರದರ್ಶಕವಾಗಿ ದುಡಿಸಿಕೊಂಡು ದೂರದ ಗುಡ್ಡಗಳನ್ನು ನೀಲವರ್ಣದಿಂದ ರಚಿಸಿ ದೂರದ ಅನುಭವವನ್ನು ನೀಡುತ್ತಾರೆ. ಸಾಮಿಪ್ಯದ ಅನುಭವ ನೀಡುವುದಕ್ಕೆ ದಟ್ಟ ವರ್ಣಗಳಿಂದ ರಚಿಸಲ್ಪಟ್ಟ ಗಿಡ ಮರಗಳು ಹಿನ್ನೆಲೆಯನ್ನು ಹಿಂದಕ್ಕೆ ತಳ್ಳಿಹಾಕಿದ ಯಥಾದರ್ಶನದ ದಟ್ಟ ಅನುಭವದ ಪಾಠ ಇಲ್ಲಿ ವೇದ್ಯವಾಗುತ್ತದೆ.

**೭. ದಾವಣಗೆರೆ ಕಲಾಶಾಲೆ, (೧೯೬೪)**

೧೯೬೪ರಲ್ಲಿ ಸ್ಥಾಪನೆಗೊಂಡ ದಾವಣಗೆರೆ ಕಲಾಶಾಲೆ ಹಿರೇಗೌಡರಿಗೆ ಆಶ್ರಯ ಮತ್ತು ಆಡಳಿತಾತ್ಮಕ ಅನುಭವ ನೀಡಿದ ಮಾತೃ ಸಂಸ್ಥೆ. ಈ ಶಾಲೆಯ ಮುಂಭಾಗದ ದೃಶ್ಯವನ್ನು ಮೇ ಮಾಸದಲ್ಲಿ ಚಿತ್ರಿಸಿರುವ ಹಿರೇಗೌಡರು ಅಂದಿನ ಪ್ರಾಕೃತಿಕ ವಾತಾವರಣವನ್ನು ಸ್ಪಷ್ಟವಾಗಿ ಗ್ರಹಿಸಿಕೊಂಡು ಈ ಚಿತ್ರದಲ್ಲಿ ಅದೆಲ್ಲವನ್ನೂ ಪ್ರಕಟಿಸಿದ್ದಾರೆ. ಚಿತ್ರದ ಮುಖ್ಯ ಆಶಯ ಹಿರೇಗೌಡರು ನಿರ್ಮಿಸಿದ ಕುಂಚಬ್ರಹ್ಮನ ಶಿಲ್ಪ. ಅದಕ್ಕೆ ಪೂರಕವಾಗಿ ಶಾಲೆಯ ದ್ವಾರ, ಅಲಂಕಾರಿಕ ಗಿಡ, ಮರಗಳು. ಕುಂಚಬ್ರಹ್ಮನ ಶಿಲ್ಪದಲ್ಲಿ ವಿವರವಾದ ಅಧ್ಯಯನಕ್ಕೆ ಆಸ್ಥೆಯನ್ನು ತೋರಿದ ಹಿರೇಗೌಡರು, ಅದರ ಸುತ್ತಲೂ ಬೆಳೆಸಲಾದ ಅಲಂಕಾರಿಕ ಗಿಡಗಳನ್ನು ಸೂಚ್ಯವಾಗಿಸಿದ್ದಾರೆ. ದಟ್ಟ ಬೀಸುಗಳಿಂದ ಎಲ್ಲ ಬಗೆಯ ಆಕೃತಿಗಳನ್ನು ರಚಿಸಿರುವ ಕೃತಿಕಾರರು ಒಟ್ಟು ಚಿತ್ರದಲ್ಲಿ ಶುಭ್ರವರ್ಣಗಳ ಸಾಂಗತ್ಯವನ್ನು ಕಾಪಿಟ್ಟುಕೊಂಡು ಬಂದಿದ್ದಾರೆ. ವಿಶೇಷವಾಗಿ ಅವಕಾಶದ ಎಡ ಮತ್ತು ಬಲ ಪಾರ್ಶ್ವದಲ್ಲಿ ಚಿತ್ರಿಸಲಾದ ಮೇ ಫ್ಲವರ್‌ನ ಮರಗಳು ಚಿತ್ರದ ಒಟ್ಟಂದಕ್ಕೆ ಮೆರಗು ತಂದಿವೆ.

**೮. ಬಾದಾಮಿ ಬಂಡೆ, (೧೯೯೬)**

ಚಾಲುಕ್ಯರು ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸಿದ್ದು ಇಂದಿನ ಬಾದಾಮಿ ತಾಲೂಕಿನ ಪರಿಸರದಲ್ಲಿ. ತುಂಬ ರಕ್ಷಣಾತ್ಮಕ ನೆಲೆಯನ್ನು ಒದಗಿಸಿರುವ ಇಲ್ಲಿನ ಮರಳು ಮಿಶ್ರಿತ ಕಲ್ಲು ಬಂಡೆಗಳು ಶಿಲ್ಪಗಳಿಗೆ, ದೇಗುಲಗಳಿಗೆ ಮೈಯೊಡ್ಡಿ ನಿಂತಿವೆ. ಬಾದಾಮಿಯ ಮೇಣ ಬಸದಿ ಬಳಿ ಇರುವ ಬೃಹತ್ ಏಕ ಶಿಲಾ ಬಂಡೆಯನ್ನೇ ತಮ್ಮ ಚಿತ್ರದ ಮುಖ್ಯ ಆಶಯವನ್ನಾಗಿಸಿಕೊಂಡ ಹಿರೇಗೌಡರು ಕುಂಚದ ಬೀಸುವಿಕೆಗಳನ್ನು ಬಂಡೆಯ ಮೈವಳಿಕೆಗೆ ಪೂರಕವಾಗಿ ದುಡಿಸಿಕೊಂಡು ಅದಕ್ಕೆ ತ್ರಿಮಾನದ ಭಾವ ಬರುವಂತೆ ಯತ್ನಿಸಿದ್ದಾರೆ. ದೂರದಲ್ಲಿನ ಗುಡ್ಡಗಳನ್ನು, ಸಸ್ಯಗಳನ್ನು ತೆಳು ವರ್ಣದ ತಂತ್ರದಿಂದ ರಚಿಸಿದ್ದು, ಅವು ಬಂಡೆಗಳನ್ನು ಸಾಮಿಪ್ಯಗೊಳಿಸುತ್ತವೆ. ಬಹು ವರ್ಣಗಳಿಂದ ರೂಪಣಗೊಂಡ ಇಲ್ಲಿನ ಬಂಡೆಗಳು, ಸಸ್ಯಗಳು ಚಿತ್ರದ ಒಟ್ಟು ಸಂಯೋಜನೆಗೆ, ಒಟ್ಟಂದಕ್ಕೆ ಮೆರಗು ತಂದಿವೆ.

**೯. ಹಂಪಿ ಪರಿಸರ (೧೯೯೭)**

ಹಂಪಿ ಪರಿಸರದಲ್ಲಿರುವ ಪುರಂದರ ಮಂಟಪದ ಚಿತ್ರವಿದು. ಎತ್ತರದ ಪ್ರದೇಶವೊಂದರಿಂದ ಕಂಡುಂಡ ಪ್ರಕೃತಿಯನ್ನು ರೇಖಾತ್ಮಕವಾಗಿ ಚಿತ್ರಿಸಿ, ನಂತರದಲ್ಲಿ ವರ್ಣ ಲೇಪನ ಮಾಡಿದ ತಂತ್ರವನ್ನು ಅನುಸರಿಸಿರುವ ಕೃತಿ ಇದು. ಇಡೀ ಹಂಪಿ ಪರಿಸರವನ್ನು ವಿಶಾಲ ದೃಷ್ಟಿಕೋನದಿಂದ




೯. ಹಂಪಿ ಪರಿಸರ, ೧೯೯೭



೧೦. ಬನಶಂಕರಿ ಪುಷ್ಕರಣಿ, ೨೦೦೦

ಚಿತ್ರಿಸಿದ ಈ ಕೃತಿಯಲ್ಲಿ ಪುರಂದರ ಮಂಟಪ, ಅದರ ಮುಂದೆ ಹರಿಯುವ ತುಂಗಭದ್ರಾ ನದಿ, ದೂರದಲ್ಲಿನ ಬೆಟ್ಟ ಇವೆಲ್ಲವುಗಳನ್ನು ಒಂದೇ ಕೋನದಿಂದ ಗ್ರಹಿಸಿಕೊಂಡು ಅಭಿವ್ಯಕ್ತಗೊಳಿಸುವ ಕ್ರಮಕ್ಕೆ ಇದೊಂದು ಸೂಕ್ತ ನಿದರ್ಶನ. ಪಾರದರ್ಶಕ ತಂತ್ರಗಾರಿಕೆಯಿಂದ ಮತ್ತು ಶುಭ್ರವರ್ಣಗಳ ಸಾಂಗತ್ಯದಿಂದ ವಿಶಾಲವಾಗಿ ಸಂಯೋಜಿಸಿದ ಈ ದೃಶ್ಯದಲ್ಲಿ ಸಸ್ಯಗಳ, ಕಲ್ಲುಗಳ ಮತ್ತು ಮಾನವಾಕೃತಿಗಳ ರಚನೆಯಿಂದ ದೂರ ಮತ್ತು ಸಾಮಿಪ್ಯದ ಅನುಭವವನ್ನು ಕಾಣಬಹುದು. ಅವಕಾಶದ ಕೆಳಭಾಗದಲ್ಲಿ ದಟ್ಟ ಛಾಯೆಯಿಂದ ಪ್ರಾರಂಭವಾಗುವ ವರ್ಣಗಳ ಶ್ರೇಣಿ ಹಿನ್ನೆಲೆಯತ್ತ ಸಾಗಿದ ಹಾಗೆ ತೆಳುವಾಗುತ್ತ ಹೋಗುವ ಕ್ರಮ ವಿಶೇಷ. ಇಂತಹ ವಿಶಿಷ್ಟ ನಿರ್ವಹಣೆಗಳಿಂದ ರಚಿಸಿದ ಬಹುಸಂಖ್ಯಾತ ಕೃತಿಗಳು ಹಿರೇಗೌಡರಿಂದ ರಚನೆಗೊಂಡಿದ್ದು, ಅಂತಹವುಗಳಲ್ಲಿ ಈ ಕೃತಿಯೂ ಒಂದಾಗಿದೆ.

**೧೦. ಬನಶಂಕರಿ ಪುಷ್ಕರಣಿ, (೨೦೦೦)**

ಚಾಲುಕ್ಯರ ಆರಾಧ್ಯ ದೇವತೆ ಶ್ರೀ ಬನಶಂಕರಿಗೆ ಚಾಲುಕ್ಯ ಶೈಲಿಯಲ್ಲಿ ನಿರ್ಮಾಣಗೊಳಿಸಿದ ಪುಷ್ಕರಣಿಯ ಚಿತ್ರವಿದು. ಈ ಚಿತ್ರದ ಮುಖ್ಯ ಆಶಯ ಬನಶಂಕರಿ ದೇವಿಯ ಮುಂದೆ ಪ್ರತಿಷ್ಠಾಪಿಸಿರುವ ಗರುಡಗಂಬದ ಆಕೃತಿ. ವಿಶಿಷ್ಟ ವಾಸ್ತುಶಿಲ್ಪದಿಂದ ಕೂಡಿದ ಗರುಡಗಂಭವನ್ನು ವಿವರವಾಗಿ ಚಿತ್ರಿಸಿರುವ ಹಿರೇಗೌಡರು ಪುಷ್ಕರಣಿಯಲ್ಲಿ ಪುಣ್ಯಸ್ನಾನ ಮಾಡುತ್ತಿರುವವರನ್ನೂ ಸೂಚ್ಯವಾಗಿ ಚಿತ್ರಿಸಿದ್ದಾರೆ. ಗರುಡಗಂಭದ ಎರಡೂ ಪಾರ್ಶ್ವಗಳಲ್ಲಿ ಪುಷ್ಕರಣಿಯ ಮೇಲ್ಭಾಗದಲ್ಲಿರುವ ಇತರ ವಾಸ್ತುಗಳನ್ನು, ಹಿನ್ನೆಲೆಯಲ್ಲಿ ಬನಶಂಕರಿ ಪರಿಸರವನ್ನು ಪ್ರತಿನಿಧಿಸುವ ಗಿಡಮರಗಳನ್ನು ಸೂಚ್ಯ ಶೈಲಿಯಲ್ಲಿ ಪಾರದರ್ಶಕ ತಂತ್ರದಿಂದ ಚಿತ್ರಿಸಿದ್ದಾರೆ. ಪುಷ್ಕರಣಿಯ ನೀರಿನ ಅಲೆಗಳಲ್ಲಿ ವಾಸ್ತುಗಳ ಪ್ರತಿಬಿಂಬಗಳನ್ನು ಮಸುಕಾಗಿಸಿದ್ದು, ಒಟ್ಟು ವಾಸ್ತು ನಿರ್ಮಿತಿಗಳನ್ನು ಕಾಗದದ ಮಧ್ಯ ಅಡ್ಡ ರೇಖೆಗೆ ಸಮಾನಾಂತರವಾಗಿ ಸಂಯೋಜಿಸಿದ್ದಾರೆ.

**೧೧. ಕಾವಲು ಗೋಪುರ, (೨೦೦೩)**

ವಿಜಯನಗರ ಅರಸರಿಂದ ನಿರ್ಮಿಸಿದ ಅನೇಕ ಸ್ಮಾರಕಗಳಲ್ಲಿ ಹಂಪಿಯ ಕಮಲ್ ಮಹಲ್ ಆವರಣದಲ್ಲಿರುವ ಚಾರಿತ್ರಿಕ ಕಾವಲುಗೋಪುರವನ್ನು ಪ್ರಧಾನವಾಗಿರಿಸಿಕೊಂಡು ರಚಿಸಲಾದ ಈ ಚಿತ್ರದಲ್ಲಿ ಎರಡು ಬಗೆಯ ತಂತ್ರಗಳನ್ನು ಅಳವಡಿಸಿಕೊಳ್ಳಲಾಗಿದೆ. ಆಕಾಶ ಮತ್ತು ಕೋಟೆಯ ಗೋಡೆಗಳಲ್ಲಿ ವರ್ಣವನ್ನು ಹರಡಿಸುವ ತಂತ್ರ ಮತ್ತು ಇನ್ನೊಂದು ಕುಂಚದ ಬೀಸುಗಳನ್ನು ಸ್ಮಾರಕದ ಮೈವಳಿಕೆಗೆ ಪೂರಕವಾಗಿ ದುಡಿಸಿಕೊಂಡಿರುವ ತಂತ್ರ. ಹೀಗೆ ತಂತ್ರಗಳೆರಡರ ಸಾಂಗತ್ಯದಿಂದ ಪ್ರಕೃತಿ ಚಿತ್ರವೊಂದರ ಪ್ರಬುದ್ಧ ರಚನೆಯ ಸಾಧ್ಯತೆಗಳನ್ನು ಇಲ್ಲಿ ಕಾಣಬಹುದಾಗಿದೆ. ಕಾಗದದ ಬಲಭಾಗದಲ್ಲಿ ಗೋಪುರವನ್ನು ಚಿತ್ರಿಸಿ ಇನ್ನುಳಿದ ಅವಕಾಶದಲ್ಲಿ ಕೋಟೆಯ ಗೋಡೆ ಹಿನ್ನೆಲೆಯಲ್ಲಿ ಬಂಡೆಗಲ್ಲುಗಳನ್ನು ಸಂಯೋಜಿಸಲಾದ ಈ ರೂಪಾಂಶದಲ್ಲಿ ಗೋಪುರದಲ್ಲಿನ ಪ್ರತಿಯೊಂದು ವಾಸ್ತು ವಿನ್ಯಾಸವನ್ನು ರಚಿಸಲಾಗಿದೆ. ಗೋಪುರದಲ್ಲಿ ಅಲ್ಲಲ್ಲಿ ಕಾಲನ ತುಳಿತಕ್ಕೆ ಸಿಕ್ಕು ನಾಶವಾದ



೧೧. ಕಾವಲು ಗೋಪುರ, ೨೦೦೩



೧೨. ಮುಂಜಾನೆಯ ಮಂಜು, ಹಂಪಿ, ೨೦೦೩

ಭಾಗವನ್ನು ಸಹ ಇಲ್ಲಿ ಕಾಣಬಹುದಾಗಿದೆ. ಹಿನ್ನೆಲೆಯಲ್ಲಿ ಬಂಡೆಗಳನ್ನು ದಟ್ಟವಾದ ಕುಂಚದ ಬೀಸುಗಳಿಂದ, ಮುನ್ನೆಲೆಯಲ್ಲಿ ಗಿಡಗಂಟಿಗಳ ವಿನ್ಯಾಸಗಳನ್ನು ಪಾರದರ್ಶಕವಾಗಿ ಚಿತ್ರಿಸಲಾಗಿದೆ.

**೧೨. ಮುಂಜಾನೆಯ ಮಂಜು, ಹಂಪಿ,** (೨೦೦೩)

ಚಿತ್ರ೨ರ ತಂತ್ರವನ್ನೇ ಅನುಸರಿಸಿರುವ, ಕನ್ನಡ ವಿಶ್ವವಿದ್ಯಾಲಯದ ಅತಿಥಿಗೃಹವನ್ನು ಸೂಚ್ಯವಾಗಿ ಅಳವಡಿಸಿಕೊಂಡ ಒಂದು ಪ್ರಕೃತಿ ಚಿತ್ರ. ನೀರನ್ನು ಕಾಗದದ ಮೇಲೆ ಹರಡಿ, ಅಲ್ಲಲ್ಲಿ ಶುಭ್ರ ವರ್ಣಗಳನ್ನು ಕುಂಚದಿಂದ ಸ್ಪರ್ಶಿಸಿ, ಸಸ್ಯಗಳ ಕಾಂಡಗಳನ್ನು ರೂಪಿಸುವಲ್ಲಿ ಮಾತ್ರ ಕುಂಚದಿಂದ ರೇಖೆಗಳನ್ನು ಎಳೆಯುವುದರ ಮೂಲಕ ಪ್ರಕೃತಿ ಚಿತ್ರವೊಂದರಲ್ಲಿ ಚಳಿಗಾಲದ ಮುಂಜಾವನ್ನು ದೃಶ್ಯಾತ್ಮಕವಾಗಿ ಬರಮಾಡಿಕೊಂಡ ಹಿರೇಗೌಡರು ಒಂದು ಸುಂದರ ವರ್ಣ ಲೋಕವನ್ನೇ ಸೃಷ್ಟಿಸಿದ್ದಾರೆ. ಬಿಳಿ ಅವಕಾಶ ನೀರ ತೊರೆಯಂತೆ ಕಾಣುವ ಈ ಚಿತ್ರದಲ್ಲಿ ಬೆಟ್ಟವೊಂದರಲ್ಲಿ ಕನ್ನಡ ವಿಶ್ವವಿದ್ಯಾಲಯದ ಅತಿಥಿಗೃಹವನ್ನು ಅತ್ಯಂತ ಸೂಚ್ಯವಾಗಿಸಿ, ಅದಕ್ಕೆ ಪೂರಕವಾಗಿ ನೀಲಾಕಾಶವನ್ನು ಚಿತ್ರಿಸಿ ದೂರದ ವಾಯುಮಂಡಲದ ಅನುಭವವನ್ನು ತೋರಿಸುತ್ತಾರೆ. ಕಾಗದದ ಎಡ ಪಾರ್ಶ್ವದಲ್ಲಿ ದಟ್ಟ ವರ್ಣಗಳ ಸಾಂಗತ್ಯದಿಂದ ರಚಿಸಿದ ಸಸ್ಯಗಳ ರಚನೆಯಿಂದ ಸಾಮಿಪ್ಯದ ಅನುಭವವನ್ನು ದೃಶ್ಯಾತ್ಮಕವಾಗಿ ವಿವರಿಸುವ ಹಿರೇಗೌಡರ ಒಂದು ಅನನ್ಯ ಕೃತಿ ಎನ್ನಬಹುದು.

**ಉಪಸಂಹಾರ**

ಹಿರೇಗೌಡರು ತಮ್ಮ ವರ್ಣಮಯ ಬದುಕಿನಲ್ಲಿ ರಚಿಸಿದ ಆಯ್ದ ೧೨ ಜಲವರ್ಣದ ಪ್ರಕೃತಿ ಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಲ್ಲಿನ ಪ್ರಕೃತಿ ಅಧ್ಯಯನ ಚಿತ್ರಗಳಲ್ಲಿ ಬಹುತೇಕವಾಗಿ ಪ್ರಕೃತಿ ಮತ್ತು ಪ್ರಕೃತಿಯ ಭಾಗವಾಗಿರುವ ಮಾನವ ನಿರ್ಮಿತ ಸ್ಮಾರಕಗಳನ್ನು ಚಿತ್ರಿಸುವಲ್ಲಿ ಹಿರೇಗೌಡರ ಆಸಕ್ತಿ ಸಹಜವಾಗಿ ಕೇಂದ್ರೀಕೃತಗೊಂಡಿದೆ. ಯಥಾದರ್ಶನವನ್ನು ಪ್ರಬುದ್ಧವಾಗಿ ಗ್ರಹಿಸಿಕೊಂಡು ಅದನ್ನು ಇಲ್ಲಿನ ಚಿತ್ರಗಳಲ್ಲಿ ಅಷ್ಟೇ ಪ್ರಬುದ್ಧವಾಗಿ ದುಡಿಸಿಕೊಂಡಿರುವುದನ್ನು ಸಂಯೋಜನಾ ಕ್ರಮದಲ್ಲಿ, ವರ್ಣಗಳಲ್ಲಿ, ವಿನ್ಯಾಸಗಳಲ್ಲಿ ಕಾಣಬಹುದಾಗಿದೆ. ಹಿರೇಗೌಡರು ಇಲ್ಲಿ ಮೂರು ಬಗೆಯ ಜಲವರ್ಣ ರಚನಾ ತಂತ್ರಗಳನ್ನು ದುಡಿಸಿಕೊಂಡಿದ್ದಾರೆ. ಒಂದು ನೀರನ್ನು ಕಾಗದದ ಮೇಲೆ ಲೇಪಿಸಿ, ಒದ್ದೆಯಾಗಿರುವಾಗಲೇ ಕುಂಚದಿಂದ ವರ್ಣಗಳನ್ನು ಸ್ಪರ್ಶಿಸಿ ಆ ವರ್ಣವನ್ನು ಹರಡುವಂತೆ ಮಾಡಿರುವುದು, (ಉದಾ : ಚಿತ್ರ ೨,೩ ಮತ್ತು ೧೨) ಎರಡನೆಯದು ಕುಂಚದ ಬೀಸುವಿಕೆಗಳನ್ನೇ ಆಕೃತಿಗಳಿಗೆ ಪೂರಕವಾಗಿ (ಉದಾ : ಚಿತ್ರ ೭,೮,೧೦,೧೧ ಮುಂ)ದುಡಿಸಿಕೊಳ್ಳುವ ತಂತ್ರ, ಮೂರನೆಯದು ರೇಖಾತ್ಮಕವಾಗಿ ಪ್ರಕೃತಿಯನ್ನು ಚಿತ್ರಿಸಿ ನಂತರದಲ್ಲಿ ವರ್ಣಗಳನ್ನು ಲೇಪಿಸುವ (ಉದಾ: ಚಿತ್ರ ೬, ೯) ಕ್ರಮಗಳನ್ನು ಇಲ್ಲಿ ಅನುಸರಿಸಿದ್ದಾರೆ. ಮೊದಲನೆಯ ತಂತ್ರವನ್ನು ಇವರು ಬಹುತೇಕವಾಗಿ ಚಳಿಗಾಲದಲ್ಲಿ ರಚಿಸುವ, ಇಬ್ಬನಿಯ ವಾತಾವರಣದ ಸಂದರ್ಭವನ್ನು ಚಿತ್ರಿಸುವ ನಿಟ್ಟಿನಲ್ಲಿ ದುಡಿಸಿಕೊಂಡರೆ, ಎರಡು ಮತ್ತು ಮೂರನೆಯ ಕ್ರಮವನ್ನು ಬಿಸಿಲಿನ ಸಂದರ್ಭದಲ್ಲಿ ರಚಿಸುವ ಚಿತ್ರಗಳಲ್ಲಿ ಅನುಸರಿಸಿದ್ದಾರೆ. ಒಟ್ಟಿನಲ್ಲಿ ಅನುರೂಪವಾದ

ಸಂಯೋಜನೆಯೊಂದಿಗೆ ಪಾರದರ್ಶಕವಾಗಿ, ಅಪಾರದರ್ಶಕವಾಗಿ ಹೀಗೆ ಇನ್ನೂ ಹಲವಾರು ತಂತ್ರಗಳನ್ನು ಬಳಸಿಕೊಂಡು ರಚಿಸುವ ಹಿರೇಗೌಡರ ಪ್ರಕೃತಿ ಚಿತ್ರಗಳು ಅನನ್ಯ ಅನುಭವವನ್ನು ನೀಡುತ್ತವೆ.

********

## ೩.೨. ಅಕ್ರಿಲಿಕ್ ವರ್ಣ/೩.೩. ತೈಲವರ್ಣ

ಹಿರೇಗೌಡರು ಜಲವರ್ಣದಲ್ಲಿ ಪ್ರಕೃತಿ ಚಿತ್ರಗಳನ್ನು ರಚಿಸಿದಂತೆ ಅಕ್ರಿಲಿಕ್ ವರ್ಣದಲ್ಲಿ ಬಹಳಷ್ಟು ಪ್ರಕೃತಿ ಚಿತ್ರಗಳನ್ನು ರಚಿಸಿದ್ದಾರೆ. ಆಯ್ದ ಅಕ್ರಿಲಿಕ್ ಮಾಧ್ಯಮದ ಪ್ರಕೃತಿ ಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ೧. ಬನಾರಸ (೧೯೯೦)

ಹಿರೇಗೌಡರು ಪ್ರಕೃತಿ ಚಿತ್ರಗಳನ್ನು ಎರಡು ಬಗೆಯಲ್ಲಿ ರಚಿಸಿದ್ದು, ಈಗಾಗಲೇ ಈ ಮೊದಲಿನ ಅಧ್ಯಾಯದಲ್ಲಿ ಅಧ್ಯಯನಕ್ಕೆ ಒಳಪಡಿಸಿದ ಪ್ರಕೃತಿ ಚಿತ್ರಗಳು ಯಥಾ ನೆಲೆಯಲ್ಲಿ ಚಿತ್ರಿಸಿರುವುದಾದರೆ, ಈ ಅಧ್ಯಾಯದಲ್ಲಿನ ಚಿತ್ರಗಳು ಯತಾರ್ಥತೆಯ ಜೊತೆಗೆ ಸೃಜನಾತ್ಮಕ ನೆಲೆಯ ಸಮ್ಮಿಶ್ರದಿಂದ ರಚಿಸಿದ ಕೃತಿಗಳಾಗಿವೆ. ವಿಶ್ವವಿಖ್ಯಾತ ಹಿಂದೂ ಯಾತ್ರಾ ಸ್ಥಳವಾದ ಕಾಶಿಯ (ಬನಾರಸ) ದೇವಾಲಯಗಳ ವಿನ್ಯಾಸಗಳ ಜೊತೆಗೆ ನಗರ ಬದುಕಿನ ಸನ್ನಿವೇಶಗಳು ಸಹ ಇಲ್ಲಿ ಚಿತ್ರಿತಗೊಂಡಿವೆ. ಕಾಗದದ ಮೇಲ್ಭಾಗದಲ್ಲಿ ದೇಗುಲಗಳ ವಿನ್ಯಾಸಗಳಿದ್ದರೆ ಕೆಳಭಾಗದಲ್ಲಿ ಮೆಟ್ಟಿಲುಗಳ, ಮನೆಗಳ ತಾರಸಿಯ ವಿನ್ಯಾಸದೊಂದಿಗೆ ಮಾನವಾಕೃತಿಗಳು ಸಹ ಚಿತ್ರಿತಗೊಂಡಿವೆ. ಅಕ್ರಿಲಿಕ್ ಪಾರದರ್ಶಕ ಮತ್ತು ಅಪಾರದರ್ಶಕ ತಂತ್ರ ಸಾಧ್ಯತೆಗಳನ್ನು ದುಡಿಸಿಕೊಂಡು ಹಿರೇಗೌಡರು ದಟ್ಟವಾದ ಕುಂಚದ ಬೀಸುವಿಕೆಗಳಿಂದ ಚಿತ್ರದಲ್ಲಿ ರೂಪಾಂಶಗಳಿಗೆ ಆಕಾರ ನೀಡಿದ್ದಾರೆ. ಕಡುವರ್ಣಗಳ ಜೊತೆಗೆ ತೆಳುವಾದ ವರ್ಣಗಳ ಮೇಳದಿಂದ ಒಂದು ಅವಕಾಶದಲ್ಲಿ ಯಾತ್ರಾ ಸ್ಥಳವೊಂದರ ಬಹು ಆಕೃತಿಗಳನ್ನು ಸೃಜನಶೀಲವಾಗಿ ತೋರಿಸಲ್ಪಡುವ ಒಂದು ವಿಶೇಷ ಪ್ರಯೋಗವಾಗಿದೆ.

### ೨. ಹಿಮಾಚಲ ಪ್ರದೇಶ (೨೦೦೭)

ಇಂಪ್ಯಾಸ್ಟೋ ತಂತ್ರದ ನೆಲೆಯಲ್ಲಿ ರಚಿಸಿದ ಈ ಪ್ರಕೃತಿ ಚಿತ್ರದಲ್ಲಿ ಪ್ರಾಯೋಗಿಕವಾಗಿ ಹಲವು ಬಗೆಯ ಕಲಾ ಸಾಮಗ್ರಿಗಳನ್ನು ದುಡಿಸಿಕೊಂಡು ವಿಶಿಷ್ಟ ಮೈವಳಿಕೆಯನ್ನು ಸೃಷ್ಟಿಸಲಾಗಿದೆ. ಹಿಮಾಚಲ



೧. ಬನಾರಸ, ೧೯೯೦



೨. ಹಿಮಾಚಲ ಪ್ರದೇಶ, ೨೦೦೭

ಪ್ರದೇಶದ ಗುಡ್ಡಗಾಡು ಪ್ರದೇಶವೊಂದರ ನೆನಪಿನಂಗಳದಿಂದ ಮೂಡಿದ ಈ ಚಿತ್ರದಲ್ಲಿ ಪ್ರಕೃತಿಯ ರಚನೆಗಳು ಮಾತ್ರ ರೂಪುಗೊಂಡಿವೆ. ಮುನ್ನೆಲೆಯಲ್ಲಿ ಕಡು ವರ್ಣದ ಬಂಡೆಯ ವಿನ್ಯಾಸ, ಹಿನ್ನೆಲೆಯಲ್ಲಿ ತೆಳುವರ್ಣದ ಬೆಟ್ಟದ ವಿನ್ಯಾಸಗಳನ್ನು ರಚಿಸುವುದರ ಮೂಲಕ ವಾಯುಮಂಡಲದಲ್ಲಿ ಪ್ರಕೃತಿ ನಿರ್ಮಾಣಗಳಲ್ಲಿ ಕಂಡು ಬರುವ ವ್ಯತ್ಯಾಸಗಳನ್ನು ಇಲ್ಲಿ ಸ್ಪಷ್ಟವಾಗಿ ತೋರಿಸಲಾಗಿದೆ. ಆಕಾಶದ ಭಾಗದಲ್ಲಿ ಲಂಬವಾದ ಬೀಸುಗಳು ಲಾಲಿತ್ಯದ ರೂಪದಲ್ಲಿ ರಚನೆಗೊಂಡು ಚಳಿಗಾಲದ ಅನುಭವವನ್ನು ನೀಡುತ್ತದೆ ಈ ಕೃತಿ. ವರ್ಣಗಳ ಲೇಪನದಲ್ಲಿ ಕಾಣಿಸಿಕೊಂಡ ಕಾಗದದ ಮೈವಳಿಕೆಗಳು ಚಿತ್ರದಲ್ಲಿನ ರೂಪಗಳಿಗೆ ವಿಶಿಷ್ಟ ಛಾಯೆಯನ್ನು ನೀಡಿವೆ. ವೇಗೋತ್ಕರ್ಷದ ಬೀಸುವಿಕೆಗಳಿಂದ ಚೈತನ್ಯಪೂರ್ಣ ಕಲಾಕೃತಿಯಾಗಿದೆ.

**ಉಪಸಂಹಾರ**

ಇಲ್ಲಿ ಎರಡು ಬಗೆಯ ಅಕ್ರಿಲಿಕ್ ಮಾಧ್ಯಮದ ಪ್ರಕೃತಿ ಚಿತ್ರಗಳನ್ನು ಅಧ್ಯಯನ ಮಾಡಲಾಗಿದೆ. ಎರಡೂ ಚಿತ್ರಗಳ ಸ್ಥಳಗಳು ವಿಭಿನ್ನವಾದಂತೆ, ರಚನಾ ತಂತ್ರಗಾರಿಕೆಯಲ್ಲೂ ವಿಭಿನ್ನತೆಯನ್ನು ಸಾಧಿಸಿವೆ. ಮೊದಲಿನ ಚಿತ್ರದಲ್ಲಿ ಪಾರದರ್ಶಕ ಮತ್ತು ಅಪಾರದರ್ಶಕ ವರ್ಣತಂತ್ರಗಾರಿಕೆ ಅಳವಡಿಸಿದರೆ, ಎರಡನೆಯ ಚಿತ್ರದಲ್ಲಿ ಕಾಗದದ ಮೈವಳಿಕೆಯನ್ನು ಆಕೃತಿಗಳಿಗೆ ಪೂರಕವಾಗಿ ವರ್ಣಗಳ ಬೀಸುಗಳನ್ನು ಮತ್ತು ಆಕೃತಿಗಳನ್ನು ಸೃಷ್ಟಿಸಲಾಗಿದೆ. ಎರಡೂ ಯತಾರ್ಥ ಪ್ರಕೃತಿಚಿತ್ರಗಳಿಗಿಂತ ಭಿನ್ನ ಯತಾರ್ಥ ಮತ್ತು ಸೃಜನಾತ್ಮಕ ಅಂಶಗಳನ್ನು ಒಳಗೊಂಡ ಅನನ್ಯ ಕಲಾಕೃತಿಗಳಾಗಿವೆ ಎಂದು ಹೇಳಬಹುದು.

**೩:೩. ತೈಲವರ್ಣ**

**ಗುಹಾಂತರ ದೇವಾಲಯ** (೧೯೯೧)

ಚಿತ್ರದುರ್ಗ ಜಿಲ್ಲೆಯ ಹೊಸಗುಡ್ಡದಲ್ಲಿರುವ ಚಾರಿತ್ರಿಕ ಗುಹಾಂತರ ದೇವಾಲಯದ ಚಿತ್ರವಿದು. ತೈಲವರ್ಣದಿಂದ ಫೋಟೋರಿಯಲಿಸ್ಟಿಕ್ ನೆಲೆಯಲ್ಲಿ ಚಿತ್ರಸಿದ ಈ ಕೃತಿಯಲ್ಲಿ ಗುಹಾಂತರ ದೇವಾಲಯದ ಮುಂಭಾಗ, ಮುಂದಿನ ಕಲ್ಲು ಬಂಡೆಗಳು ಗುಡ್ಡದಲ್ಲಿನ ಕೋಟೆಗಳ ಅವಶೇಷಗಳು ಮತ್ತು ಗಿಡ ಮರಗಳು ಈ ಕೃತಿಯ ಮುಖ್ಯ ಆಶಯವಾಗಿವೆ. ಮೃದುವಾದ ಸಮ್ಮಿಶ್ರಣದ ತಂತ್ರದಿಂದ ತಾಜಾ ವರ್ಣಗಳ ಸಾಂಗತ್ಯದ ಫಲವಾಗಿ ರೂಪುಗೊಂಡ ಇಲ್ಲಿನ ಆಕೃತಿಗಳು ತ್ರಿಮಾನದ ಕಲ್ಪನೆಯಲ್ಲಿ ನೈಜತೆಯ ಅನುಭವ ಸ್ಫುರಿಸುತ್ತಲೇ ಸಾಮಾನ್ಯ ನೋಡುಗನಿಗೂ ಆಪ್ತವೆನಿಸುತ್ತದೆ ಈ ಕೃತಿ. ಚಿತ್ರದಲ್ಲಿ ಹಳದಿ ಮತ್ತು ಕಿತ್ತಳೆ ವರ್ಣದ ಸಾಂಗತ್ಯವೇ ಮೇಲುಗೈ ಸಾಧಿಸಿದ್ದು, ಕೃತಿಯ ಪ್ರಮುಖ ಆಕೃತಿಯನ್ನು ಕಾಗದದ ಎಡಭಾಗಕ್ಕೆ ಸಂಯೋಜಿಸಲಾಗಿದೆ. ಬಂಡೆಗಳು ಮತ್ತು ದೇವಾಲಯದ ಆಕೃತಿಗಳು ವಿವರಪೂರ್ಣವಾಗಿ ರಚನೆಗೊಂಡರೆ, ಹಿನ್ನೆಲೆಯ ಕೋಟೆಯ ಬಾಹ್ಯ ಆಕೃತಿ ಸ್ಪಷ್ಟವಾಗಿದ್ದು, ಒಳಾವರಣದಲ್ಲಿನ ಕಲ್ಲುಗಳನ್ನು ಸೂಚ್ಯವಾದ ಡ್ರೈ ಬ್ರಶ್ ತಂತ್ರ ಬಳಸಿ ರಚಿಸಲಾಗಿದೆ. ದೇವಾಲಯಕ್ಕೆ ಸೌಂದರ್ಯದ ಮೆರಗು ನೀಡಲು ಒಣಗಿದ ಮತ್ತು ಪುಷ್ಪಗಳಿಂದ ಕೂಡಿದ ಮರಗಳನ್ನು ಅವಕಾಶದ ಬಲಭಾಗಕ್ಕೆ ಚಿತ್ರಿಸಿದ್ದಾರೆ ಹಿರೇಗೌಡರು. ಇನ್ನು ದೇವಾಲಯದ ಉದ್ದಗಲಕ್ಕೆ ಮತ್ತು



ಗುಹಾಂತರ ದೇವಾಲಯ, ಹೊಸಗುಡ್ಡ, ೧೯೯೧

ಧಾರ್ಮಿಕ ಆಚರಣೆಗೆ ಅರ್ಥಸಾಧ್ಯತೆ ಕಲ್ಪಿಸುವ ನಿಟ್ಟಿನಲ್ಲಿ ಅರ್ಚಕನ ಪ್ರತಿಮೆಯೊಂದನ್ನು ದೇಗುಲದ ಒಳಭಾಗದಿಂದ ಹೊರಬರುತ್ತಿರುವಂತೆ ಚಿತ್ರಿಸಲಾಗಿದೆ. ಮುನ್ನೆಲೆಯಲ್ಲಿ ಕಪ್ಪು ಶಿಲೆಯ ನಂದಿಯ ವಿಗ್ರಹವೂ ಕೂಡ ಒಟ್ಟು ಚಿತ್ರ ವಿನ್ಯಾಸಕ್ಕೆ ಪೂರಕವಾದ ವಾತಾವರಣವನ್ನು ಕಲ್ಪಿಸಿದ್ದು, ಹಿರೇಗೌಡರು ತೈಲವರ್ಣದಲ್ಲಿ ರಚಿಸಿದ ಏಕೈಕ ಅನನ್ಯ ಪ್ರಕೃತಿ ಚಿತ್ರ ಇದಾಗಿದೆ.

********

೩:೪. ಮಿಶ್ರ ಮಾಧ್ಯಮ

ಹಿರೇಗೌಡರು ಜಲವರ್ಣದಲ್ಲಿ ಪ್ರಕೃತಿ ಚಿತ್ರಗಳನ್ನು ರಚಿಸಿದಂತೆ ಮಿಶ್ರಮಾಧ್ಯಮದಲ್ಲಿ ಕೂಡ ಅನೇಕ ಪ್ರಕೃತಿ ಚಿತ್ರಗಳನ್ನು ಪ್ರಯೋಗಾತ್ಮಕ ನೆಲೆಯಲ್ಲಿ ಸೃಷ್ಟಿಸಿದ್ದು, ಅವುಗಳಲ್ಲಿ ಆಯ್ದ ಪ್ರಕೃತಿ ಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**೧. ಬೆಂಗಳೂರಿನ ಪರಿಸರ (೧೯೮೯)**

ಪಾಯಿಂಟಾಲಿಸ್ಟರ ಕೃತಿಯಂತೆ ಕಾಣುವ ಈ ಚಿತ್ರ ಬೆಂಗಳೂರಿನ ವಿದ್ಯಾನಗರದ ಒಂದು ಭಾಗವನ್ನು ಆಯ್ದುಕೊಂಡು ಹಿರೇಗೌಡರು ರಚಿಸಿದ ಈ ಕೃತಿ ಸಮ್ಮಿಶ್ರ ಮಾಧ್ಯಮದ ಪ್ರಯೋಗವಾಗಿದೆ. ಮೊದಲ ಲೇಪನದಲ್ಲಿ ಅಕ್ರಿಲಿಕ್ ವರ್ಣವನ್ನು ಸೂಚ್ಯವಾಗಿ ಬಳಸಿಕೊಂಡು, ನಂತರದಲ್ಲಿ ಅದರ ಮೇಲೆ ಆಯಿಲ್ ಪೇಸ್ಟಲ್‌ನ ಬಳಪಗಳಿಂದ ಪಾಯಿಂಟಾಲಿಸ್ಟರ ತಂತ್ರವನ್ನು ಅನುಸರಿಸಿ ಮರ-ಗಿಡಗಳ ತರುಲತೆಗಳನ್ನು ತಾಜಾ ವರ್ಣಗಳ ಸಾಂಗತ್ಯದಿಂದ ಚಿತ್ರಿಸಲಾಗಿದೆ. ಮರಗಳ ರೆಂಬೆಗಳನ್ನು ಮಸುಕಾಗಿ ಚಿತ್ರಿಸಿ, ಎಲೆಗಳು ಉದುರುತ್ತಿರುವ ಹಾಗೆ ಚಲನಾತ್ಮಕ ಅನುಭವಕ್ಕೆ ದಕ್ಕುತ್ತದೆ. ಬಹು ವರ್ಣಗಳನ್ನು ದುಡಿಸಿಕೊಂಡು ಶುಭ್ರ ಪರಿಸರದ ಅಭಿವ್ಯಕ್ತಿಯನ್ನು ಈ ಕೃತಿಯಲ್ಲಿ ಕಾಣಬಹುದು.

**೨. ಹಂಪಿಯ ಪರಿಸರ (೧೯೯೧)**

ರೇಖಾತ್ಮಕವಾಗಿ ಮೊದಲು ಪರಿಸರದ ಆಕೃತಿಗಳನ್ನು ಚಿತ್ರಿಸಿಕೊಂಡು ನಂತರದಲ್ಲಿ ಜಲವರ್ಣಗಳಿಂದ ತುಂಬಿದ ತಂತ್ರಗಾರಿಕೆಯಿಂದ ಈ ಕೃತಿ ರಚನೆಯಾಗಿದೆ. ತ್ರಿಕೋನಾಕೃತಿಯಲ್ಲಿ ಚಾರಿತ್ರಿಕ ಹಾಗೂ ಪ್ರಕೃತಿಯಲ್ಲಿನ ವಿವಿಧ ವಸ್ತುಗಳನ್ನು ಸಂಯೋಜಿಸಿರುವ ಹಿರೇಗೌಡರು ಪಾರದರ್ಶಕ ತಂತ್ರದಿಂದ ಆಕೃತಿಗಳಿಗೆ ಜೀವ ತುಂಬುವ ಪ್ರಯೋಗವನ್ನು ಮಾಡಿದ್ದಾರೆ. ಆಕೃತಿಗಳಲ್ಲಿ ಕಂಡುಬರುವ ವರ್ಣಗಳ ವ್ಯತ್ಯಾಸದ ಮೂಲಕ ಯಥಾದರ್ಶನದ ಸ್ಪಷ್ಟ ಅನುಭವಕ್ಕೆ ಪ್ರಾಪ್ತವಾಗುತ್ತದೆ. ಪುರಂದರ



೧. ಬೆಂಗಳೂರಿನ ಪರಿಸರ, ೧೯೪೯



೨. ಹಂಪಿಯ ಪರಿಸರ, ೧೯೬೧



೩. ಪಟ್ಟದಕಲ್ಲು ಪರಿಸರ, ೧೯೯೧



೪. ಧರ್ಮಸ್ಥಳ ಪರಿಸರ, ೧೯೯೧

ಮಂಟಪವನ್ನು ಹಲವಾರು ಕೋನಗಳಿಂದ ಚಿತ್ರಿಸಿದ ಇವರು ಪ್ರತಿ ಕಲಾಕೃತಿಯಲ್ಲೂ ವಿಭಿನ್ನ ತಂತ್ರಗಾರಿಕೆಗಳನ್ನು ದುಡಿಸಿಕೊಂಡ ಪ್ರಯೋಗಕರ್ತರು

**೩. ಪಟ್ಟದಕಲ್ಲು ಪರಿಸರ (೧೯೯೧)**

ಈ ಕೃತಿಯಲ್ಲಿ ಎರಡು ಬಗೆಯ ಶೈಲಿಗಳ ಸಾಂಗತ್ಯವಿದೆ. ಒಂದು ಯತಾರ್ಥತೆ, ಇನ್ನೊಂದು ಆಧುನಿಕ ಸೃಜನಶೀಲ ಪ್ರಜ್ಞೆ, ಈ ಎರಡೂ ಪ್ರಜ್ಞೆಗಳಿಂದ ಒಡಮೂಡಿದ ಈ ಚಿತ್ರದಲ್ಲಿ ಆಧುನಿಕ ಶೈಲಿಯಲ್ಲಿ ರಚಿತಗೊಂಡ ಮರದ ವಿನ್ಯಾಸ ಪ್ರಧಾನ ವಿನ್ಯಾಸವಾದರೆ, ದೂರದಲ್ಲಿ ಕಾಣುವ ದೇಗುಲದ ವಿನ್ಯಾಸ ದ್ವಿತೀಯ ರಚನೆ. ರೇಖಾತ್ಮಕ ಆವರಣದೊಳಗೆ ವರ್ಣಗಳ ಲೇಪನ, ಅದೂ ಯತಾರ್ಥತೆಗಿಂತ ವಿಭಿನ್ನವಾದುದು. ಶುಭ್ರ ಬಹು ವರ್ಣಗಳ ಸಾಂಗತ್ಯದ ಸ್ಪರ್ಶ ಈ ಕೃತಿಗೆ ಇದೆ. ಇನ್ನೂ ಒಂದರ್ಥದಲ್ಲಿ ಹೇಳುವುದಾದರೆ ಭಾಗಶಃ ರಚನೆ ವಾಸ್ತವಾತೀತ ನೆಲೆಯಲ್ಲಿ ರಚಿತಗೊಂಡಿರುವುದು. ಆದರೆ ಎಂದಿನ ಸಂಯೋಜನಾ ಪದ್ಧತಿಯ ಮುಂದುವರಿಕೆ ಈ ಕೃತಿಯಲ್ಲಿ ಗೋಚರವಾಗುತ್ತಿದ್ದು, ಪ್ರಕೃತಿ ಚಿತ್ರಗಳಲ್ಲಿಯೇ ವಿಶಿಷ್ಟ ರಚನಾ ತಂತ್ರದಿಂದ ರಚಿತವಾಗಿದೆ.

**೪. ಧರ್ಮಸ್ಥಳ ಪರಿಸರ (೧೯೯೧)**

ರೇಖಾ ಪ್ರಧಾನವಾದ, ಅಲ್ಲಲ್ಲಿ ತೆಳು ವರ್ಣಗಳ ಸ್ಪರ್ಶದಿಂದ ಕೂಡಿದ ಯತಾರ್ಥ ಪ್ರಕೃತಿ ಚಿತ್ರವಿದು. ಜನನಿಬಿಡ ಪ್ರದೇಶವಾದ ಧರ್ಮಸ್ಥಳದ ಪರಿಸರವನ್ನು ಹಿರೇಗೌಡರು ಅವಕಾಶದ ಎಡಭಾಗದಲ್ಲಿ ಪರಿಸರದ ಪ್ರಧಾನ ಆಕೃತಿಗಳನ್ನು ರಚಿಸಿದರೆ, ಇನ್ನುಳಿದ ಆಕೃತಿಗಳನ್ನು ಅವಕಾಶದ ಬಲಭಾಗಕ್ಕೆ ಇಳಿಮುಖವಾಗುವ ಮಂದಗತಿಯ ಕೋನದ ಮುಖಾಂತರ ಚಿತ್ರಿಸಿದ್ದಾರೆ. ಪ್ರಕೃತಿಯಲ್ಲಿ ನಿರ್ಮಾಣಗೊಂಡ ವಾಸ್ತುಗಳ ಉದ್ದಗಲತೆಗಳನ್ನು ಮತ್ತು ಜನನಿಬಿಡತೆಯನ್ನು ತೋರ್ಪಡಿಸಲು ಮಾನವಾಕೃತಿಗಳನ್ನು ಸೂಚ್ಯವಾಗಿ ಚಿತ್ರಿಸಿದ್ದಾರೆ. ನೆರಳು ಬೆಳಕಿನ ಛಾಯೆಗಳನ್ನು ತೋರಿಸುವಾಗ ರೇಖೆಗಳೊಂದಿಗೆ ವರ್ಣಲೇಪನಕ್ಕೂ ಆದ್ಯತೆ ನೀಡಿದ್ದಾರೆ.

**೫. ತಾತಗುಣಿ ಎಸ್ಟೇಟ್ ಬೆಂಗಳೂರು (೧೯೯೨)**

ರಷ್ಯಾದ ಕಲಾವಿದ ರೋರಿಚ್ ಅವರ ಒಡೆತನದಲ್ಲಿದ್ದ ತಾತಗುಣಿ ಎಸ್ಟೇಟ್‌ನ ಚಿತ್ರವಿದು. ದಟ್ಟ ಕಾನನದ ಪ್ರತೀಕವಾಗಿ ಮರಗಳು, ಹುತ್ತ, ಹಿನ್ನೆಲೆಯಲ್ಲಿ ಕಟ್ಟಡವೊಂದರ ಅವಶೇಷಗಳನ್ನು ಚಿತ್ರಿಸಿರುವ ಹಿರೇಗೌಡರು ಬಹು ವರ್ಣಗಳ ಸಾಂಗತ್ಯದಿಂದ ಜಲವರ್ಣ ಮತ್ತು ಪೇಸ್ಟಲ್ ವರ್ಣಗಳನ್ನು ಬಹು ಪ್ರಬುದ್ಧವಾಗಿ ದುಡಿಸಿಕೊಂಡ ತಂತ್ರಗಾರಿಕೆ ಇಲ್ಲಿದೆ. ಜಲವರ್ಣದ ಆಕರ್ಷಕ ಲೇಪನದ ನಂತರ ಶುಭ್ರತನದಿಂದ ಕೂಡಿದ ಪೇಸ್ಟಲ್‌ಗಳನ್ನು ಮರಗಳ ಕಾಂಡಗಳ ಮೇಲೆ, ಇನ್ನಿತರೆ ಆಕೃತಿಗಳ ಮೇಲೆ ಸ್ಪರ್ಶಿಸುವುದರ ಮೂಲಕ ಕಲಾಕೃತಿಯು ತಾಜಾತನದ ಅನುಭವ ನೀಡುವಂತೆ ಆಸ್ಥೆ ವಹಿಸಿದ್ದು ಕಂಡು ಬರುತ್ತದೆ. ನೆಲದಲ್ಲಿ ವಿವಿಧ ಬಗೆಯ ಸಸ್ಯಗಳನ್ನು ವಿವಿಧ ಛಾಯೆಗಳಲ್ಲಿ ರಚಿಸಿರುವ ಹಿರೇಗೌಡರು ಕಾಗದದ ಅವಕಾಶಕ್ಕೆ ಪೂರಕವಾದ ಸಂಯೋಜನೆಗೆ ಆದ್ಯತೆ ನೀಡಿದ್ದಾರೆ.



೫. ತಾತಗುಣಿ ಎಸ್ಟೇಟ್, ಬೆಂಗಳೂರು ೧೯೯೨



೬. ಹಳೇಬೀಡು ಪರಿಸರ, ೨೦೦೨

೬. ಹಳೇಬೀಡು ಪರಿಸರ (೨೦೦೨)

ಜಲವರ್ಣ ಮತ್ತು ಶಾಯಿಯ ಸಮ್ಮಿಶ್ರಣದಿಂದ ರಚಿಸಿದ ಸ್ಪ್ರೆಡ್ ತಂತ್ರವನ್ನು ಅನುಸರಿಸಿದ, ಹಳೇಬೀಡಿನ ಕೆರೆಯ ಪರಿಸರವನ್ನು ಪಾರದರ್ಶಕ ತಂತ್ರಗಾರಿಕೆಯಿಂದ ಸೆರೆಹಿಡಿದ ಕಲಾಕೃತಿ ಇದು. ಮಧ್ಯದಲ್ಲಿ ದಟ್ಟ ಛಾಯೆಯ ಮೂಲಕ ದೂರದ ಎತ್ತರದ ಪ್ರದೇಶವನ್ನು ಸೂಚ್ಯವಾಗಿ ತೋರಿಸಲ್ಪಟ್ಟಿದ್ದಾರೆ. ಆಕಾಶದಲ್ಲಿನ ಮೋಡಗಳನ್ನು ಅಲ್ಪ ಶ್ರೇಣಿಯ ವರ್ಣ ಲೇಪನದೊಂದಿಗೆ ರಚಿಸಿರುವ ಹಿರೇಗೌಡರು ಈ ಚಿತ್ರಕ್ಕೆ ಪ್ರಶಾಂತ ಭಾವ ತುಂಬಿದ್ದಾರೆ. ಕೆಲವೇ ವರ್ಣಗಳನ್ನು ಪರಿಸರದ ವಾತಾವರಣಕ್ಕೆ ಪೂರಕವಾಗಿ ಹೇಗೆ ದುಡಿಸಿಕೊಳ್ಳಬೇಕೆಂಬುದಕ್ಕೆ ಇದು ಉತ್ತಮ ಕಲಾಕೃತಿ.

**ಉಪಸಂಹಾರ**

ಹಿರೇಗೌಡರು ಮಿಶ್ರಮಾಧ್ಯಮದಲ್ಲಿ ರಚಿಸಿದ ಆರು ಕಲಾಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಚಿತ್ರ ೧ ಮತ್ತು ೫ ಈ ಎರಡೂ ಕಲಾಕೃತಿಗಳು ಒಂದೇ ಬಗೆಯ ತಂತ್ರವನ್ನು ಅನುಸರಿಸಿದ್ದರೆ, ಚಿತ್ರ ೨,೩ ಮತ್ತು ೪ ಇವು ರೇಖಾ ಪ್ರಧಾನ ಹಿನ್ನಲೆಯಲ್ಲಿ ರಚಿತವಾಗಿವೆ. ಚಿತ್ರ ೬ ಇತರ ಕಲಾಕೃತಿಗಿಂತ ವಿಭಿನ್ನವಾಗಿ ಅಂದರೆ ಜಲವರ್ಣದ ಹರಡುವಿಕೆಯ ತಂತ್ರದಿಂದ ರಚಿತವಾಗಿದೆ. ಆದರೆ ಚಿತ್ರ ೩ನ್ನು ಹೊರತುಪಡಿಸಿದರೆ ಉಳಿದ ಚಿತ್ರಗಳ ಸಂಯೋಜನೆ ಹಾಗೂ ಆಕೃತಿಗಳು ಎಂದಿನ ಯತಾರ್ಥನೆಲೆಯಲ್ಲಿ ಚಿತ್ರಿತಗೊಂಡಿವೆ. ಚಿತ್ರ ೩ ಆಧುನಿಕ ಮತ್ತು ಯತಾರ್ಥ ಪ್ರಜ್ಞೆಗಳ ಸಂಗಮವಾದ ಒಂದು ವಿನೂತನ ಪ್ರಯೋಗವಾಗಿದೆ ಎನ್ನಬಹುದು.

********

**ಭಾಗ ೪. ಶಿಲ್ಪವರ್ಣಚಿತ್ರಗಳು**

ಹಿರೇಗೌಡರು ರೇಖಾಚಿತ್ರಗಳಲ್ಲಿ ಹೇಗೆ ಶಿಲ್ಪಗಳನ್ನು ರೇಖಿಸಿದ್ದಾರೋ ಹಾಗೆಯೇ ಶಿಲ್ಪವರ್ಣಚಿತ್ರಗಳಲ್ಲಿಯೂ ಸಹ ಶಾಯಿ ಮತ್ತು ತೈಲ ಮಾಧ್ಯಮದಲ್ಲಿ ಕೆಲವು ಕಲಾಕೃತಿಯನ್ನು ರಚಿಸಿದ್ದಾರೆ. ಇವುಗಳಲ್ಲೂ ಕೂಡ ಬಹು ಬಗೆಯ ತಂತ್ರಗಳನ್ನು ಅಳವಡಿಸಿಕೊಂಡ ಹಿರೇಗೌಡರ ಮೂರು ಶಿಲ್ಪವರ್ಣಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**೧. ಪಟ್ಟದಕಲ್ಲಿನ ಶಿಲ್ಪ (೧೯೮೩)**

ದೇವಾಲಯಗಳ ತೊಟ್ಟಿಲು ಎಂದೇ ಪ್ರಸಿದ್ಧ ಪಡೆದ ಚಾಲುಕ್ಯರ ಬಾದಾಮಿ, ಐಹೊಳೆ, ಪಟ್ಟದಕಲ್ಲು ದೇಗುಲಗಳ ಅನೇಕ ಶಿಲ್ಪಗಳನ್ನು ಹಿರೇಗೌಡರು ಚಿತ್ರಿಸಿದ್ದು, ಅವುಗಳಲ್ಲಿ ಒಂದಾದ ಈ ಶಿಲ್ಪದಲ್ಲಿ ಶಿವ ಪಾರ್ವತಿಯರ ಆಕೃತಿಗಳಿವೆ. ಹೊಯ್ಸಳ ಭಂಗಿಯಲ್ಲಿರುವ ಚಾಲುಕ್ಯ ಶೈಲಿಯ ಈ ಶಿಲ್ಪದ ಚಿತ್ರದಲ್ಲಿ ರೇಖಾತ್ಮಕ ಪ್ರಯೋಗದಲ್ಲಿ ಶಾಯಿವರ್ಣದ ಲೇಪನವಿದೆ. ಕಾಗದದ ಮಧ್ಯಸ್ಪಷ್ಟ ಚೌಕಾಕೃತಿಗೆ ದಟ್ಟ ವರ್ಣಲೇಪನದ 'ಒಳಾವರಣದಲ್ಲಿ ನೀಳ ಶರೀರದ ಶಿವ ಪಾರ್ವತಿಯರು ರೇಖೆಗಳಲ್ಲಿ ರಚನೆಗೊಂಡಿದ್ದಾರೆ. ವಾಸ್ತವ ವರ್ಣ ವಿನ್ಯಾಸಕ್ಕಿಂತ ವಿಭಿನ್ನವಾದ ವರ್ಣವಿನ್ಯಾಸವಿದ್ದು, ಅಂಗಾಂಗಗಳಲ್ಲಿ ಸೂಚ್ಯವಾದ ರಚನೆ ವೇಗೋತ್ಕರ್ಷ ರೇಖೆಗಳು ಈ ಚಿತ್ರಕ್ಕೆ ಮಾರ್ದನಿ ಹೊರಡಿಸುತ್ತವೆ.

**೨. ಹಳೇಬೀಡಿನ ಶಿಲ್ಪ (೧೯೮೫)**

ಹೊಯ್ಸಳ ಶೈಲಿಯ ಶಿಲ್ಪವನ್ನು ಸ್ಕೆಚ್ ಪೆನ್ನಿನಿಂದ ಚಿತ್ರಿಸಿದ್ದು, ರೇಖಾತ್ಮಕವಾಗಿ ಶಿಲ್ಪದ ವಿನ್ಯಾಸವನ್ನು ರಚನೆಗೊಳಿಸಲಾಗಿದೆ. ಶಿವನು ಆಶೀರ್ವಚನ ನೀಡುವ ಭಂಗಿಯಲ್ಲಿ ನಿಂತಿದ್ದು, ಜಟೆಯಲ್ಲಿ ಗಂಗೆ, ಕೈಯಲ್ಲಿ ಡಮರುಗಗಳ ವಿನ್ಯಾಸಗಳು ಮೂಡಿವೆ. ಕಿತ್ತಳೆ ವರ್ಣ ಮತ್ತು ಕಂದು ಮತ್ತು ಕಪ್ಪು ವರ್ಣಗಳನ್ನೇ ನೆರಳು ಬೆಳಕಿನ ಛಾಯೆಗಳಿಗೆ ದುಡಿಸಿಕೊಂಡ ಹಿರೇಗೌಡರು ಅವರೆಡರಿಂದಲೇ ಶಿಲ್ಪದ ಚಿತ್ರಾಕೃತಿಗೆ ಪರಿಪಕ್ವ ರೂಪ ನೀಡಿದ್ದಾರೆ. ಸೂಚ್ಯವಾಗಿರುವ ಅಲಂಕಾರಿಕ ಆಭರಣಗಳು ಲಾಲಿತ್ಯಪೂರ್ಣವಾಗಿ ಹರಿದು ಬರುವುದರ ಮೂಲಕ ಕೃತಿ ಅನನ್ಯವೆನಿಸುತ್ತದೆ.



೧. ಪಟ್ಟದಕಲ್ಲಿನ ಶಿಲ್ಪ, ೧೯೮೩



೨. ಹಳೇಬೀಡಿನ ಶಿಲ್ಪ, ೧೯೮೫



೩. ಬೇಲೂರಿನ ಶಿಲ್ಪ, ೧೯೯೦

೩. ಬೇಲೂರಿನ ಶಿಲ್ಪ (೧೯೯೦)

ತೈಲ ವರ್ಣ ಮಾಧ್ಯಮದಲ್ಲಿ ರಚಿಸಲಾದ ಹೊಯ್ಸಳ ಶೈಲಿಯ ಗಣಪತಿ ಶಿಲ್ಪದ ಚಿತ್ರ, ಹಿರೇಗೌಡರು ರಚಿಸಿದ ಕಲಾಕೃತಿಗಳಲ್ಲಿಯೇ ಉತ್ಕೃಷ್ಟ ನೆಲೆಯ ಒಂದು ಅನನ್ಯ ಚಿತ್ರ. ಶಿಲ್ಪದ ಎಡ ಪಾರ್ಶ್ವದ ಕೋನದಿಂದ ಸೆರೆ ಹಿಡಿದ ಈ ಶಿಲ್ಪದ ಚಿತ್ರ ರಚನಾ ವಿಧಾನದಲ್ಲಿ ಕಂಡು ಬರುವ ಪ್ರಮುಖ ಅಂಶಗಳೆಂದರೆ, ಮೊದಲನೆಯದು ಹೊಯ್ಸಳ ಶೈಲಿಯ ಅಂಗಾಂಗಗಳ ಪ್ರಮಾಣ ಬದ್ಧತೆ, ಎರಡನೆಯದು ಆ ಅಂಗಾಂಗಗಳನ್ನು ರಚಿಸುವಾಗ ಕುಂಚದ ಬೀಸುವಿಕೆಗಳ ವಯ್ಯಾರ, ಮೂರನೆಯದು ವಿಶಿಷ್ಟ ವರ್ಣ ಸಂಯೋಜನೆ. ಈ ಮೂರು ಗುಣಗಳನ್ನು ಅತ್ಯಂತ ಸಮರ್ಥವಾಗಿ ದುಡಿಸಿಕೊಂಡ ಹಿರೇಗೌಡರು ಬಹು ವರ್ಣಗಳನ್ನು ಶುಭ್ರವಾಗಿ ಅಂಗಾಂಗಗಳಿಗೆ ಸ್ಪರ್ಶಿಸಿದ್ದಾರೆ. ಹಿನ್ನೆಲೆಯಲ್ಲಿ ಹಸಿರು ವರ್ಣದ ಬಹು ಛಾಯೆಗಳಲ್ಲಿ ಒಡಮೂಡಿದ ಗಣಪನಿಗೆ ಹಳದಿ, ತೆಳು ನೀಲಿ, ತೆಳು ಹಸಿರು ಹೀಗೆ ಹಲವಾರು ವರ್ಣಗಳು ಶಿಲ್ಪಕ್ಕೆ ತ್ರಿಮಾನ ನೀಡುವಲ್ಲಿ ಪ್ರಮುಖ ಸ್ಪರ್ಶ ಲಕ್ಷಣಗಳಾಗಿವೆ. ಈ ಎಲ್ಲ ಉತ್ತಮ ತಂತ್ರಗಳಿಂದ ಕೂಡಿದ ಈ ಶಿಲ್ಪ ಚಿತ್ರರಚನೆ ಮಾದರಿಯಾಗಬಲ್ಲ ಒಂದು ಕಲಾಕೃತಿ.

ಉಪಸಂಹಾರ

ಹಿರೇಗೌಡರು ರಚಿಸಿದ ಮೂರು ವಿಭಿನ್ನ ಬಗೆಯ ಶಿಲ್ಪವರ್ಣಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.ಚಿತ್ರ ೧ರಲ್ಲಿ ರೇಖಾತ್ಮಕ ರಚನೆಯೊಂದಿಗೆ ಶಾಯಿ ವರ್ಣದ ಲೇಪನದ ತಂತ್ರವನ್ನು ದುಡಿಸಿಕೊಂಡರೆ, ಎರಡನೆಯ ಚಿತ್ರದಲ್ಲಿ ಸ್ಕೆಚ್ ಪೆನ್ನಿನಿಂದ ರೇಖಾತ್ಮಕವಾಗಿ ಈ ಕಲಾಕೃತಿಯನ್ನು ರಚಿಸಲಾಗಿದೆ. ಮೂರನೆಯ ಚಿತ್ರ ಪೂರ್ಣವಾಗಿ ತೈಲವರ್ಣ ಮಾಧ್ಯಮದಿಂದ ರಚನೆಗೊಂಡಿದ್ದು ಎಡ ಪಾರ್ಶದ ಕೋನದಿಂದ ಚಿತ್ರಿಸಿದರೆ ಮೊದಲನೆ ಚಿತ್ರ ಮುಮ್ಮುಖದ ಸಂಯೋಜನೆ, ಎರಡನೆಯ ಚಿತ್ರದಲ್ಲಿ ಬಲಪಾರ್ಶ್ವದ ಸಂಯೋಜನೆ ರಚನಾ ತಂತ್ರಗಳನ್ನು ಹಿರೇಗೌಡರು ಪರಿಪಾಲಿಸಿದ್ದಾರೆ. ಮಾಧ್ಯಮದ ಸಾಧ್ಯತೆಗನುಗುಣವಾಗಿ ಮೂರೂ ಕೃತಿಗಳು ತಮ್ಮದೇ ಆದ ಅನನ್ಯತೆಯ ನೆಲೆಯಲ್ಲಿ ಮಹತ್ವದ್ದೆನಿಸುತ್ತವೆ.

********

### ಭಾಗ ೫. ಆಧುನಿಕ ನೆಲೆಯ ವರ್ಣಚಿತ್ರಗಳು

ಕಲಾವಿದನ ತುಡಿತಗಳ ಅಭಿವ್ಯಕ್ತಿಯನ್ನು ನಿಖರವಾಗಿ, ಖಚಿತವಾಗಿ ಅಳೆಯಲು ಇರುವ ಆಕರಗಳೆಂದರೆ ಸಂಯೋಜನಾ ಕಲಾಕೃತಿಗಳು. ಭಾವಚಿತ್ರ, ವ್ಯಕ್ತಿ ಚಿತ್ರ, ಸ್ಥಿರಚಿತ್ರ ಹಾಗೂ ಪ್ರಕೃತಿಚಿತ್ರಣಗಳಲ್ಲಿನ ರಚನೆಯ ಸಾಧ್ಯತೆಗಳು ಹೆಚ್ಚಾಗಿ ಅನುಕರಣದ ಕೌಶಲವನ್ನು ಪ್ರಕಟಿಸುತ್ತವೆ.ಯಾವುದೇ ವಿಷಯದ ಚಿತ್ರವಿದ್ದರೂ ಕೂಡ ಅಲ್ಲಿ ಸಂಯೋಜನೆಯ ಪಾತ್ರವಿದ್ದೇ ಇರುತ್ತದೆ. ಅವಕಾಶದ ಯಾವ ಭಾಗದಲ್ಲಿ ಆಕೃತಿಯನ್ನು ಅಥವಾ ಸಹ ಆಕೃತಿಯನ್ನು ರಚಿಸಿದರೆ ಕಲಾಕೃತಿ ಉತ್ತಮ ನೆಲೆಯಲ್ಲಿ ಮೂಡಿಬರಬಹುದಾದ ಸಾಧ್ಯತೆಗಳನ್ನು ಸಂಯೋಜನೆಯಲ್ಲಿ ಕಾಣಬಹುದಾಗಿದೆ.

ಯಾವುದೇ ಪ್ರತಿಮೆ, ಅಥವಾ ಚಿತ್ರದ ನಿರ್ಮಾಣದಲ್ಲಿ ಮೂಲವಸ್ತು ಯಥಾವತ್ತಾಗಿ ಚಿತ್ರಿಸುವುದು ಮಾತ್ರವೇ ಸತ್ಯವನ್ನು ನಿರೂಪಿಸುವ ಲಕ್ಷಣವಲ್ಲ, ವಿಶಿಷ್ಟವಾದ ಚಿನ್ಹೆ ಮತ್ತು ಸಂಕೇತಗಳ ಮೂಲಕ ಆಕಾರ ಮತ್ತು ಬಣ್ಣಗಳ ಪ್ರಭಾವದಿಂದ ಕಲಾಕೃತಿಯನ್ನು ರಚಿಸಿ, ಆಮೂಲಕ ಪ್ರೇಕ್ಷಕನ ಮನಸ್ಸಿನಲ್ಲಿ ಅಪೇಕ್ಷಿತ ಭಾವನೆಗಳನ್ನು ಜಾಗೃತಗೊಳಿಸಬೇಕು ಮತ್ತು ಇದರಿಂದ ಶೃಂಗಾರ, ಹಾಸ್ಯ, ಕರುಣ ಮುಂತಾದ ನವರಸಗಳ ಅನುಭವವನ್ನುಂಟು ಮಾಡಬೇಕು.[೧] ಈ ಹಿನ್ನೆಲೆಯಲ್ಲಿ ಹಿರೇಗೌಡರು ತಮ್ಮ ಕಲಾಕೃತಿಗಳಲ್ಲಿ ಚಿನ್ಹೆಗಳನ್ನು ಸಂಕೇತಗಳನ್ನೂ ಹೇರಳವಾಗಿ ದುಡಿಸಿಕೊಂಡು ಆಧುನಿಕ ಕಲಾಕೃತಿಗಳನ್ನು ರಚಿಸಿದ್ದಾರೆ.

ಆದರೆ ಆಧುನಿಕ ಸಂದರ್ಭದಲ್ಲಿ ಅನುಭವದ ತುಡಿತಗಳಿಂದ ಅಭಿವ್ಯಕ್ತಿಸಲ್ಪಟ್ಟ ಸೃಜನಶೀಲ ಕಲಾಕೃತಿಗಳನ್ನು ಈ ಶತಮಾನದ ಸ್ವಾತಂತ್ರ್ಯೋತ್ತರದಲ್ಲಿ 'ಸಂಯೋಜನೆ' ಎಂದು ಕರೆಯುವ ವಿಶೇಷ ಪರಿಪಾಠ ರೂಢಿಯಲ್ಲಿ ಬಂದಿತೆಂಬುದು ನನ್ನ ಅನಿಸಿಕೆ. ಈ ಸಂಯೋಜನೆ ಎಂಬ

೦೧. ಎನ್.ಮರಿಶಾಮಾಚಾರ್ : ಕಲೆಯ ಉಪಲಬ್ಧ : ಚಿತ್ರಕಲಾ (ಎಂ.ಎಸ್.ನಂಜುಂಡರಾವ್ ಅವರ ಅಭಿನಂದನಾ ಗ್ರಂಥ) ಪುಟ ೧೪೨

ಪ್ರತ್ಯೇಕ ಕಲಾ ಪ್ರಕಾರವನ್ನು ಕಲಾ ಶಿಕ್ಷಣ ಸಂದರ್ಭದಲ್ಲಿ ಬಳಸಲ್ಪಡುವುದು ಶೈಕ್ಷಣಿಕ ಅನುಕೂಲಕ್ಕೆ ಎಂಬ ಅಂಶವೂ ಪ್ರಚಲಿತದಲ್ಲಿದೆ ಎಂದು ಡಾ.ಸಿದ್ಧಲಿಂಗಸ್ವಾಮಿ ಹಿರೇಮಠರು ತಮ್ಮ ಕಲಾವಿದ ಆರ್.ಎಂ.ಹಡಪದ, ಬದುಕು ಮತ್ತು ಕಲಾಕೃತಿಗಳು[೨] ಎಂಬ ಸಂಶೋಧನಾ ಮಹಾಪ್ರಬಂಧದಲ್ಲಿ ಹೇಳುತ್ತಾರೆ. ಸಂಯೋಜನೆ ಎಲ್ಲ ಕಲಾ ಪ್ರಕಾರಗಳಲ್ಲಿ ಇರಲೇಬೇಕು. ಸಂಯೋಜನೆ ಇಲ್ಲದಿದ್ದರೆ ಕಲಾಕೃತಿಯೊಂದರ ರೂಪಾಂಶಗಳಲ್ಲಿ ಸಾಮ್ಯತೆ ಒದಗಿಬರುವುದಿಲ್ಲವೆಂಬುದೂ ದಿಟ. ಸಂಯೋಜನೆ ಎಂಬ ಪರಿಕಲ್ಪನೆ ಅನಾದಿ ಕಾಲದಿಂದಲೂ ಕಲೆಗಳಲ್ಲಿ ಪರಿಪಾಲಿಸಿಕೊಂಡು ಬಂದ ಒಂದು ಕಲಾನಿಯಮದ ಶೀರ್ಷಿಕೆ. ಅದೇ ಶಿರ್ಷಿಕೆಯನ್ನು ನಮ್ಮ ಅಕಾಡೆಮಿಕ್ ಸಂದರ್ಭದಲ್ಲಿ ಬಹುವಾಗಿ ಬಳಸಿಕೊಂಡದ್ದು ಇರುವುದರಿಂದ ಅದು ಕ್ರಮೇಣ ತನ್ನ ಅರ್ಥ ಸಾಧ್ಯತೆಯನ್ನು ಆಧುನಿಕ ಕಲಾಪ್ರಕಾರದತ್ತ ವಿಸ್ತರಿಸಿಕೊಂಡಿದೆ.

ಚಿತ್ರ ಸಂಯೋಜನೆಯ ಮೂಲ ತತ್ವಗಳಾದ ರೇಖೆ, ಆಕೃತಿ, ವರ್ಣ, ವರ್ಣವಿನ್ಯಾಸ, ಮೈವಳಿಕೆ ಮತ್ತು ಸ್ಥಳಾವಕಾಶ ಮುಂತಾದವುಗಳ ಅರ್ಥವ್ಯಾಪ್ತಿಗಳನ್ನೂ ಐಕ್ಯತೆ, ಸಾಮರಸ್ಯತೆ, ಸಮತೂಕ, ತರಂಗ ಬದ್ಧತೆ, ಒತ್ತು ಮತ್ತು ಪ್ರಮಾಣ ಮುಂತಾದ ಚಿತ್ರ ಸಂಯೋಜನೆಯ ನಿಯಮಗಳನ್ನೂ ತಿಳಿದಲ್ಲದೆ 'ಚಿತ್ರ ಸಂಯೋಜನೆ'ಯ ಪರಿಪೂರ್ಣ ಕೃತಿಯೆನಿಸಲು ಸಾಧ್ಯವಿಲ್ಲ. ಪ್ರತಿಯೊಂದು ರೇಖೆ, ವರ್ಣಗಳಿಗೆ ಪ್ರತ್ಯೇಕವಾದ ಗುಣ ಸ್ವಭಾವಗಳಿರುವದರಿಂದ ಕಲಾವಿದನು ಚಿತ್ರಿಸಲಿರುವ ವಿಷಯಕ್ಕೆ ಸಂಬಂಧಪಟ್ಟಂತೆ ಗುಣ–ವಿಶೇಷಗಳ ವರ್ಣಗಳನ್ನು ರೇಖೆಗಳನ್ನೂ ಚಿತ್ರಿಸಿದಾಗಲೇ ಚಿತ್ರವು ಅರ್ಥಪೂರ್ಣವಾಗುತ್ತದೆ. ಚಿತ್ರ ಸಂಯೋಜನೆ ಸಾಂಪ್ರದಾಯಕವಾಗಿರಲಿ, ಆಧುನಿಕವಾಗಿರಲಿ, ಆಧುನಿಕ ಪಂಥಗಳಿಗನುಸಾರವಾಗಿರಲಿ, ಸಮಕಾಲೀನ ಕೃತಿಯಾಗಿರಲಿ ಅದರಲ್ಲಿ ಚಿತ್ರ ಸಂಯೋಜನೆಯ ಮೂಲತತ್ವಗಳಾಗಲಿ, ನಿಯಮ ನಿಬಂಧನೆಗಳಾಗಲೀ ಇಲ್ಲದೇ ಹೋದಲ್ಲಿ ಅದೊಂದು ಪರಿಪೂರ್ಣ ಕಲಾಕೃತಿಯಾಗಲಾರದು.[೩] ಹೀಗಾಗಿ ಯಾವುದೇ ಕಲೆ ತೆಗೆದುಕೊಂಡರೂ ಸಂಯೋಜನೆಯೇ ಮೂಲ ತಂತ್ರವಾಗಿರುವುದು ಕಂಡು ಬರುತ್ತದೆ. ಅದರಲ್ಲೂ ೧೯೬೦ರದಶಕದಿಂದೀಚೆಗೆ ಕರ್ನಾಟಕದಲ್ಲಿ ಆಧುನಿಕ ಕಲೆ ತಳಊರಿದ ನಂತರ ಸಂಯೋಜನೆಯಲ್ಲಿ ಅತ್ಯಂತ ವಿಭಿನ್ನ ಎನ್ನಬಹುದಾದ ಪ್ರಯೋಗಗಳು ನೋಡುಗರ ಮೂಗಿನ ಮೇಲೆ ಬೆರಳನಿರಿಸುವಂತೆ ಚಮತ್ಕಾರಗೈಯುತ್ತವೆ. ಅಂತಹ ವಿಶಿಷ್ಟ ಸಂಯೋಜನೆಗಳನ್ನು ಚಮತ್ಕಾರಯುಕ್ತವಾಗಿ ದುಡಿಸಿಕೊಳ್ಳುವುದರ ಮೂಲಕ ಆಧುನಿಕ ನೆಲೆಯ ಕಲಾಕೃತಿಗಳನ್ನು ಬಹು ಸಂಖ್ಯೆಯಲ್ಲಿ ರಚಿಸಿದ ಹಿರೇಗೌಡರ ಆಯ್ದ ಕಲಾಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

********

---

೦೨. ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ : ಕಲಾವಿದ ಆರ್.ಎಂ.ಹಡಪದ ಒಂದು ಅಧ್ಯಯನ, ಪಿಹೆಚ್.ಡಿ.ಮ.ಪ್ರ.,ಕ.ವಿ.ವಿಹಂಪಿ, ೨೦೦೩

೦೩. ಎನ್ ಮರಿಶಾಮಾಚಾರ್ (ಸಂ): ಕಲಾಕೋಶ, ಪುಟ ೩೩೧

೫:೧. ಅಕ್ರಿಲಿಕ್ ವರ್ಣ

ಹಿರೇಗೌಡರು ಅನೇಕ ಆಧುನಿಕ ನೆಲೆಯ ಕಲಾಕೃತಿಗಳನ್ನು ರಚಿಸಿದ್ದು, ವಿಶೇಷವಾಗಿ ಅಕ್ರಿಲಿಕ್ ಮಾಧ್ಯಮದ ಕಲಾಕೃತಿಗಳಲ್ಲಿ ಅವರ ಪ್ರಯೋಗಾತ್ಮಕತೆ ಗರಿಗರಿಯಾಗಿ ಬಿಚ್ಚಿಕೊಳ್ಳತ್ತದೆ ಎಂಬುದಕ್ಕೆ ಇಲ್ಲಿನ ಕಲಾಕೃತಿಗಳೇ ನಿದರ್ಶನ. ಕಲಾಕೃತಿಗಳ ಹಿಂದಿನ ಉದ್ದೇಶ, ಸಂಯೋಜನೆ, ತಂತ್ರಗಾರಿಕೆ, ಪ್ರತಿಮೆಗಳ ಶೈಲಿ, ಅರ್ಥಸಾಧ್ಯತೆ ಹೀಗೆ ಹಲವು ನೆಲೆಗಳಲ್ಲಿ ಅಧ್ಯಯನ ಮಾಡಲಾಗುವುದು.

೧. ಯುದ್ಧ ಮತ್ತು ಶಾಂತಿ (೧೯೮೩)

ಇದರಲ್ಲಿ ಯುದ್ಧದ ಸಂಕೇತವಾಗಿ ಕತ್ತಿ, ಡಾಲು ಪ್ರಮುಖವಾಗಿ ಪ್ರತಿಬಿಂಬಿಸಲ್ಪಟ್ಟಿದೆ. ಕಿರೀಟಧಾರಿ ರಾಜನ ಭಾವಚಿತ್ರ ಅದರ ಹಿನ್ನೆಲೆಯಲ್ಲಿ ಸಂಕೋಲೆಯ ಚಿತ್ರ ದಾಸ್ಯದ ಸಂಕೇತವಾಗಿ ರಚಿತವಾಗಿದೆ. ಯುದ್ಧದ ಹಾಗೂ ಆ ಸಂಕೋಲೆ (ಸರಪಳಿ)ಯನ್ನು ಗಂಟೆಯ ನಾಲಿಗೆಗೆ ಬಿಗಿದಿರುವುದು ಯುದ್ಧದ ಸಂದೇಶ ಸಾರುವ ಸೂಚನೆಯನ್ನು ನೀಡುವಂತಿದೆ. ಈ ಕಡೆ ಗಂಟೆಯ ನಾದ ಮೊಳಗಿದಾಗ ಎಚ್ಚರಗೊಂಡ ಸೈನಿಕರು ದಾಳಿಗೆ ಸನ್ನದ್ಧರಾಗುವ ಭಾವ ಸ್ಫುರಿಸುತ್ತದೆ. ಹಾಗೆಯೇ ಚಿತ್ರದ ಹಿನ್ನೆಲೆಯಲ್ಲಿ ಒಟ್ಟಾರೆ ಕಡುಗೆಂಪು ವರ್ಣ ಭಯ ಮತ್ತು ಸ್ಥೈರ್ಯದ ಸಂಕೇತವಾಗಿ ಪ್ರಯೋಗಿಸಲ್ಪಟ್ಟಿರುವುದು ಯುದ್ಧದ ಸಂಕೇತಕ್ಕೆ ಇನ್ನೂ ಹೆಚ್ಚು ಪ್ರಬಲವಾಗಿ ಪುಷ್ಟೀಕರಿಸುತ್ತದೆ. ಚಿತ್ರದ ಕೆಳಭಾಗದಲ್ಲಿ ಸ್ಥಿರವಾಗಿ ಕುಳಿತಿರುವ ನಂದಿಯ ಚಿತ್ರ ಹಾಗೂ ಅಚಲವಾಗಿ ನಿಂತಿರುವ ಕಂಬದ ವಿನ್ಯಾಸ ಸುಭದ್ರ ಹಾಗೂ ಚಿರಶಾಂತಿಯನ್ನು ಸಾರುವ ನೀಲವರ್ಣ ಸಾಂಕೇತಿಕವಾಗಿ ಬಳಸಲ್ಪಟ್ಟಿದೆ. ಹೀಗೆ ಕೆಂಪು ವರ್ಣ ಯುದ್ಧದ ಪರಿಕಲ್ಪನೆಗೆ ಹಾಗೂ ನೀಲವರ್ಣ ಚಿರಶಾಂತಿಗೆ ಸಮ್ಮಿಳಿತವಾಗಿದೆ.





೧. ಯುದ್ಧ ಮತ್ತು ಶಾಂತಿ, ೧೯೮೩





೨. ಅವಳು, ೧೯೮೮

ದಟ್ಟ ರೇಖಾ ಆಕೃತಿಯೊಳಗೆ ವಿವಿಧ ಅರ್ಥಸಾಧ್ಯತೆಗಳನ್ನು ಪ್ರಕಟಿಸುವ ವರ್ಣಗಳನ್ನು ಕೃತಿಯ ಆಶಯಕ್ಕೆ ಪೂರಕವಾಗಿ ದುಡಿಸಿಕೊಂಡ ಹಿರೇಗೌಡರು ಇಲ್ಲಿನ ಪ್ರತಿಮೆಗಳಲ್ಲಿ ಶಿಲ್ಪಗಳ ಪ್ರಭಾವವನ್ನು ಅನುಸರಿಸಿದ್ದಾರೆ. ಕಾಗದದ ಮಧ್ಯಭಾಗಕ್ಕೆ ಎಲ್ಲ ಆಕೃತಿಗಳನ್ನು ಸಂಯೋಜಿಸಿರುವ ಕ್ರಮ ಮತ್ತು ಅವುಗಳನ್ನು ಅಂತಸ್ತುಗಳಂತೆ ಚಿತ್ರಿಸಿದ್ದಾರೆ. ತನ್ಮೂಲಕ ಎಲ್ಲ ಪ್ರತಿಮೆಗಳಿಗೆ ಚಿತ್ರದ ಶೀರ್ಷಿಕೆ ಪೂರಕವಾಗುವ ಸಂಬಂಧವನ್ನು ಅರ್ಥ ಸಾಧ್ಯತೆಯನ್ನು ಕಲ್ಪಿಸಿದ್ದಾರೆ. ಯುದ್ಧದ ಸಂಕೋಲೆಗೆ ರಾಜನ ಪ್ರತಿಮೆಯಲ್ಲಿ ಸಂಕೋಲೆಯ ಭಾವವನ್ನು ಸ್ಪಷ್ಟವಾಗಿ ಗ್ರಹಿಸಿದ ಹಿರೇಗೌಡರು ಕಾಗದದ ಇತರ ಅವಕಾಶವನ್ನೇ ಪ್ರತಿಮೆಗಳಿಗೆ ಬೆಳಕಿನ ಛಾಯೆಯಾಗಿ ದುಡಿಸಿಕೊಂಡಿರುವ ಕ್ರಮ ಇಲ್ಲಿದೆ. ಪ್ರಖರ ವರ್ಣಗಳಿಂದ ರಚಿತವಾದ ಈ ಕೃತಿಯಲ್ಲಿ ಚಪ್ಪಟೆಯಾದ ವರ್ಣ ಲೇಪನದಿಂದ ಈ ಕೃತಿ ವುಡ್‌ಕಟ್‌ನ ಪ್ರಿಂಟ್‌ನಂತೆಯೂ ಗೋಚರವಾಗುತ್ತದೆ.

**೨. ಅವಳು (೧೯೮೮)**

ಮುಡಿಯಲ್ಲಿ ಪುಷ್ಪವನ್ನಲಂಕರಿಸಿಕೊಂಡ ಶೃಂಗಾರ ಭಾವದ ಸ್ತ್ರೀ ನೋಡುಗನನ್ನು ತನ್ನೆಡೆಗೆ ಆಕರ್ಷಿಸಲು ಕಿರುನೋಟ ಬೀರುತ್ತಿರುವವುದನ್ನು ಅಭಿವ್ಯಕ್ತಿಸುವುದು ಕೃತಿಯ ಒಳನೋಟ. ಯುವತಿಯ ಒಳನೋಟ ಹಾಗೂ ಹೊರನೋಟಕ್ಕೆ ಲಾಲಿತ್ಯವನ್ನು ಸೃಷ್ಟಿಸುವಲ್ಲಿ ಪ್ರಮುಖವಾಗಿ ಬಳಸಿರುವ ಕಿತ್ತಳೆ ಹಾಗೂ ನೀಲಿ ವರ್ಣಗಳು ಪುಷ್ಟೀಕರಿಸಿ ಚಿತ್ರವನ್ನು ಪೂರ್ಣಗೊಳಿಸಲಾಗಿದೆ. ಸಂಯೋಜನೆಯನ್ನು ಸ್ಪಷ್ಟವಾಗಿಸುವ ರೇಖೆಗಳನ್ನು ರಬ್ಬರ್ ಸಲೂಷನ್‌ನ ಬಳಸಿ ಮೂಡಿಸಲಾಗಿದ್ದು ಅವು ಇಡೀ ಅವಕಾಶವನ್ನು ಲಾಲಿತ್ಯ ಪೂರ್ಣವಾಗಿ ವಿಭಾಗಿಸುವುದರ ಮೂಲಕ ಆಕೃತಿಗೆ ಸ್ಪಷ್ಟ ಭಾವವನ್ನು ತುಂಬುತ್ತವೆ. ಒಟ್ಟಾರೆ ಕಲಾಕೃತಿಯಲ್ಲಿ ದಟ್ಟವರ್ಣಗಳ ವಿನ್ಯಾಸ, ಅಲ್ಲಲ್ಲಿ ಪೂರಕವರ್ಣಗಳನ್ನು ರೇಖೆಗಳಿಂದ ವಿಭಾಗಿಸಿದ ಜ್ಯಾಮಿತಿಗಳಿಂದ ಸ್ತ್ರೀ ಪರವಾದ ಲಾಲಿತ್ಯದ ಅನುಭವ ಪ್ರಕಟಿಸುವ ಆಶಯವನ್ನು ಹೊಂದಿದ್ದಾರೆ. ಸ್ತ್ರೀ ಮುಖದಲ್ಲಿ ಅಲ್ಪ ರೇಖಾ ವಿನ್ಯಾಸಗಳಿಂದಲೇ ಶೃಂಗಾರಕ್ಕೆ, ಸಂಕೋಚದ ಭಾವವನ್ನು ಹೇಗೆ ಪ್ರಕಟಿಸಬಹುದು ಎಂಬುದಕ್ಕೆ ಈ ಕೃತಿ ಒಂದು ಉತ್ತಮೋತ್ತಮ ನಿದರ್ಶನವಾದೀತು. ನೈಜತೆಯನ್ನು (ಆಧುನಿಕವಾಗಿ) ವಿರೂಪಗೊಳಿಸುವುದರ ಮೂಲಕ ಸಂಕ್ಷೇಪಯುಕ್ತ ಆಕೃತಿಯೊಂದರಿಂದ ಭಾವಸ್ಫುರಣಗೊಳ್ಳುವ ವಿಧಾನದಿಂದ ಈ ಕಲಾಕೃತಿ ಅನನ್ಯವೆನಿಸುತ್ತದೆ.

**೩. ಕಾರ್ಮಿಕ (೧೯೮೮)**

ಸಾಮಾನ್ಯ ನೋಟಕ್ಕೆ ಬೆಂಕಿ ಹುಳ ಅಥವಾ ಬೆಳಕಿನ ಹುಳಗಳು ಹಾರಾಡುತ್ತಿವೆಯೇನೋ ಎಂಬ ಭಾವ ಸೃಷ್ಟಿಯಾಗುತ್ತದೆ. ಆದರೆ ಆ ರೇಖಾ ವಿನ್ಯಾಸದ ಸಮ್ಮಿಶ್ರಣದಿಂದಾಗಿ ಒಬ್ಬ ಕೈಗಾಡಿ ಎಳೆದುಕೊಂಡು ಹೋಗುತ್ತಿರುವ ದೈನ್ಯ ಭಾವ ಸ್ಫುರಿಸುವ ಕಾರ್ಮಿಕನ ಚಿತ್ರವಿದು.ಇಲ್ಲಿ ಕಾರ್ಮಿಕನ ಪರಿಶ್ರಮದ ಭಾವ ಹಾಗೂ ನೋವು ವಿಶೇಷವಾಗಿ ವ್ಯಕ್ತವಾಗುತ್ತದೆ. ಹಿಂದಿನ ಕಲಾಕೃತಿಯಂತೆ ರಚನೆಗೊಂಡ ಇದೊಂದು ಪ್ರಾಯೋಗಿಕ ಚಿತ್ರ. ಇಲ್ಲಿ ರಬ್ಬರ್ ಸಲೂಷನ್ ಬಳಸಿ ವಿನ್ಯಾಸದ ಬಾಹ್ಯ ರೇಷೆಯನ್ನು ರಚಿಸಲಾಗಿದೆ. ಸಂಕ್ಷೇಪಯುಕ್ತ ರೇಖೆಗಳಿಂದ ಭಾವಸ್ಫುರಣೆಗೊಳಿಸುವ ತವಕಕ್ಕೆ



೩. ಕಾರ್ಮಿಕರು, ೧೯೮೮



೪. ಸ್ಥಿರ ಚಿತ್ರಣ. ೧೯೮೯

ಒಳಗಾದ ಹಿರೇಗೌಡರು, ತನ್ಮೂಲಕ ಕೃತಿಯ ಉದ್ದೇಶಿತ ಅರ್ಥಸಾಧ್ಯತೆಯನ್ನು ಸ್ಪಷ್ಟೀಕರಿಸುತ್ತಾರೆ. ಕೃತಿಯ ಆಶಯಕ್ಕೆ ಬದ್ಧರಾದ ಹಿರೇಗೌಡರು ಬಹು ತಂತ್ರಯುಕ್ತವಾದ ಮೈವಳಿಕೆಯನ್ನು ಸೃಷ್ಟಿಸಿರುವುದರಿಂದ ಫೈಬರ್ ಗ್ಲಾಸನ ಹಿಂದೆ ಪರಿಪೂರ್ಣ ಕಲಾಕೃತಿಯೊಂದನ್ನು ನೋಡಿದ ಅನುಭವ ದಕ್ಕುತ್ತದೆ. ಅಲ್ಪ ವರ್ಣಗಳ ಮೇಳದಿಂದ ಕತ್ತಲೆ ಹಾಗೂ ಬೆಳಕಿನ ಛಾಯೆಗಳ ಪ್ರಯೋಗ ವಿಶಿಷ್ಟ ಅನುಭವ ನೀಡುತ್ತದೆ.

**೪. ಸ್ಥಿರಚಿತ್ರಣ (೧೯೮೯)**

ಈ ಚಿತ್ರದಲ್ಲಿ ಬಳಕೆಯಾಗಿರುವ ಹಣ್ಣು, ಹೂವು, ಎಲೆ ಹಾಗೂ ಬುಟ್ಟಿಯ ಪರಿಕಲ್ಪನೆ ಅಮೂರ್ತವಾಗಿದ್ದು ವಿಶೇಷ ಹಾಗೂ ವಿಶಿಷ್ಟವಾಗಿದೆ. ವರ್ಣ ಸಂಯೋಜನೆಯಲ್ಲಿಯೂ ಸಹ ಒಂದು ವಿಶೇಷ ಪ್ರಾಯೋಗಿಕ ಪರಿಕಲ್ಪನೆ ಅನುಭವವಾಗುತ್ತದೆ. ಇಲ್ಲಿ ಉಪಯೋಗಿಸಿರುವ ಕಡು ವರ್ಣಗಳು ನೇರವಾಗಿ ಹೃದಯವನ್ನು ತಟ್ಟುತ್ತವೆ. ಮನಸ್ಸಿಗೆ ಆಹ್ಲಾದಕರ ಭಾವವನ್ನು ನೀಡುತ್ತವೆ. ಕುಂಚದ ಬೀಸಿನಲ್ಲಿ ಹೆಚ್ಚಿನ ಪ್ರಭಾವ ಕಾಣುವುದಿಲ್ಲ. ಆದರೆ ವರ್ಣ ಹಾಗೂ ಅದರ ಬಳಕೆಯ ವಿಧಾನದಲ್ಲಿ ಹೆಚ್ಚು ಪ್ರಬಲವಾಗಿರುವುದಲ್ಲದೇ ಸಂಯೋಜನಾ ತಂತ್ರದಲ್ಲಿ ವಿಭಿನ್ನವಾಗಿದ್ದು, ಕಾಗದದ ಇಡೀ ಅವಕಾಶದಲ್ಲಿ ತುಂಡು ತುಂಡಾಗಿ ರಚಿತಗೊಂಡಿರುವ ಆಯತಾಕಾರದ ವಿನ್ಯಾಸವನ್ನು ಹಣ್ಣು ಹಂಪಲಗಳು ಬೇಧಿಸುವ ಒಂದು ವಿಶಿಷ್ಟ ಸಂಯೋಜನಾ ಕ್ರಮ ಇಲ್ಲಿದೆ. ಕೆಂಪು ವರ್ಣದ ವಿವಿಧ ಶ್ರೇಣಿಯ ವರ್ಣಗಳ ಬೀಸುವಿಕೆಗಳು ವಿವಿಧ ಬಗೆಯ ವಿನ್ಯಾಸಗಳಿಂದ ಆವೃತವಾಗಿ ಅಲೆಗಳಂತಹ ಅನುಭವವನ್ನು ನೀಡುತ್ತವೆ. ಸ್ಥಿರ ಚಿತ್ರಣವೊಂದನ್ನು ಆಧುನಿಕವಾಗಿ ಹೇಗೆ ಚಿತ್ರಿಸಬಹುದು ಮತ್ತು ಅವುಗಳನ್ನು ವಿಭಿನ್ನವಾಗಿ ಸಂಯೋಜಿಸುವ ಪ್ರಯೋಗಾರ್ಥ ಕ್ರಮವನ್ನು ಇಲ್ಲಿ ಅಧ್ಯಯನ ಮಾಡಬಹುದು.

**೫. ಅಡ್ಡರಸ್ತೆಗಳು (೧೯೮೯)**

ನಗರ ಪ್ರದೇಶದಲ್ಲಿ ಇತ್ತೀತ್ತಲಾಗಿ ವಾಹನ ಸಂಚಾರ ಎಂಬುದು ಒಂದು ಜ್ವಲಂತ ಸಮಸ್ಯೆಯಾಗಿದ್ದು ನಗರವಾಸಿಗಳಿಗೆ ಆಗುತ್ತಿರುವ ಕಹಿ ಅನುಭವವೆಂದೇ ಹೇಳಬೇಕು. ನಗರ ನಾಗರಿಕ ತನ್ನ ದಿನನಿತ್ಯದ ಕಾರ್ಯಕ್ಕಾಗಿ ಮನೆ ಬಿಟ್ಟು ಹೊರ ಹೊರಟರೆ ಬಸ್ ಹಿಡಿಯುವ ಕಾತರ, ನಗರದ ವಿವಿಧ ಪ್ರಮುಖ ರಸ್ತೆ, ವೃತ್ತಗಳು, ಅಡ್ಡ ರಸ್ತೆಗಳನ್ನು ಅವಸರದಿಂದ ದಾಟುವ ಸಂದರ್ಭಗಳಲ್ಲಿ ಆಗುವ ಅಪಘಾತಗಳಿಂದ ಜೀವ ಹಾನಿ, ವಿವಿಧ ತೊಂದರೆಗಳನ್ನು ಅನುಭವಿಸುತ್ತಾನೆ. ವಾಹನ ಚಾಲನೆಯ ಅನುಭವದ ಕೊರತೆಯಿಂದ ಅಪಘಾತವಾಗಿ ವಿಚಾರಣೆ, ಶಿಕ್ಷೆ ಹೀಗೆ ಸಮಸ್ಯೆಗೆ ಒಳಗಾದ ಮನೋಸ್ಥಿತಿಯನ್ನು ಈ ಚಿತ್ರ ಬಿತ್ತರಿಸುತ್ತದೆ.[೧] ಒಟ್ಟಾರೆ ಈ ಚಿತ್ರ ಭ್ರಮ ನಿರಸನ, ಸಿಟ್ಟು, ಆಘಾತ, ಜೀವನದ ಅಸ್ಥಿರತೆ, ಸಾವು ನೋವು ಇತ್ಯಾದಿ ಮಾನಸಿಕ ಒತ್ತಡಗಳಿಂದಾಗುವ ಕಹಿ ಅನುಭವವನ್ನು ದೃಶ್ಯಾತ್ಮಕವಾಗಿ ಬಿಂಬಿಸುವ ಒಂದು ಅನನ್ಯ ಕೃತಿ. ಈ ಹಿನ್ನೆಲೆಯಲ್ಲಿ

---

೦೧. ವಿ.ಬಿ.ಹಿರೇಗೌಡರ ಅಭಿಪ್ರಾಯ



೫. ಅಡ್ಡ ರಸ್ತೆಗಳು, ೧೯೮೯




೬. ಧಾರ್ಮಿಕ ಸೌಹಾರ್ದತೆ, ೧೯೯೨

ಲಾಲಿತ್ಯಪೂರ್ಣವಾಗಿ ಕಾಗದದ ಅವಕಾಶದಲ್ಲಿ ಹರಿದಾಡಿದ ಕುಂಚದ ಬೀಸುಗಳು ಮುಖ್ಯ ಆಶಯವಾಗಿದ್ದು ಅವು ನಗರದ ರಸ್ತೆಗಳ ರೂಪಾರ್ಥವಾಗಿವೆ. ಅವುಗಳನ್ನು ಭೇದಿಸುವ ಆಯತಾಕಾರಗಳು ನಗರದ ಪಕ್ಷಿನೋಟದಂತೆ ಭಾಸವಾಗುತ್ತವೆ. ಚಿತ್ರ ೬೮ರ ಕ್ಯೂಬಿಸ್ಟ ರಚನಾ ವಿನ್ಯಾಸ ಈ ಕೃತಿಯಲ್ಲೂ ಇದ್ದು ಅದನ್ನು ತಡೆದು ಹಾಕುವ ಪ್ರಯತ್ನವೆಂಬಂತೆ ರಸ್ತೆಗಳ ರೂಪಾರ್ಥದ ಬೀಸುಗಳು ಒತ್ತಡದಿಂದ ಕಾರ್ಯನಿರ್ವಹಿಸುತ್ತಿವೆ. ಈ ಹಿನ್ನೆಲೆಯಲ್ಲಿ ಇಲ್ಲಿನ ವರ್ಣರಚನೆ ಮತ್ತು ಆಕಾರಗಳ ರಚನೆಯನ್ವಯ ಈ ಕೃತಿ ಕಾಲಬದ್ಧ ಕ್ರಿಯೆಯನ್ನು ಸ್ಫುರಿಸುತ್ತವೆ. ಕೆಂಪು ವರ್ಣದ ವಿವಿಧ ಶ್ರೇಣಿಗಳಲ್ಲಿ ಆಯತಾಕಾರದಲ್ಲಿ ಲೇಪಿತವಾಗಿರುವ ವರ್ಣಗಳು ವಿವಿಧ ಬಗೆಯ ಮೈವಳಿಕೆಯನ್ನು ಹೊಂದಿದ್ದು ಅವು ಸಹ ನಗರದ ಜಂಜಡದ ಅನುಭವಕ್ಕೆ ಸಮೀಪವೆನಿಸುತ್ತವೆ.

**೬. ಧಾರ್ಮಿಕ ಸೌಹಾರ್ದತೆ (೧೯೯೨)**

ವಿವಿಧ ಜಾತಿ, ಧರ್ಮ, ಭಾಷೆ, ಸಂಸ್ಕೃತಿಗಳಿಂದ ಭಾರತ ವೈವಿಧ್ಯಮಯ ದೇಶವಾಗಿವೆ. ಇವೆಲ್ಲವನ್ನೂ ಬದಿಗಿರಿಸಿ ಸಾರ್ವಜನಿಕ ರಂಗಕ್ಕೆ ಬಂದಾಗ ನಾವೆಲ್ಲಾ ಒಂದು, ನಾವೆಲ್ಲಾ ಭಾರತೀಯರು, ನಾವೆಲ್ಲರೂ ಭಾರತ ಮಾತೆಯ ಮಕ್ಕಳೆಂಬ ತತ್ವವನ್ನಾಧರಿಸಿ, ಅನೇಕತೆಯಲ್ಲಿ ಏಕತೆಯನ್ನು ಸಾರುತ್ತಾ ಅನಿವಾರ್ಯದ ಜೀವನವನ್ನು ಸಾಗಿಸುತ್ತಿರುವುದು ನಾವೆಲ್ಲರೂ ಕಂಡ ಸತ್ಯವಾಗಿದೆ. ಬಾಬರಿ ಮಸೀದಿಯನ್ನು ಧ್ವಂಸಗೊಳಿಸಿದ ಸಂದರ್ಭದಲ್ಲಿ ಅನೇಕ ಸಂಘಟನೆಗಳು ತಮ್ಮದೇ ಆದ ರೀತಿಯಲ್ಲಿ ಶಾಂತಿಯಾತ್ರೆಗಳನ್ನು ನಡೆಸಿದರು. ಈ ಕುರಿತಂತೆ ೧೯೯೨ರ ಸಂದರ್ಭದಲ್ಲಿ ರಾಮಜನ್ಮ ಭೂಮಿ ವಿಚಾರವಾಗಿ ವಿಶ್ವಹಿಂದೂ ಪರಿಷತ್ ದೇಶದಾದ್ಯಂತ ಶ್ರೀರಾಮ ಜ್ಯೋತಿ ಶಾಂತಿ ಯಾತ್ರೆಯನ್ನು ಸಂಘಟಿಸಿದಾಗ ಕೆಲವು ನಗರಗಳಲ್ಲಿ ಈ ಯಾತ್ರೆ ಕೋಮು ಗಲಭೆಗೆ ಪರಿವರ್ತನೆಗೊಂಡು ಸಾವಿರಾರು ಜನ ಅಮಾಯಕರು ಸಾವನ್ನಪ್ಪಿದರು. ಶಾಂತಿ ಯಾತ್ರೆ ಅಶಾಂತಿಯ ರಣರಂಗವಾಗಿ ಪರಿವರ್ತಿತಗೊಂಡಿತು. ಇದರ ಹಿನ್ನೆಲೆಯಲ್ಲಿ ಕೋಮು ಸೌಹಾರ್ದ ಎಂಬ ಸರಣಿ ಚಿತ್ರಗಳನ್ನು ಹಿರೇಗೌಡರು ರಚಿಸಿದ್ದು ರಾಷ್ಟ್ರೀಯ ಭಾವೈಕ್ಯತೆಗೆ ಹಿಡಿದ ಕನ್ನಡಿಯಾಗಿದೆ.

ನಮ್ಮಲ್ಲಿ ಹರಿವ ರಕ್ತ ಕೆಂಪು. ನಾವು ಬದುಕುವ ನೆಲ ಭಾರತ. ನಮ್ಮ ವೈಯಕ್ತಿಕ ಆಚರಣೆಗಳು ಮನೆಯಲ್ಲಿರಲಿ. ಸಾಮಾಜಿಕ ರಂಗದಲ್ಲಿ ನಿಮಗಾಗಿ ನಾನು, ನಮಗಾಗಿ ನೀವು ಎಂಬ ಬೀಜ ಮಂತ್ರ ನಮ್ಮದಾಗಲಿ ಎಂದು ಸಾರುವುದೇ ಈ ಚಿತ್ರದ ಉದ್ದೇಶ[೨] ಕಥನವನ್ನು ಸಾರ್ಥಕಗೊಳಿಸುವಲ್ಲಿ ಇಲ್ಲಿನ ಆಕೃತಿಗಳು ಬಹು ಮುಖ್ಯ ಪಾತ್ರವಹಿಸುತ್ತವೆ. ಅವಕಾಶದ ಎಡಭಾಗದ ಅರ್ಧದಲ್ಲಿ ಆಕೃತಿಗಳನ್ನು ದಟ್ಟವಾಗಿ ಸಂಯೋಜಿಸಿದ್ದರೆ, ಬಲಭಾಗದ ಅರ್ಧದಲ್ಲಿ ಮುಸ್ಲಿಂ ಧರ್ಮದ ಸಂಕೇತವನ್ನು ಪ್ರತಿಷ್ಠಾಪಿಸಲಾಗಿದೆ. ಆಯತಾಕಾರದ ಆಕೃತಿಗಳು ಅವಕಾಶದ ತುಂಬ ತೆಳು ವರ್ಣದ ಹಿನ್ನೆಲೆಯನ್ನು ಸೃಷ್ಟಿಸಿವೆ. ಈ ಹಿನ್ನೆಲೆಯು ಮುನ್ನೆಲೆಯಾಗಿ ಕಲಾಕೃತಿಯ ಆಶಯಕ್ಕೆ ಪೂರಕವಾದ ಆಕೃತಿಗಳು ಧಾರ್ಮಿಕ ಸಂಕೇತಗಳ ವಿನ್ಯಾಸದ ಮೂಲಕವಾಗಿ ಮೈದಳೆದಿವೆ. ಈ ಸಂಕೇತಗಳಿಗೆ ಮತ್ತೆ ದಟ್ಟ ಛಾಯೆಗಳ ಯಥಾದರ್ಶನದ ನೋಟದಂತೆ ಕಾಣುವ ವಿನ್ಯಾಸದಲ್ಲಿ ಓಂಕಾರ, ಭಗವದ್ವಜ,

---

೦೨. ಎ.ಬಿ.ಹಿರೇಗೌಡರ ಅಭಿಪ್ರಾಯ



೭. ಪ್ರಕೃತಿ, ೧೯೯೨



೮. ಸಂಯೋಜನೆ, ೧೯೯೯

ಚಕ್ರ, ರಾಮ ಜನ್ಮಭೂಮಿ ಎಂಬ ಅಕ್ಷರ ವಿನ್ಯಾಸಗಳನ್ನು ಹಿರೇಗೌಡರು ಚಿತ್ರಿಸಿದ್ದಾರೆ. ಧಾರ್ಮಿಕ ವಿವಾದಗಳು ಚದುರಂಗದಂತೆ ಎಂಬ ಸಂದೇಶವನ್ನು ನೀಡಲು ಕಾಗದದ ಮೇಲ್ಭಾಗದಲ್ಲಿ ಚದುರಂಗದ ವಿನ್ಯಾಸವನ್ನೂ ಚಿತ್ರಿಸಿದ್ದಾರೆ. ಪ್ರಖರ ಅಥವಾ ಪ್ರಾಥಮಿಕ ವರ್ಣಗಳಿಮದ ಕೂಡಿದ ಹಿಂದಿನ ಕಲಾಕೃತಿಗಳಿಗೆ ಈ ಕಲಾಕೃತಿಯನ್ನು ಹೋಲಿಸಿದರೆ, ಚತುರ್ಥಶ್ರೇಣಿಯ ವರ್ಣವಿನ್ಯಾಸಗಳಿಗೆ ಹಿರೇಗೌಡರು ಆದ್ಯತೆ ನೀಡಿದ್ದಾರೆ. ಹೀಗಾಗಿ ಒಟ್ಟು ಕಲಾಕೃತಿಯು ಪ್ರಶಾಂತ ಅನುಭವವನ್ನು ನೀಡುತ್ತದೆ.

**೭. ಪ್ರಕೃತಿ (೧೯೯೨)**

ಪ್ರಕೃತಿ ಎಂದಾಕ್ಷಣ ಪ್ರತಿಯೊಬ್ಬರ ಸ್ಮೃತಿಪಟಲದಲ್ಲಿ ಮೂಡುವುದು ಎಲೆ, ಹೂವು, ಹಣ್ಣು, ಗಿಡ, ಮರ, ನೀರು, ಗುಡ್ಡ, ಬೆಟ್ಟ ಇತ್ಯಾದಿ. ಕಲಾವಿದರಿಗೆ ಪ್ರಕೃತಿ ಪ್ರೇರಕ ವಸ್ತು. ಏಕೆಂದರೆ ಅದರ ಅನನ್ಯವಾದ ಆಕಾರ, ವರ್ಣ, ಸುವಾಸನೆ ಇವೆಲ್ಲ ಗುಣಲಕ್ಷಣಗಳು ಕಲಾವಿದನ ಸೃಜನಶೀಲತೆಯನ್ನು ಎಚ್ಚರಿಸಿ ಚಿತ್ರ ರಚನೆಗೆ ಪ್ರೇರೇಪಿಸುತ್ತವೆ. ಆ ಹಿನ್ನೆಲೆಯಲ್ಲಿ ಇದೊಂದು ಸುಂದರ ಪ್ರಕೃತಿಯನ್ನಾಧರಿಸಿದ ಪ್ರಯೋಗ. ಅಲಂಕಾರಿಕ ನೆಲೆಯಲ್ಲಿ ರಚಿತಗೊಂಡ ಕೃತಿ ಎಂದು ಹಿರೇಗೌಡರು ಹೇಳುತ್ತಾರೆ. ಆಕೃತಿಗಳಲ್ಲಿ ಅಲಂಕಾರಿಕ ಆಶಯಗಳನ್ನು ಆಧುನಿಕವಾಗಿ ದುಡಿಸಿಕೊಂಡ ಬಗೆ ಇಲ್ಲಿದೆ. ಚಪ್ಪಟೆಯಾದ ಹಿನ್ನೆಲೆಯಲ್ಲಿ ಆಯತಾಕಾರದ ವಿನ್ಯಾಸಗಳು, ಅವುಗಳಲ್ಲಿ ಪಾರದರ್ಶಕವೆಂಬಂತೆ ರಚನೆಗೊಂಡ ಎಲೆಗಳ ವಿನ್ಯಾಸವು ನೀಲವರ್ಣದಲ್ಲಿ ರಚನೆಯಾಗಿದ್ದು, ಅದಕ್ಕೆ ಪೂರಕವಾಗಿರುವ ಇತರ ಪ್ರಾಕೃತಿಕ ರಚನೆಗಳು ಹಳದಿ-ಕೆಂಪು ಮಿಶ್ರಿತ ವರ್ಣಗಳಿಂದ ಅಲಂಕಾರಿಕ ಶೈಲಿಯಲ್ಲಿ ರಚನೆಗೊಂಡಿವೆ. ಅಲಂಕಾರಿಕ ನೆಲೆಯಲ್ಲಿ ರಚನೆಗೊಂಡ ಪ್ರಾಕೃತಿಕ ರಚನೆಗಳನ್ನು ಹೊರತುಪಡಿಸಿದರೆ, ಹಿನ್ನೆಲೆಯಲ್ಲಿ ರಚನೆಗಳು ಕೂಬಿಸ್ಟ್ ಶೈಲಿಯನ್ನೇ ನೆನಪಿಸುತ್ತವೆ. ತಂಪುವರ್ಣಗಳ ಸಾಂಗತ್ಯದಿಂದ ಈ ಕೃತಿ ಹಿರೇಗೌಡರ ಇನ್ನಿತರ ಕೃತಿಗಳಿಗಿಂತ ವಿಭಿನ್ನವಾಗಿ ಗೋಚರವಾಗುತ್ತದೆ.

**೮. ಸಂಯೋಜನೆ (೧೯೯೯)**

ಇದೊಂದು ಅನತಿ ಎತ್ತರದ ಪ್ರದೇಶದಿಂದ ಗಮನಿಸಿದ ಉದ್ಯಮಗಳ ಸಂಕೀರ್ಣ ಪ್ರದೇಶದ ದೃಶ್ಯವಾಗಿದೆ. ಅನೇಕ ಬಾರಿ ವಾತಾವರಣದ ಪ್ರಭಾವದಿಂದ ಸಾಮನ್ಯವಾಗಿ ರಾತ್ರಿ ವೇಳೆ ಇಂಥ ಸಂಕೀರ್ಣ ಪ್ರದೇಶದಲ್ಲಿ ಕಾಣಬರುವ ಯಾವುದೇ ವಸ್ತು ತನ್ನ ನೈಜ ಆಕಾರ, ವರ್ಣ ಛಾಯೆಗಳನ್ನು ಕಳೆದುಕೊಂಡು ಇನ್ನೊಂದು ರೀತಿಯ ಅಮೂರ್ತ ಕಲ್ಪನೆಗಳನ್ನು ಸೃಷ್ಟಿಸಲು ಕಾರಣವಾಗುತ್ತದೆ. ಅಂತಹ ಉದ್ದೇಶದ ಹಿನ್ನೆಲೆಯಲ್ಲಿ ರಚಿತಗೊಂಡ ಕಲಾಕೃತಿ ಇದಾಗಿದೆ. ಇಲ್ಲಿ ಪ್ರಮುಖವಾಗಿ ಜ್ಯಾಮಿತಿ ಶೈಲಿಯ ಆಕಾರಗಳು ಕನಸಿನ ಲೋಕದಲ್ಲಿ ಮೂಡುವಂತಹ ವರ್ಣ ಹಾಗೂ ಛಾಯೆಗಳು ನೋಡುಗನನ್ನು ಭ್ರಮಾಲೋಕಕ್ಕೆ ಕರೆದೊಯ್ಯುವಂಥ ಸಂಯೋಜನೆ ಇದಾಗಿದೆ. ಚಲನಾತ್ಮಕ ನೆಲೆಯಲ್ಲಿ ರಚನೆಗೊಂಡಿರುವ ಆಯತಾಕಾರದ ಪಟ್ಟಿಕೆಗಳಲ್ಲಿ ಬಹುಭಾಗ ದಟ್ಟ ವರ್ಣಗಳ ಛಾಯೆಯಿಂದ ಕೂಡಿದ್ದು, ಅಲ್ಲಲ್ಲಿ ಸ್ಪರ್ಶಾತ್ಮಕ ರೀತಿಯಲ್ಲಿ ತೆಳು ನೀಲಿ ವರ್ಣವನ್ನು ಲೇಪಿಸಲಾಗಿದೆ.

ವಿಶೇಷವಾಗಿ ಪಟ್ಟಿಕೆಗಳ ಸಮೂಹವೆಂಬಂತೆ ಕಂಡು ಬರುವ ಇಲ್ಲಿನ ವಿನ್ಯಾಸಗಳಲ್ಲಿ ಅವುಗಳ ಸಂದಿನಿಂದ ಬೆಳಕಿನ ಕಿರಣಗಳು ಹಾದು ಅವುಗಳ ಮೇಲೆ ಪ್ರತಿಫಲನಗೊಂಡ ಅನುಭವವನ್ನು ಸಹ ಕಲಾಕೃತಿ ನೀಡುತ್ತದೆ. ಉದ್ಯಮನಗರದ ಪಕ್ಷಿನೋಟದ ಅಮೂರ್ತಬಗೆಯ ರೂಪಾರ್ಥಗಳಿಗೆ ಪೂರಕವಾಗಿ ಮೂರು ಹಂತದಲ್ಲಿ ಮಸುಕಾದ ಬಗೆಯಲ್ಲಿ ಸಂಯೋಜನೆಗೊಳಿಸಿದ ಹಿರೇಗೌಡರು ಮೇಲಿನ ಮೊದಲಹಂತದಲ್ಲಿ ಕೃತಿಯನ್ನು ಆಶಯವನ್ನು ಕೇಂದ್ರೀಕರಿಸುತ್ತಾರೆ. ಅದನ್ನು ಸಮತೋಲನಗೊಳಿಸಲು ಕೆಳಭಾಗದಲ್ಲಿ (ಮೂರನೆಯ ಹಂತ) ತೆಳು ವರ್ಣದ ಲೇಪನಗೊಳಿಸಿದ್ದಾರೆ. ಹೀಗೆ ವರ್ಣಗಾರಿಕೆ, ಸ್ಥಳಾವಕಾಶ, ಸಂಯೋಜನೆ, ರೂಪಾರ್ಥಗಳ ಸಮ್ಮಿಲನದಿಂದ ಈ ಕೃತಿ ಮಹತ್ವದ್ದು.

**೯. ಕೆಂಪು ಕಿಟಕಿ** (೨೦೦೨)

ಗಗನ ಚುಂಬಿ ಕಟ್ಟಡಗಳ ಸಂಕೀರ್ಣವನ್ನು ಗಮನಿಸಿದಾಗ ಅಲ್ಲೊಂದು ಜ್ಯಾಮಿತಿಕ ಶೈಲಿಯ ಅಮೂರ್ತ ಲೋಕದ ವಿನ್ಯಾಸಗಳು ಪ್ರತಿಬಿಂಬಿತವಾಗುತ್ತವೆ. ಕೃತಿಕಾರರ ಸೂಕ್ಷ್ಮ ನೋಟದಿಂದಾದ ಕಿಟಕಿಯ ಗಾಜಿನಲ್ಲಿ ಪ್ರತಿಬಿಂಬಿಸುವ ಬೆಳಕು, ವರ್ಣ ಒಂದು ಬಗೆಯ ವಿಶೇಷ ಅನುಭವ ನೀಡುತ್ತವೆ. ಕಲಾವಿದರ ಸೃಜನಶೀಲತೆಯ ಒಳನೋಟದಿಂದಾಗಿ ಕಲ್ಪನೆಯು ಗರಿಗೆದರಿ ವೈಚಿತ್ರಮಯ ಲೋಕವೊಂದು ಅನಾವರಣಗೊಳ್ಳುತ್ತದೆ. ಅದರ ಪರಿಣಾಮಗಳೆಲ್ಲ ಇಲ್ಲಿ ನಾಲ್ಕನೆಯ ಆಯಾಮದ ನೆಲೆಯಲ್ಲಿ ಸೃಷ್ಟಿಯಾಗಿರುವುದು. ಹಿಂದಿನ ಕಲಾಕೃತಿಯ ವಿನ್ಯಾಸಗಳ ಪುನರಾವರ್ತನೆ ಈ ಕೃತಿಯಲ್ಲಿ ಇದ್ದರೂ ಸಹ ಅವು ಅಲ್ಲಿಗಿಂತ ಇಲ್ಲಿ ದಟ್ಟವಾಗಿ, ಪ್ರಖರ ಹಾಗೂ ಪ್ರಶಾಂತ ವರ್ಣಗಳ ಸಾಂಗತ್ಯದಿಂದ ರಚಿತಗೊಂಡಿವೆ. ಜ್ಯಾಮಿತಿಕವಾದ ಆಕೃತಿಗಳೆಲ್ಲ ನೇರವಾಗಿದ್ದು, ಕೆಲವು ಆಕೃತಿಗಳಲ್ಲಿ ವರ್ಣಗಳು ಕ್ರಮೇಣ ದಟ್ಟತೆಯಿಂದ ಕ್ರಮೇಣ ಬೆಳಕಿನ ಛಾಯೆಯಂತೆ ತೋರುತ್ತವೆ. ಅಂಚಿನಲ್ಲಿ ದಟ್ಟ ಛಾಯೆಗಳನ್ನು ಸೃಷ್ಟಿಸಿರುವ ಹಿರೇಗೌಡರು ಕ್ರಮೇಣ ಒಳಭಾಗದಲ್ಲಿ ತೆಳುವರ್ಣವನ್ನು ಕೇಂದ್ರೀಕರಿಸುವ ತಂತ್ರವನ್ನು ಅನುಸರಿಸಿ, ಕಲಾಕೃತಿಯನ್ನು ಕೇಂದ್ರೀಕರಿಸುವ ಭಾಗವನ್ನು ಪ್ರಖರಗೊಳಿಸುತ್ತಾರೆ. ಅಷ್ಟ ದಿಕ್ಕುಗಳಿಂದ ಹರಿದು ಒಳಬರುವ ಪಟ್ಟಿಕೆಗಳ ಆಕೃತಿಗಳು ಮಿಂಚಿನಂತೆ ಹೊಳಹು ನೀಡಿ ಕಣ್ಮರೆಯಾಗುವಂತಹ ಅನುಭವವನ್ನು ನೀಡುವ ಇಲ್ಲಿನ ವಿನ್ಯಾಸಗಳು, ನೈಜ ಅನುಭವಕ್ಕೆ ಇನ್ನೊಂದು ಬಗೆಯ ಅಮೂರ್ತ ಅನುಭವ ಗರಿಗೆದರುವ ಹಿರೇಗೌಡರ ತಂತ್ರ ಇಲ್ಲಿ ದೃಶ್ಯಾತ್ಮಕವಾಗಿ ಮೈದೆಳೆದಿದೆ.

**೧೦. ಭಗವಂತ** (೨೦೦೨)

ಭಾರತೀಯರು ದೇವಾನುದೇವತೆಗಳನ್ನು ನಂಬುವಲ್ಲಿ ಮೊದಲಿಗರು. ಆಸ್ತಿಕ ದೇವರ ಪೂಜೆಯಿಂದ ದಿನವನ್ನು ಆರಂಭಿಸುವುದರೊಂದಿಗೆ ತನ್ನ ನಿತ್ಯ ಕಾಯಕದ ಫಲವನ್ನು ದೇವರಿಗೆ ಅರ್ಪಿಸಿ, ಪುನಃ ರಾತ್ರಿ ಮಲಗುವಾಗ ದೇವರನ್ನು ನೆನೆಯುತ್ತಾನೆ. ಆಸ್ತಿಕರೆಲ್ಲ ದೈವ ಪೂಜೆಯಲ್ಲಿ ತಮ್ಮ ಬದುಕಿನ ಸಾರ್ಥಕತೆಯನ್ನು, ಯಶಸ್ಸನ್ನು ದೇವರೆದುರಿಗೆ ಅರಿಕೆ ಮಾಡಿಕೊಳ್ಳುತ್ತಾರೆ. ಇದು ಆಸ್ತಿಕನ ಅಂತರಂಗಕ್ಕೆ ಅನ್ವಯಿಸುವ ವಿಚಾರವಾಗಿದೆ. ಈ ಹಿನ್ನೆಲೆಯಲ್ಲಿ ಸಾಕಾರಗೊಂಡ ಭಗವಂತನ




೧೧. ನಕ್ಷತ್ರ ಯುದ್ಧ, ೨೦೦೨



೧೨. ನಕ್ಷತ್ರ ಯುದ್ಧ, ೨೦೦೨

ಕಲ್ಪನೆಯ ರೂಪಗಳನ್ನು ಅವರವರ ಧಾರ್ಮಿಕ ಸಿದ್ಧಾಂತಗಳಿಗನುಗುಣವಾಗಿ ಭಕ್ತಿ ಮತ್ತು ಆಚರಣೆಗಳ ಮುಖಾಂತರ ತಮ್ಮ ಬದುಕಿನಲ್ಲಿ ಆತ್ಮ ಶುದ್ಧಿ ಹಾಗೂ ಶಾಂತಿಯನ್ನು ಕಂಡುಕೊಳ್ಳುತ್ತಾ, ಅನಾದಿ ಕಾಲದಿಂದಲೂ ಪೂಜಾ ವಿಧಿ ವಿಧಾನಗಳನ್ನು ಪರಿಪಾಲಿಸಿಕೊಂಡು ಬಂದಿದ್ದಾನೆ. ಅಂತಹ ದೈವ ಸ್ವರೂಪ ಕಾಣಲು ಪುರಾಣ ಪುಣ್ಯ ಕಥೆಗಳನ್ನು ಆಧಾರವಾಗಿಟ್ಟುಕೊಂಡು ದೇವಾನುದೇವತೆಗಳ ಕಲ್ಪನೆಗಳನ್ನು ಸಾಂಕೇತಿಕವಾಗಿ ಮೂರ್ತ ಹಾಗೂ ಅಮೂರ್ತವಾಗಿ ಸೃಷ್ಟಿಸಿಕೊಂಡು ಬಂದಿದ್ದು ಅಂಥ ಕೆಲವು ದೈವ ಸ್ವರೂಪಗಳನ್ನು[೩] ಈ ಚಿತ್ರದಲ್ಲಿ ಹಿರೇಗೌಡರು ರಚಿಸಿರುವುದನ್ನು ಗಮನಿಸಬಹುದಾಗಿದೆ. ಚಿತ್ರದ ಕೆಲವು ಭಾಗ ಮೂರ್ತ ಸ್ವರೂಪವನ್ನು ಪಡೆದರೆ ಇನ್ನುಳಿದ ಭಾಗ ಅಮೂರ್ತ ಕಲ್ಪನೆಗೆ ಹೆಚ್ಚು ಎಡೆ ಮಾಡಿಕೊಟ್ಟಿದೆ. ಹೀಗಾಗಿ ಈ ಕಲಾಕೃತಿಯಲ್ಲಿ ಮೂರ್ತ ಮತ್ತು ಅಮೂರ್ತಗಳ ಸಮ್ಮಿಲನಗೊಂಡು ನೋಡುಗನನ್ನು ಮಾನಸಿಕವಾಗಿ ತರ್ಕದ ನೆಲೆಗೆ ಕೊಂಡೊಯ್ಯುವ ಗಟ್ಟಿತನ ಈ ಕಲಾಕೃತಿಗೆ ಇದೆ. ಬಹುತೇಕವಾಗಿ ನೀಲವರ್ಣವೇ ಪ್ರಧಾನವಾಗಿರುವ ಈ ಕೃತಿಯಲ್ಲಿ ಅಲ್ಲಲ್ಲಿ ಹಸಿರು ಮತ್ತು ಕೇಸರಿ ವರ್ಣಗಳು ವಿವಿಧ ಬಗೆಯ ಆಕೃತಿಗಳಿಗೆ ರೂಪಾರ್ಥ ನೀಡಿವೆ. ಅವಕಾಶದ ಮೇಲ್ಭಾಗದಿಂದ ತ್ರಿಕೋನಾಕಾರದ ವಿನ್ಯಾಸದಲ್ಲಿ ನೇತ್ರ, ಪುಷ್ಪದ ವಿನ್ಯಾಸಗಳು ಒಡಮೂಡಿವೆ. ಕೆಳಭಾಗದಲ್ಲಿ ಬಾಗಿಲಿನಂತಹ ವಿನ್ಯಾಸದೊಳಗೆ ಈಶ್ವರ ಲಿಂಗುವನ್ನು ಮೂರ್ತವಾಗಿ ಚಿತ್ರಿಸಿರುವ ಹಿರೇಗೌಡರು ಅದರ ಹಿಂದಿನ ಭಾಗದ ಆಕೃತಿಗಳನ್ನು ಅಮೂರ್ತಗೊಳಿಸುವ ಹಿನ್ನೆಲೆಯಲ್ಲಿ ಮಸುಕುಗೊಳಿಸುವ (ಹಿಂದಿನ ಕಲಾಕೃತಿಯ ಹಾಗೆ) ತಂತ್ರವನ್ನು ಇಲ್ಲಿಯೂ ಪುನರಾವರ್ತಿಸಿದ್ದಾರೆ. ಬೆಳಕಿನ ಕಿರಣಗಳಂತೆ ಚಪ್ಪಟೆಯಾಗಿ ಗೋಚರವಾಗುವ ಪಟ್ಟಿಕೆಗಳಂತೆ ಇತರ ಪಟ್ಟಿಕೆಗಳಲ್ಲಿ ದಟ್ಟ ವರ್ಣದ ಸಂಯೋಜನೆ ಅಡಗಿದೆ. ಕೃತಿಯಲ್ಲಿ ಬಹುತೇಕ ಪ್ರಮುಖ ಆಶಯ ಬಲಭಾಗಕ್ಕೆ ಸಂಯೋಜಿತಗೊಂಡಿದ್ದರೂ, ಸಮತೋಲನ ಕಾಯ್ದುಕೊಳ್ಳಲು ಎಡಭಾಗದಲ್ಲಿ ಹಾವಿನ ವಿನ್ಯಾಸಗಳೊಂದಿಗೆ ಇತರ ವಿನ್ಯಾಸಗಳು ಮಸುಕಾದ ನೆಲೆಯಲ್ಲಿ ಚಿತ್ರಿಗೊಂಡಿವೆ. ಹೀಗೆ ಮೂರ್ತ ಮತ್ತು ಅಮೂರ್ತತೆಗಳು ಮೈವೆತ್ತ ಈ ಕೃತಿ ಉತ್ತಮ ಪ್ರಯೋಗವೆನಿಸುತ್ತದೆ.

### ೧೧. ಮತ್ತು ೧೨. ನಕ್ಷತ್ರ ಯುದ್ಧ (ತಾರಾ ಸಮರ) (೨೦೦೨)

ಅನಾದಿ ಕಾಲದಿಂದಲೂ ಮನುಷ್ಯ ಸೂರ್ಯ, ಚಂದ್ರ ಮತ್ತು ನವಗ್ರಹಗಳನ್ನು ದೈವ ರೂಪದಲ್ಲಿ ಕಾಣುತ್ತಿದ್ದಾನೆ. ಅವುಗಳ ಆಚೆ ನಭೋ ಮಂಡಲದಲ್ಲಿ ಕಾಣುವ ನಕ್ಷತ್ರ ಪುಂಜಗಳನ್ನು ಅಷ್ಟಾಗಿ ವಿಶೇಷವೆಂದು ಪರಿಗಣಿಸಿರಲಿಲ್ಲ ಹಾಗೂ ಅವುಗಳ ಅಸ್ತಿತ್ವದ ಬಗ್ಗೆ ಚಿಂತನೆ ಮಾಡಿರಲಿಲ್ಲ. ಇವೆಲ್ಲಾ ಶಕ್ತಿಯ ಸಾಕಾರ ಸ್ವರೂಪಗಳೆಂದು ನಂಬಿ ಭಯ ಭಕ್ತಿಯಿಂದ ಪೂಜಿಸುತ್ತ ಬಂದಿದ್ದಾನೆ. ಆದರೆ ನಭೋ ಮಂಡಲದ ಬಗ್ಗೆ ನಿರಂತರವಾಗಿ ವೈಜ್ಞಾನಿಕ ಅಧ್ಯಯನ ನಡೆಸುತ್ತ ಅವುಗಳ ಅಸ್ತಿತ್ವ ಕುರಿತಾದ ಅನೇಕ ಪ್ರಯೋಗಗಳ ಫಲದಿಂದಾಗಿ ಭೂಮಿ, ಚಂದ್ರ, ಮಂಗಳನ ಆಚೆಗೆ ಕಂಡು ಬಂದಿರುವ ಇತರೆ ಗ್ರಹಗಳಲ್ಲಿಯೂ ಸಹ ಜೈವಿಕ ಶಕ್ತಿಗೆ ಪೂರಕವಾಗಬಲ್ಲ ಜಲ ಹಾಗೂ ವಾತಾವರಣ ಇತ್ಯಾದಿಗಳ ಜೊತೆಗೆ ಖನಿಜ ಸಂಪತ್ತು ಇರಬಹುದೆಂಬ ತಾರ್ಕಿಕ ಪ್ರಯೋಗಗಳು ನಡೆದಿವೆ.

೦೩. ವಿ.ಬಿ.ಹಿರೇಗೌಡರ ಅಭಿಪ್ರಾಯ



೧೩. ಸಂಯೋಜನೆ, ೨೦೦೩



೧೪. ಸ್ಫೋಟ. ೨೦೦೩

ಆಧುನಿಕ ತಂತ್ರಜ್ಞಾನದ ಫಲವಾಗಿ ಶತ ಶತಮಾನಗಳಿಂದ ವಿಶ್ವದ ವಿವಿಧ ದೇಶಗಳು ತಾರಾ ಲೋಕದತ್ತ ಪಯಣಿಸಿ ವೈಜ್ಞಾನಿಕ ಸತ್ಯಗಳನ್ನು ಕಂಡುಕೊಳ್ಳಲು ತಾರಾ ಸಮರವನ್ನೇ ಸಾರಿವೆ. ಇದನ್ನು ಗ್ರಹಿಸಿದ ಹಿರೇಗೌಡರು ಪ್ರಸ್ತುತ ನಕ್ಷತ್ರ ಯುದ್ಧ (ತಾರಾ ಸಮರ) ಎಂಬ ಶಿರೋನಾಮದಲ್ಲಿ ಅನೇಕ ಸರಣಿ ಚಿತ್ರ ರಚಿಸುತ್ತಾ ಬಂದಿದ್ದು ಅವುಗಳಲ್ಲಿ ಈ ಎರಡು ಕಲಾಕೃತಿಗಳನ್ನು ಅಧ್ಯಯನಕ್ಕೆ ದುಡಿಸಿಕೊಳ್ಳಲಾಗಿದೆ.

ಚಿತ್ರ ೧೧ರಲ್ಲಿ ಗ್ರಹ ಮಂಡಲದ ಸಮೀಪ ಕಾಣುವ ದೃಶ್ಯ ವೈಭವವನ್ನು ಸೆರೆ ಹಿಡಿದಿದ್ದಾರೆ. ಅದೇ ರೀತಿ ಚಿತ್ರ ೧೨ರಲ್ಲಿ ನಭೋಮಂಡಲದಲ್ಲಿ ಅನತಿ ದೂರ ಪಯಣಿಸಿದರೆ ನಕ್ಷತ್ರ ಪುಂಜಗಳ ಮೇಲೆ ಕ್ಷ ಕಿರಣ ಬೀರಿ ಅಗಾಧವಾದ ದೃಶ್ಯ ವೈಭವವನ್ನು ಸೆರೆ ಹಿಡಿಯಲು ನಡೆಸಿದ ಪ್ರಯೋಗ ಅನನ್ಯವಾಗಿದೆ. ಈ ಎರಡೂ ಚಿತ್ರಗಳಲ್ಲಿ ಇರುವ ವ್ಯತ್ಯಾಸವೆಂದರೆ ಮುಖ್ಯವಾಗಿ ಆಕೃತಿಗಳಲ್ಲಿ. ವರ್ಣಗಾರಿಕೆಯಲ್ಲಿ ಎರಡೂ ಒಂದೇ ಬಗೆಯವು ಎನಿಸಿದರೆ, ತಂತ್ರಗಾರಿಕೆಯಲ್ಲಿ ವಿಭಿನ್ನವಾಗುತ್ತದೆ. ಆಕೃತಿಗಳಿಗೆ ಕುರಿತಂತೆ ಹೇಳುವುದಾದರೆ, ಚಿತ್ರ ೧೧ರಲ್ಲಿ ದಟ್ಟವಾದ ಆಕೃತಿಗಳು ನಕ್ಷತ್ರಗಳ ರೂಪಾರ್ಥವನ್ನು ಹೊಂದಿವೆ. ಆದರೆ ಚಿತ್ರ ೧೨ರಲ್ಲಿ ಬೆಳಕಿನ ಛಾಯೆಯಿಂದ ಮಸುಕಾದ ತಂತ್ರದ ನೆಲೆಯಲ್ಲಿ ರಚನೆಗೊಂಡ ವಿನ್ಯಾಸಗಳು ನಕ್ಷತ್ರಗಳ ರೂಪಾರ್ಥಗಳನ್ನು ಹೊಂದಿವೆ. ಎರಡೂ ಕೃತಿಗಳಲ್ಲಿ ಸಾಮಾನ್ಯವಾಗಿ ಕಂಡುಬರುವುದು ಪಟ್ಟಿಕೆಗಳು. ಮೇಲಿನ ಕೃತಿಯಲ್ಲಿ ಲಂಬವಾಗಿ ಪಟ್ಟಿಕೆ ಮೂಡಿದರೆ, ಅಂತಹುದೇ ಪಟ್ಟಿಕೆ ಕೆಳಗಿನ ಕಲಾಕೃತಿಯಲ್ಲಿ ಬಲಪಾರ್ಶ್ವದಲ್ಲಿ ಓರೆಯಾಗಿ ಅವಕಾಶವನ್ನು ಪ್ರವೇಶಿಸಿದೆ. ಹಿರೇಗೌಡರು ಹೇಳುವಂತೆ ನಕ್ಷತ್ರ ಯುದ್ಧ ಎಂಬ ಶೀರ್ಷಿಕೆಗಳನ್ನು ಈ ಕೃತಿಗಳಿಗೆ ನೀಡಿದ್ದರೂ ಸಮರಕ್ಕೆ ಸಂಬಂಧಪಟ್ಟ ಸಂಕೇತಗಳು ಇಲ್ಲಿ ಕಂಡುಬರುವುದಿಲ್ಲ. ಆದರೆ ಆ ಸಮರದ ಭಾವವನ್ನು ಪ್ರಕಟಿಸಬಲ್ಲ ಆಕೃತಿಗಳ ನಿರ್ವಹಣೆ, ತಂತ್ರಗಾರಿಕೆ ಮೇಳೈಸಿ ಕೃತಿಗಳ ಶೀರ್ಷಿಕೆಗೆ ಅರ್ಥ ಕಲ್ಪಿಸುವ ಪ್ರಯತ್ನ ಇಲ್ಲಿದೆ.

**೧೩. ಸಂಯೋಜನೆ (೨೦೦೩)**

ಇಲ್ಲಿ ಶಕ್ತಿವರ್ಧಕ ಸ್ಫೋಟಕಾಂಶಗಳನ್ನೇ ಸಂಯೋಜನಾ ಪರಿಕಲ್ಪನೆಗೆ ಅಳವಡಿಸಲಾಗಿದೆ. ವರ್ಣಬಳಕೆಯಲ್ಲಿ ದಪ್ಪ ದಪ್ಪನೆಯ ವರ್ಣ ಬಳಕೆಯ ಪದ್ಧತಿಯನ್ನು ಅಳವಡಿಸಲಾಗಿದೆ. ಇಲ್ಲಿ ಪ್ರಮುಖವಾಗಿ ಬಳಸಿರುವ ನಸುಗೆಂಪು, ತಿಳಿನೀಲಿ ಹಾಗೂ ಅದಕ್ಕೆ ಪೂರಕವಾಗಿ ನವಿರಾದ ಹಳದಿಯೊಂದಿಗೆ ಅಲ್ಪ ಸ್ವಲ್ಪ ಹಸಿರು ಇವೆಲ್ಲವನ್ನು ಸಂಯೋಜನೆಗೆ ಪೂರ್ಣತೆ ಕಲ್ಪಿಸಲು ಕಪ್ಪು ವರ್ಣದ ಸ್ಕೆಚ್ ಪೆನ್ ಮಾಧ್ಯಮ ಬಳಸಿಕೊಳ್ಳುವುದರ ಮೂಲಕ ಅವಕಾಶವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿಕೊಳ್ಳುತ್ತಾರೆ. ರೇಖಾ ವಿನ್ಯಾಸದ ಮೂಲಕವಾಗಿ ಆಯತ, ವೃತ್ತಗಳನ್ನು ರಚಿಸಿರುವ ಹಿರೇಗೌಡರು ಪ್ರಖರ ವರ್ಣಗಳನ್ನು ನಾಲ್ಕೂ ಭಾಗಗಳಲ್ಲಿ ಮೈವಳಿಕೆಯ ಮೂಲಕವಾಗಿ ಅಮೂರ್ತ ಬಗೆಯಲ್ಲಿ ದುಡಿಸಿಕೊಂಡಿದ್ದಾರೆ. ಅವಕಾಶದ ಎಡ ಅರ್ಧ ಭಾಗದಲ್ಲಿ ಸ್ಕೆಚ್ ಪೆನ್‌ನಿಂದ ದಟ್ಟತೆ ಮಾರ್ದನಿಗೊಂಡರೆ, ಬಲಭಾಗದಲ್ಲಿ ಅವಕಾಶವನ್ನು ಹಾಗೆಯೇ ಉಳಿಸಿಕೊಂಡು ಪ್ರಖರವರ್ಣಗಳನ್ನು

ಮೈವಳಿಕೆ ರೂಪದಲ್ಲಿ ಸಂಯೋಜಿಸುವುದರ ಮೂಲಕವಾಗಿ ಹಿರೇಗೌಡರು ಕಲಾಕೃತಿಯೊಂದನ್ನು ಪ್ರಯೋಗಾತ್ಮಕವಾಗಿ ಹೇಗೆ ಸಂಯೋಜಿಸಬಹುದು ಎಂಬುದಕ್ಕೆ ಈ ಚಿತ್ರ ನಿದರ್ಶನವಾಗುತ್ತದೆ.

**೧೪. ಸ್ಫೋಟ (೨೦೦೩)**

ಈ ಚಿತ್ರದ ವರ್ಣ ಸಂಯೋಜನೆಯಲ್ಲಿ ಚಿತ್ರ ೧೩ರಲ್ಲಿ ಫಲಿಸಿರುವ ಭಾವ ಒಂದೇ ರೀತಿಯದಾಗಿದೆ ಎಂದು ಮೇಲ್ನೋಟಕ್ಕೆ ಕಂಡರೂ ಸ್ಫೋಟಕ ಶಕ್ತಿಯ ಅಗಾಧತೆಯನ್ನು ಹಳದಿ ಹಾಗೂ ತಿಳಿಗೆಂಪಿನ ಸಮ್ಮಿಶ್ರಣದಲ್ಲಿ ತೋರ್ಪಡಿಸಲಾಗಿದೆ. ಅದರೊಂದಿಗೆ ಕುಂಚದ ಹಿನ್ನೆಲೆಯಿಂದ ವಿಕೃತ ಗೀಚು ರೇಖೆಗಳು ಕೊಡುವ ಅನುಭವ ಚಿತ್ರಕ್ಕೆ ಗಾಂಭೀರ್ಯ ತಂದುಕೊಟ್ಟಿದೆ. ಇದೆಲ್ಲಕ್ಕೂ ಮಿಗಿಲಾಗಿ ಸಂಯೋಜನೆಗೆ ಹಾಗೂ ಆಸ್ಫೋಟನೆಯ ಅರ್ಥ ದ್ವಿಗುಣಗೊಳಿಸುವಲ್ಲಿ ಸಮಯೋಚಿತವಾದ ಕಪ್ಪು ವರ್ಣದ ಬಳಕೆ ಚಿತ್ರದ ಏಕಾಗ್ರತೆಗೆ ಸಹಕಾರಿಯಾಗಿರುವುದು ಮಹತ್ವ ಪೂರ್ಣ ಅಂಶ ಎನಿಸುತ್ತದೆ. ಇದರೊಂದಿಗೆ ಈ ಚಿತ್ರದ ಒಟ್ಟಾರೆ ಅನುಭವ ಅಮೂರ್ತದೆಡೆಗೆ ಹೆಚ್ಚು ವಾಲುತ್ತದೆ. ಚಿತ್ರ ೧೩ರ ತಂತ್ರಗಾರಿಕೆ ಇಲ್ಲಿಯೂ ಮುಂದುವರೆದಿದೆ. ಅದೇ ಬಗೆಯ ರೇಖೆಗಳು ವಿವಿಧ ಬಗೆಯ ವಿನ್ಯಾಸಗಳನ್ನು ರೂಪಿಸಿದ್ದು ಒಂದಾದರೆ ಪಟ್ಟಿಕೆಗಳಂತೆ ಕೆಲವು ವಿನ್ಯಾಸಗಳು ಅವಕಾಶದ ತುಂಬ ಹರಡಿಕೊಂಡಿವೆ. ವರ್ಣಗಳ ಟ್ಯೂಬ್‌ಗಳನ್ನೇ ನೇರವಾಗಿ ಕ್ಯಾನ್ವಾಸಿನ ಮೇಲೆ ಗೀಚಾಡುವುದರ ಮೂಲಕವಾಗಿ ಪ್ರಖರ ವರ್ಣಗಳ ಮೈವಳಿಕೆಯನ್ನು ಸೃಷ್ಟಿಸಿದ್ದಾರೆ. ಕಲಾಕೃತಿ ಸ್ಪಷ್ಟವಾಗಿ ಎರಡು ಭಾಗದಲ್ಲಿ ಸಂಯೋಜನೆಗೊಂಡಿದ್ದು, ಬಲಭಾಗದಲ್ಲಿ ಅಲ್ಲಲ್ಲಿ ನೀಲಿ, ಹಸಿರು ವರ್ಣಗಳ ಸ್ಪರ್ಶವಿದೆ. ಇಲ್ಲಿ ಸ್ಫೋಟಕವನ್ನು ಪ್ರತಿನಿಧಿಸುವ ಯಾವುದೇ ಬಗೆಯ ಸಂಕೇತಗಳು ಅಥವಾ ರೂಪಾಂಶಗಳು ಗೋಚರವಾಗದಿದ್ದರೂ, ಅಸ್ತವ್ಯಸ್ತವಾಗಿ ಹರಡಿಕೊಂಡಿರುವ ಪ್ರಖರ ವರ್ಣಗಳೇ ಇಲ್ಲಿ ಸ್ಫೋಟಕದ ಭೀಕರತೆಯನ್ನು ವರ್ಣಮಯ ಸಂಯೋಜನೆಯ ಮೂಲಕವಾಗಿ ಗ್ರಹಿಸಿಕೊಳ್ಳಬಹುದಾಗಿದೆ.

**೧೫. ಚಂದ್ರ ಮತ್ತು ಭೂಮಿ (೨೦೦೪)**

ನಿಸರ್ಗದಲ್ಲಿ ಮಾನವನಿಗೆ ಮೊಟ್ಟ ಮೊದಲು ಗಮನಕ್ಕೆ ಬರುವುದು ಸೂರ್ಯ, ಚಂದ್ರ ಹಾಗೂ ನಮಗೆ ಅಸ್ತಿತ್ವ ಕಲ್ಪಿಸಿರುವ ಭೂಮಿ. ನಮಗೆ ಗೋಚರಿಸುವ ಭೂಮಿ ಮತ್ತು ಚಂದ್ರ ಯಾವಾಗಲೂ ಅನೇಕ ಕಾರಣಗಳಿಗೆ ಮಾದರಿಗಳಾಗಿ ಕಾಣುತ್ತಾರೆ. ೧೮ನೆಯ ಶತಮಾನದ ಆದಿಯವರೆಗೂ ಚಂದ್ರನನ್ನು ದೈವೀ ಸ್ವರೂಪದಿಂದ ಕಂಡರೆ, ಆ ನಂತರದ ದಿನಗಳಲ್ಲಿ ಚಂದ್ರ ಗ್ರಹದ ಮೇಲೆ ಭೂಮಿಯಲ್ಲಿ ಲಭ್ಯವಾಗುವಂತಹ ನಿಸರ್ಗ ಸಂಪತ್ತು ಇದೆಯೇ ? ಖನಿಜ ಇದೆಯೇ? ಎಂಬ ಜಿಜ್ಞಾಸೆಯಿಂದ ವೈಜ್ಞಾನಿಕ ಪ್ರಯೋಗಗಳು ನಡೆದು ಅದರ ಫಲದಿಂದಾಗಿ ಮಾನವನ ಪಾದಾರ್ಪಣೆ ಚಂದ್ರನ ಮೇಲಾಯಿತು. ಅಂದಿನಿಂದ ಇಂದಿನವರೆಗೂ ನಿರಂತರವಾಗಿ ಪ್ರಯೋಗಗಳು ನಡೆಯುತ್ತಿರುವುದರಿಂದ ಚಂದ್ರನ ಮೂಲ ಪಾವಿತ್ರ್ಯಕ್ಕೆ ಧಕ್ಕೆ ಉಂಟಾಗಿ ಅಲ್ಲಿಯ ವಾತಾವರಣ ಕಲುಷಿತವಾಗಲು ಪ್ರಾರಂಭಿಸಿದೆ. ಈ ಹಿನ್ನೆಲೆಯಲ್ಲಿ ಪರಿಶುದ್ಧ ಚಂದ್ರ ಮೈಲಿಗೆಯಾಗಿದೆ ಎಂಬ ಭಾವ ಕಲ್ಪಿಸುವುದು ಒಂದಾದರೆ, ಭೂಮಿಯಿಂದ ಚಂದ್ರನವರೆಗಿನ ಮಾರ್ಗ ಮಾನವನ



೧೫. ಚಂದ್ರ ಮತ್ತು ಭೂಮಿ, ೨೦೦೪



೧೬. ಸಂತೃಪ್ತ ಕುಟುಂಬ, ೨೦೦೫

ಚಲನವಲನದಿಂದಾಗಿ ಬಿಸಿಯಾಗಿದೆ, ಘಾಸಿಗೊಂಡಿದೆ ಎಂಬ ಅನುಭಾವವನ್ನು ಹೇಳುವುದು ಈ ಕಲಾಕೃತಿಯ ಉದ್ದೇಶವಾಗಿದ್ದು,[೪] ಮೇಲ್ನೋಟಕ್ಕೆ ಈ ಕೃತಿ ಕಂಪ್ಯೂಟರ್‌ನ ಕೈಚಳಕದಿಂದ ಮೂಡಿದ ಅನುಭವಕ್ಕೆ ದಕ್ಕುತ್ತದೆ. ಅವಕಾಶವನ್ನು ನೇರ ರೇಖೆಗಳಿಂದ ಆವೃತವಾದ ಜ್ಯಾಮಿತಿಕ ವಿನ್ಯಾಸಗಳಿಂದ ಸದ್ಬಲವಾಗಿ ದುಡಿಸಿಕೊಂಡ ಹಿರೇಗೌಡರು ದಟ್ಟ ಛಾಯೆಗಳೊಂದಿಗೆ ತೆಳುವರ್ಣದ ಛಾಯೆಗಳನ್ನು ಎರಡು ಸಂದರ್ಭಗಳಲ್ಲಿ ಬಳಸಿಕೊಂಡಿದ್ದಾರೆ. ವೃತ್ತಾಕಾರ ಚಂದ್ರನ ವಿನ್ಯಾಸವಾದರೆ ಅದರ ಹಿನ್ನೆಲೆಯಲ್ಲ ಪಕ್ಷಿನೋಟದಿಂದ ಕಾಣುವ ಭೂಮಿಯ ರೂಪಾರ್ಥವನ್ನು ಹೊಂದಿದೆ. ಇದೇ ಭೂಮಿಯನ್ನು ಕಡುವರ್ಣದಲ್ಲಿ ವೃತ್ತಾಕಾರವಾಗಿ ಅವಕಾಶದ ಎಡಭಾಗಕ್ಕೆ ಸಂಯೋಜಿಸಿದ ಹಿರೇಗೌಡರು, ಚಂದ್ರನಿಂದ ಒಂದು ಬಿಂದುವಿನ ಮೂಲಕ ಹೊರಟ ರೇಖೆಗಳು ಹಿನ್ನೆಲೆಯಲ್ಲಿ (ಭೂಮಿಯ) ಮಾರ್ಗದ ರೂಪಾರ್ಥವನ್ನು ಹೊಂದಿವೆ. ಅಷ್ಟೇ ಅಲ್ಲದೇ ಇಡೀ ಅವಕಾಶವನ್ನು ವಿಭಜಿಸುವ ರೇಖೇಗಳಾಗಿಯೂ ನಟನೆ ಮಾಡುತ್ತವೆ. ಅವಕಾಶದ ಮೇಲ್ಭಾಗದಲ್ಲಿ ಗೋಚರವಾಗುವ ತೆಳು ಛಾಯೆಗೆ ಪೂರಕವಾಗಿ ಚಂದ್ರನ ರೂಪಾರ್ಥವನ್ನು ಹೊಂದಿದ ವೃತ್ತಾಕಾರದ ವಿನ್ಯಾಸ ಸಮತೋಲನ ನೀಡಿದೆ. ವರ್ಣಗಳ ಬೀಸುವಿಕೆಗಳಲ್ಲಿ ವಿಭಿನ್ನ ಬಗೆಯ ವಿನ್ಯಾಸಗಳನ್ನು ರೂಪಿಸುವ ಹಿರೇಗೌಡರ ಆಶಯ ಚೌಕಾಕೃತಿಯಲ್ಲಿ ಮೂಡಿ ಬಂದಿದೆ.

### ೧೬. ಸಂತೃಪ್ತ ಕುಟುಂಬ (೨೦೦೫)

ಈ ಚಿತ್ರದಲ್ಲಿ ಅಪ್ಪ-ಅಮ್ಮ ಮತ್ತು ಮಗು ಎಂದು ತಿಳಿಸುವ ರೂಪಾಂಶಗಳು ರಚಿತಗೊಂಡಿವೆ. ಹಾಗೆಯೇ ಹಿನ್ನೆಲೆಯಲ್ಲಿ ಸ್ವಚ್ಛಂದವಾಗಿ ಹಾರಾಡುತ್ತಿರುವ ಭೃಂಗ, ಸಂತೃಪ್ತಿಯ ಸಂಕೇತವಾಗಿ ಪಾನ ಪಾತ್ರೆ, ಅದಕ್ಕೆ ಪೂರಕವಾಗಿ ಅರಳಿದ ವರ್ಣಮಯ ಪುಷ್ಪ, ಸಾಲದ್ದಕ್ಕೆ ಶೀತಲ ವಾತಾವರಣ ಭ್ರಮಿಸಬಲ್ಲ ನೀಲಿ ಮತ್ತು ಹಸಿರು ವರ್ಣ ಒಟ್ಟಾರೆ ಚಿತ್ರಕ್ಕೆ ಒಂದು ರೀತಿಯ ಸಂತೃಪ್ತಿಯ ಅನುಭವ ಕೊಡುತ್ತದೆ. ಈ ಸಂಯೋಜನೆಯಲ್ಲಿ ಮಾನವಾಕೃತಿಯ ರೂಪ, ಸಂತೋಷದಿಂದ ತಂಗಾಳಿಯಲ್ಲಿ ವಿಹರಿಸುತ್ತಿರುವ ಭೃಂಗ, ಸುವಾಸನೆ ಬೀರುವ ಬಣ್ಣದ ಬಣ್ಣದ ಪುಷ್ಪಗಳು ಹಾಗೂ ಮನಸ್ಸಿಗೆ ಮುದ ನೀಡಬಹುದಾದ ವರ್ಣ ಸಂಯೋಜನೆಯಿಂದ ಚಿತ್ರ ಹಿರೇಗೌಡರ ಹಿಂದಿನ ಚಿತ್ರಗಳಿಗಿಂತ ವಿಭಿನ್ನ ನೆಲೆಯಲ್ಲಿ ರೂಪುಗೊಂಡಿದೆ. ಪುಷ್ಪ, ಭೃಂಗಗಳೆಲ್ಲವೂ ಅಲಂಕಾರಿಕ ವಿನ್ಯಾಸವನ್ನು ಅದಕ್ಕೆ ಪೂರಕವಾಗಿ ರೇಖಾತ್ಮಕವಾಗಿ ರೂಪುಗೊಂಡು ವರ್ಣಗಳಿಂದ ಆವೃತವಾದ ಮಾನವ ರೂಪಿಕೆಗಳು ಸಂತೃಪ್ತ ಕುಟುಂಬದ ಸೂಚಕವಾಗಿವೆ. ಹಿನ್ನೆಲೆಯಲ್ಲಿ ನೀಲ ಹಸಿರು ವರ್ಣಗಳೇ ಪ್ರಧಾನವಾಗಿದ್ದು, ಆಕೃತಿಗಳಲ್ಲಿ ಕಿತ್ತಳೆ ವರ್ಣದ ಶ್ರೇಣಿಗಳು ವಿವಿಧ ಛಾಯೆಗಳಲ್ಲಿ ಮೂಡಿವೆ. ಅಕ್ರಲಿಕ್ ವರ್ಣವನ್ನು ಪಾರದರ್ಶಕವಾಗಿ ದುಡಿಸಿಕೊಂಡ ಹಿರೇಗೌಡರು ಎಂದಿನಂತೆ ಸಂಯೋಜನೆಯಲ್ಲಿ ಅದೇ ಬಗೆಯ ಆಯತಾಕಾರದ ರೂಪಾಂಶಗಳನ್ನೇ ಇಲ್ಲಿಯೂ ಪುನರಾವರ್ತಿಸಿದ್ದಾರೆ. ಒಂದು ಬಗೆಯಲ್ಲಿ ನೇತ್ರಾನಂದಕರವಾದ ವರ್ಣ ಮೇಳದಿಂದ ಮತ್ತು ಅಲಂಕಾರಿಕ ರೇಖಾಂಶಗಳಿಂದ ಕೂಡಿದ ಸಂಯೋಜನೆಯಿಂದ ಈ ಕೃತಿ ಉತ್ತಮ ನೆಲೆಯ ಮಾನ್ಯತೆಯನ್ನು ಪಡೆಯುತ್ತದೆ.

೦೪. ವಿ.ಬಿ.ಹಿರೇಗೌಡರ ಅಭಿಪ್ರಾಯ



೧೭. ಹೋಳಿ, ೨೦೦೫



೧೮. ಸ್ಫೋಟ, ೨೦೦೫

೧೭. ಹೋಳಿ (೨೦೦೫)

ಹೋಳಿ ನಮ್ಮ ನಾಡಿನ ಸಾಂಸ್ಕೃತಿಕ ಹಬ್ಬ. ಈ ಹಬ್ಬದಲ್ಲಿ ಕಾಮದಹನವಾದ ನಂತರ ಮಕ್ಕಳಿಂದ ಹಿಡಿದು ಯುವಕ ಯುವತಿಯರೆಂಬ ಬೇಧವನ್ನು ಮರೆತು ಉತ್ಸಾಹದಿಂದ ಓಕಳಿಯನ್ನು ಎರಚುವ ಆಟವಾಗಿದೆ. ಈ ಸಾಂಸ್ಕೃತಿಕ ಹಿನ್ನೆಲೆಯನ್ನು ಆಧರಿಸಿ ಈ ಚಿತ್ರದಲ್ಲಿ ಯುವತಿಯೊಬ್ಬಳು ರಂಗಿನಾಟ ಆಡುತ್ತಾ ನರ್ತಿಸುತ್ತಿರುವುದನ್ನು ಚಿತ್ರಿಸಲಾಗಿದೆ. ಕೃತಿಯಲ್ಲಿ ಪ್ರಖರ ವರ್ಣ ವೈಭವವನ್ನು, ಉಲ್ಲಾಸದ ಉನ್ಮಾದದ ಭಾವ ಇಲ್ಲಿ ಗೋಚರವಾಗುವ ಹಿನ್ನೆಲೆಯಲ್ಲಿ ಆಕೃತಿಯನ್ನು ಹಾದು ಹೋಗುವ ವರ್ಣ ಪಟ್ಟಿಕೆಗಳ ಮೂಲಕವಾಗಿ ಹಿರೇಗೌಡರು ತಮ್ಮ ಎಂದಿನ ಶೈಲಿಯನ್ನೇ ಇಲ್ಲಿ ಪುನರಾವರ್ತಿಸಿದ್ದಾರೆ. ಆದರೆ ವರ್ಣಗಳ ಲೇಪನದಲ್ಲಿ ಚಾಕುವಿನಿಂದ ವರ್ಣಗಳನ್ನು ಲೇಪಿಸಿ ಒರಟಾದ ಮೈವಳಿಕೆಯನ್ನು ಸೃಷ್ಟಿಸಿದ್ದಾರೆ. ಆಕೃತಿಯಲ್ಲಿ ಬಗೆ ಬಗೆಯ ಪ್ರಖರವರ್ಣಗಳ ಸಾಂಗತ್ಯವಿದ್ದರೆ, ಹಿನ್ನೆಲೆಯಲ್ಲಿ ನೀಲವರ್ಣದ ವಿವಿಧ ಶ್ರೇಣಿಗಳ ವರ್ಣವಿನ್ಯಾಸ ರೂಪಗೊಂಡಿದೆ. ಅವಕಾಶದ ಬಹುಭಾಗದಲ್ಲಿ ಸ್ತ್ರೀ ನೃತ್ಯದ ರೂಪ ರಚನೆಯಾಗಿದ್ದು ಆಧುನಿಕವಾದ ವೇಗೋತ್ಕರ್ಷದ ಚಲನಾತ್ಮಕ ಭಾವವನ್ನು ಇದು ಪ್ರಕಟಿಸುತ್ತದೆ.

೧೮. ಸ್ಫೋಟ (೨೦೦೫)

ಸುಮಾರು ಎರಡು ದಶಕಗಳಿಂದೀಚೆಗೆ ಅಂತರಾಷ್ಟ್ರೀಯ ಭಿನ್ನಾಭಿಪ್ರಾಯಗಳಿಂದಾಗಿ ವೈಷಮ್ಯ ಭುಗಿಲೆದ್ದು ರಾಷ್ಟ್ರದ ನೆಮ್ಮದಿ ಕದಡುತ್ತಿದೆ. ಇಂಥ ವಿಚಾರಗಳು ಪ್ರತಿದಿನ ಬೆಳಗಾದರೆ ಮಾಧ್ಯಮಗಳಲ್ಲಿ ಬಿತ್ತರಗೊಂಡು ಮಾನವವನ್ನು ಅಧೈರ್ಯಗೊಳ್ಳುವಂತೆ ಮಾಡುತ್ತಿವೆ. ಇದು ಹೀಗೇ ಮುಂದುವರೆದರೆ ಈ ಪ್ರಪಂಚದ ಮೇಲೆ ಮಾನವನ ಅಸ್ತಿತ್ವ ಹಾಗೂ ಸುಂದರವಾದ ಪ್ರಕೃತಿ ನಿರ್ನಾಮವಾಗುವುದರಲ್ಲಿ ಎರಡು ಮಾತಿಲ್ಲ. ಪ್ರಪಂಚದ ಯಾವ ಭಾಗವೂ ಭಯೋತ್ಪಾದನಾ ರಹಿತವಾಗಿಲ್ಲ ಎಂಬ ಉದ್ದೇಶ ಕಥನವನ್ನು ಈ ಚಿತ್ರ ಪ್ರಕಟಿಸುತ್ತದೆ. ಮೂರ್ತ, ಅಮೂರ್ತ ಬಗೆಯಲ್ಲಿ, ಅಪರಿಚಿತ ಆಕೃತಿಗಳ ಮೂಲಕವಾಗಿ ಗರಿಗೆದರಿರುವ ಈ ಕಲಾಕೃತಿಯಲ್ಲಿ ಚೌಕಾಕಾರದ ವಿನ್ಯಾಸದೊಳಗೆ ವೃತ್ತದ ವಿನ್ಯಾಸ ಪರಿಚಿತವಾಗಿದ್ದರೆ, ಇನ್ನುಳಿದ ವರ್ಣ ವಿನ್ಯಾಸಗಳು ಅಪರಿಚಿತ ಎಂಬ ರೂಪಾರ್ಥದಲ್ಲಿ ಈ ಕೃತಿಯನ್ನು ನೋಡಬಹುದಾಗಿದೆ. ವೃತ್ತ ಪ್ರಪಂಚದ ರೂಪಾರ್ಥವನ್ನು ಹೊಂದಿದ್ದರೆ, ಅವಕಾಶದ ಉದ್ದಗಲಕ್ಕೆ ಹರಡಿಕೊಂಡಿರುವ ಕಪ್ಪು ರೇಖೆಗಳು, ವರ್ಣಗಳ ಬೀಸುವಿಕೆಗಳು ಸ್ಫೋಟಕದ ಸಂಕೇತವಾಗಿ ರೂಪಾರ್ಥವನ್ನು ಹೊಂದಿವೆ. ಅವಕಾಶದ ಮೇಲ್ಭಾಗದಲ್ಲಿ ಬೆಂಕಿಯ ಜ್ವಾಲೆಗಳನ್ನು ನೆನಪಿಸುವಂಥ ವರ್ಣಗಾರಿಕೆಯ ಸ್ಫೋಟಕದ ಅರ್ಥಸಾಧ್ಯತೆಯನ್ನೇ ಹೊರ ಹಾಕುತ್ತದೆ. ಅವಕಾಶದ ಕೆಳಭಾಗದಿಂದ ಕ್ಷೀಣವಾಗಿ ಮೇಲ್ಭಾಗದಲ್ಲಿ ಪ್ರಖರವರ್ಣಗಳನ್ನು ಸಂಯೋಜಿಸಿರುವ ಕ್ರಮ ಇಲ್ಲಿದ್ದು, ಕೆಳಭಾಗದಲ್ಲಿ ಕಪ್ಪು ವರ್ಣದಿಂದ ಸ್ಫೋಟಕದಿಂದ ಛಿದ್ರಗೊಂಡ ಭ್ರಮೆಯನ್ನು ದೃಶ್ಯಾತ್ಮಕವಾಗಿ ಚಿತ್ರಿಸಲಾಗಿದೆ.

## ಉಪಸಂಹಾರ

ಹಿರೇಗೌಡರು ರಚಿಸಿದ ೧೮ ಅಕ್ರಿಲಿಕ್ ಮಾಧ್ಯಮದ ವರ್ಣಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದ್ದು, ಅವೆಲ್ಲವೂ ವೈವಿಧ್ಯಮಯ ನೆಲೆಯಲ್ಲಿ ತಂತ್ರಗಾರಿಕೆ, ಸಂಯೋಜನೆ, ವರ್ಣಗಾರಿಕೆ ಮತ್ತು ವಿಭಿನ್ನ ಆಕೃತಿಗಳಿಂದ ರಚಿತಗೊಂಡ ಪ್ರಯೋಗಾತ್ಮಕ ಕೃತಿಗಳಾಗಿವೆ. ಕೆಲವು ಕೃತಿಗಳು ಸರಣಿ (ಚಿತ್ರ ೮,೯/೧೧,೧೨ ಮತ್ತು ೧೩,೧೪)ರೂಪದಲ್ಲಿ ಚಿತ್ರಿತಗೊಂಡಿದ್ದು ಅವುಗಳಲ್ಲಿ ಆಕೃತಿಗಳು, ಸಂಯೋಜನಾ ಕ್ರಮಗಳು ಮತ್ತು ವರ್ಣಗಾರಿಕೆಯಲ್ಲಿ ಏಕಪ್ರಕಾರತೆಯನ್ನು ಕಾಣಬಹುದಾಗಿದೆ. ಆದರೆ ಅವು ಸರಣಿ ರೂಪದಲ್ಲಿ ಚಿತ್ರತಗೊಂಡಿದ್ದರೂ ಉದ್ದೇಶಿತ ವಸ್ತು–ವಿಷಯಗಳು ವಿಭಿನ್ನವಾಗಿವೆ. ಹಿರೇಗೌಡರು ಬಹುತೇಕವಾಗಿ ಎಲ್ಲ ಬಗೆಯ ವಸ್ತು ವಿಷಯಗಳನ್ನು ಬೌದ್ಧಿಕವಾಗಿ ಸ್ಪರ್ಶಿಸುತ್ತ ಬಂದಿದ್ದಾರೆ. ಭೌತಿಕ ವಿಸ್ಮಯ, ನಗರ ಬದುಕಿನ ಸಮಸ್ಯೆಗಳು, ಕೌಟುಂಬಿಕ ತೃಪ್ತಿ–ಅತೃಪ್ತಿ, ಕೋಮು ಸಾಮರಸ್ಯ, ಜಾಗತಿಕ ಭಿನ್ನಾಭಿಪ್ರಾಯಗಳನ್ನು ವಿವಿಧ ನೆಲೆಯ ರೂಪಾಂಶಗಳೊಂದಿಗೆ ದೃಶ್ಯಾತ್ಮಕವಾಗಿ ಪ್ರಕಟಿಸಿರುವ ಕ್ರಮವನ್ನು ಇಲ್ಲಿ ಅನುಸರಿಸಿದ್ದಾರೆ. ಅವರ ಬಹುತೇಕ ಕಲಾಕೃತಿಗಳಲ್ಲಿ ಜ್ಯಾಮಿತಿಕ ಆಕೃತಿಗಳು ರಂಗದ ಮೇಲಿನ ಹಿನ್ನೆಲೆಯ ರಂಗಪರದೆಯಂತೆ ಕಾರ್ಯನಿರ್ವಹಿಸಿವೆ. ಆ ರಂಗಪರದೆಯಲ್ಲಿ ಹಿರೇಗೌಡರು ಕಲಾಕೃತಿಯ ಮುಖ್ಯ ಆಶಯಕ್ಕೆ ಪೂರಕವಾಗಿರುವ ಆಕೃತಿಗಳಿಗೆ ಸಂಬಂಧಪಟ್ಟ ಸಂಕೇತಗಳನ್ನು ಮಸುಕಾಗಿ ಇಲ್ಲವೇ ಪಾರದರ್ಶಕ ರೂಪದಲ್ಲಿ (ಚಿತ್ರ ೬,೧೫) ದುಡಿಸಿಕೊಂಡ ಕ್ರಮವನ್ನು ಇಲ್ಲಿ ಅನುಸರಿಸಿದ್ದಾರೆ. ಇಲ್ಲಿನ ಬಹುತೇಕ ಕಲಾಕೃತಿಗಳಲ್ಲಿ ಹಿರೇಗೌಡರು ಪ್ರಖರ ವರ್ಣಗಳನ್ನು ದುಡಿಸಿಕೊಂಡಿದ್ದು (ಚಿತ್ರ ೧೩,೧೪,೧೭) ಕೆಲವೇ ಕೆಲವು ಕಲಾಕೃತಿಗಳಲ್ಲಿ ಶೀತಲ ವರ್ಣಗಳನ್ನು (ಚಿತ್ರ ೬,೧೦,೧೬) ಬಳಸಿಕೊಳ್ಳಲಾಗಿದೆ. ಹೀಗೆ ಹಿರೇಗೌಡರ ವಿಭಿನ್ನ ಬಗೆಯ ಒಲವುಗಳಿಂದ ರಚನೆಗೊಂಡ ಇಲ್ಲಿನ ಕಲಾಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಕಲಾವಿದನಾಗಿ ಮಾತ್ರವಲ್ಲದೇ, ಕಲಾಶಿಕ್ಷಕನಲ್ಲಿ ಇರಬೇಕಾದ ಪ್ರಯೋಗಶೀಲತೆಯ ಗುಣಲಕ್ಷಣಗಳು ಸಹ ಕಂಡು ಬರುತ್ತವೆ.

********

೫:೨. ಇಂಕ್

ಜಲ ಮಾಧ್ಯಮವಾದ ಶಾಯಿ ಇತ್ತೀಚೆಗೆ ಹಲವು ವರ್ಣಗಳಲ್ಲಿ ಲಭ್ಯವಾಗುತ್ತಿದ್ದು, ವಿಶಿಷ್ಟ ತಂತ್ರಗಳಿಂದ ಅವುಗಳನ್ನು ದುಡಿಸಿಕೊಳ್ಳಬಹುದಾಗಿದೆ. ಅದರಂತೆ ಹಿರೇಗೌಡರು ತಮ್ಮ ಪ್ರಯೋಗಗಳಲ್ಲಿ ಶಾಯಿ ಮಾಧ್ಯಮದಿಂದ ರಚಿಸಿದ ಆಯ್ದ ಕಲಾಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

೧. ನಾಗರ (೧೯೮೧)

ಭಾರತೀಯ ಸಂಸ್ಕೃತಿಯಲ್ಲಿ ದೇವರ ಕಲ್ಪನೆಗೆ ಮೊದಲ ಆದ್ಯತೆ ಇದೆ. ತಂದೆ, ತಾಯಿ, ಗುರು, (ಸ್ತ್ರೀ–ಪುರುಷ) ಪ್ರಾಣಿ, ಪಕ್ಷಿ, ಸೂರ್ಯ, ಚಂದ್ರ, ಗಾಳಿ, ನೀರು, ಬೆಂಕಿ ಅಲ್ಲದೇ ಪ್ರಕೃತಿಯಲ್ಲಿ ಇನ್ನೂ ಹಲವಾರು ಜೀವಿಗಳಲ್ಲಿ ದೈವತ್ವವನ್ನು ಕಲ್ಪಿಸಿಕೊಳ್ಳಲಾಗುತ್ತದೆ. ಮೊದಲು ಬರೆಹ ರೂಪದಲ್ಲಿ ಹುಟ್ಟಿದ ಪುರಾಣಗಳಲ್ಲಿ ಬರುವ ಪಾತ್ರಗಳಿಗೆ ಮೂರ್ತರೂಪ ಕೊಟ್ಟು ದೈವತ್ವದ ಸಾಕಾರ ನೀಡಿದವನು ಕಲಾವಿದ. ಅದರಂತೆ ಈ ಚಿತ್ರದಲ್ಲಿ ಕಂಡುಬರುವ ನಾಗರ ಹಾವು ಪುರುಷ ಸಂಕೇತ. ಅಂತೆಯೇ ಬಹುತೇಕ ಕಲಾವಿದರು "ಆಡಮ್ ಅಂಡ್ ಈವ್" ಎಂಬ ವಿಷಯವನ್ನು ಹಾವು ಮತ್ತು ಕನ್ಯೆಯ ರೂಪಗಳನ್ನು ಬಳಸಿ ಅನೇಕ ಕಲಾಕೃತಿಗಳನ್ನು ರಚಿಸಿದ್ದಾರೆ. ಇದರ ಮಧ್ಯದಲ್ಲಿಯೂ ನಾವು ಒಂದೆಡೆ ಕಲ್ಲು ನಾಗರವನ್ನು ಸೃಷ್ಟಿಸಿ ಅದನ್ನು ದೇವರೆಂದು ಭಕ್ತಿಯಿಂದ ಪೂಜಿಸಿದರೆ, ಇನ್ನೊಂದೆಡೆ ಅದೇ ಜೀವಂತ ನಾಗರವನ್ನು ಕಂಡರೆ ಸಾಯಿಸಲು ಪ್ರಯತ್ನಿಸುತ್ತೇವೆ. ನಾವು ಸಾಯಿಸುವುದು ಒಂದು ಹಾವನ್ನು ಮಾತ್ರವಾದರೆ, ಅದು ಇಟ್ಟ ನೂರಾರು ಮೊಟ್ಟೆಗಳು ಜೀವ ತಾಳಿ ತಮ್ಮ ಅಸ್ತಿತ್ವವನ್ನು ಮೆರೆಯುತ್ತವೆ. ಹಾಗೆಯೇ ಸೂರ್ಯ ಚಂದ್ರರಿರುವರೆಗೂ ಯಾವುದೇ ಜೀವಿಗಳ ಸಂತತಿಯನ್ನು ನಿರ್ಜೀವಗೊಳಿಸಲು ಸಾಧ್ಯವಾಗದು. ಅಂದರೆ ಶಕ್ತಿಯನ್ನು ಅಂತರ್ಗತಗೊಳಿಸಿಕೊಂಡ ದೇಹ ನಾಶವಾದರೂ ಶಕ್ತಿ ಚಿರಾಯು[೧] ಎಂಬುದು ಈ ಚಿತ್ರದ

೦೧. ಎ.ಬಿ.ಹಿರೇಗೌಡರ ಅಭಿಪ್ರಾಯ



೧. ನಾಗರ, ೧೯೮೧




೨. ಪಕ್ಷಿ ಕುಟುಂಬ. ೧೯೮೭

ಉದ್ದೇಶ. ಈ ಕಲಾಕೃತಿಯಲ್ಲಿ ಪ್ರಧಾನ ಆಕೃತಿಯನ್ನು ಅವಕಾಶದ ಮಧ್ಯಭಾಗಕ್ಕೆ ಸಂಯೋಜಿಸಲಾಗಿದೆ. ಪುರುಷ ಪ್ರಧಾನ ಸಂಕೇತವಾದ ಹಾವನ್ನು ಅವಕಾಶದ ಬಹುಭಾಗದಲ್ಲಿ ಚಿತ್ರಿಸಿದ್ದು, ಅದರ ಮೇಲೆ ಅದರ ಸಂತಾನ ಸಮೂಹವನ್ನು ಚಿತ್ರಿಸಲಾಗಿದೆ. ಒಂದು ಚೌಕದೊಳಗೆ ನುಸುಳಿ ಹೊರಬಂದು ಹೆಡೆ ಅರಳಿಸಿದ ದೃಶ್ಯವನ್ನಿಲ್ಲಿ ಕಾಣಬಹುದು. ಅದಕ್ಕೆ ಬೆಂಬಲವೆನ್ನುವಂತೆ ದಟ್ಟ ವರ್ಣಗಳ ಲಂಬ ಪಟ್ಟಿಕೆಗಳನ್ನು ಚಿತ್ರಿಸಿರುವ ಹಿರೇಗೌಡರು, ಕಾಗದದ ಮೇಲ್ಭಾಗದಲ್ಲಿ ಕೃತಿಯ ಉದ್ದೇಶಿತ ರೂಪಾರ್ಥಕ್ಕೆ ಪೂರಕವಾಗಿ ನೀಲಿ ವರ್ಣವನ್ನು ವಕ್ರಾಕಾರದಲ್ಲಿ ಚಿತ್ರಿಸಿದ್ದಾರೆ. ಹಿನ್ನೆಲೆಯಲ್ಲಿ ತೆಳು ಹಳದಿವರ್ಣವನ್ನು ಪಾರದರ್ಶಕವಾಗಿ ಲೇಪಿಸಿದ್ದಾರೆ. ತನ್ಮೂಲಕ ಹಿರೇಗೌಡರು ಮಾನವರಿಂದ ಸಾವನ್ನಪ್ಪುವ ಹಾವಿನ ಸಂತತಿಯನ್ನು ದೃಶ್ಯಾತ್ಮಕವಾಗಿ ಜೀವಂತವಾಗಿರಿಸುವ ಆಶಯವನ್ನು ಈ ಕಲಾಕೃತಿಯಲ್ಲಿ ಹೊಂದಿದ್ದಾರೆ.

**೨. ಪಕ್ಷಿ ಕುಟುಂಬ** (೧೯೮೭)

ಪಕ್ಷಿ ಸಂಕುಲ ಸಹ ಮಾನವ ಸಂಕುಲಕ್ಕಿಂತ ಭಿನ್ನವಾಗಿಲ್ಲ. ಕುಟುಂಬ ವ್ಯವಸ್ಥೆಯಲ್ಲಿ ಕಂಡು ಬರುವ ಸಾಂಗತ್ಯ, ಪ್ರೀತಿ, ಆಸೆ, ಆಕಾಂಕ್ಷೆ, ಕಚ್ಚಾಟ, ವೈರತ್ವ , ತಾಯಿಯ ಕರುಣಾಭಾವ ಹೀಗೆ ವಿಭಿನ್ನ ಗುಣಧರ್ಮಗಳು ಸಂದರ್ಭಕ್ಕನುಗುಣವಾಗಿ ವ್ಯಕ್ತವಾಗುತ್ತವೆ. ಪ್ರಸ್ತುತ ಈ ಚಿತ್ರದಲ್ಲಿ ಪಕ್ಷಿ ಸಮೂಹಗಳನ್ನು ಚಿತ್ರಿಸಿದ್ದು, ವಿವಿಧ ರೀತಿಯ ಭಾವ, ಸ್ವಭಾವ ಕ್ರಿಯೆ, ಕಲರವ, ಆಸೆ, ಆಕಾಂಕ್ಷೆಗಳ ಅಭಿವ್ಯಕ್ತಿಯನ್ನು ದಟ್ಟ ವರ್ಣಗಳ ಆಕೃತಿಗಳ ಮೂಲಕ ಅಭಿವ್ಯಕ್ತಿಗೊಳಿಸಿದ್ದಾರೆ. ಸ್ವಚ್ಛಂದವಾಗಿ ಹಾರುತ್ತಿರುವ ಹಕ್ಕಿಗಳ ಹಿನ್ನೆಲೆಯ ಒಂದು ಪಟ್ಟಿಕೆಯಲ್ಲಿ ದೂರದ ಆಕಾಶದಲ್ಲಿ ಹಾರಾಡುತ್ತಿರುವ ಹಕ್ಕಿಗಳ ಸಮೂಹವನ್ನು ಸೂಚ್ಯವಾಗಿಸಿದ್ದಾರೆ. ಮುನ್ನೆಲೆಯಲ್ಲಿ ದೊಡ್ಡ ದೊಡ್ಡ ಹಕ್ಕಿಗಳ ಆಕೃತಿಗಳು ಹಾರಾಡುತ್ತ ಸಂಭ್ರಮಿಸುತ್ತಿರುವಂತೆ ಚಿತ್ರಿಸಿದ್ದು, ಮೇಲ್ಭಾಗದಲ್ಲಿ ಹಕ್ಕಿಯೊಂದು ಹಾರುತ್ತ ಈ ಸಮೂಹವನ್ನು ಸೇರುತ್ತಿರುವಂತೆ ವಿವರವಾಗಿ ರಚಿಸಲಾಗಿದೆ. ಕಾಗದದ ಅರ್ಧ ಭಾಗದಲ್ಲಿ ನೀಲಾಕಾಶವನ್ನು ಪ್ರತಿನಿಧಿಸುವಂತೆ ಅಡ್ಡವಾಗಿ ಒಂದು ಪಟ್ಟಿಕೆಯನ್ನು ಸಂಯೋಜಿಸಿದ ಹಿರೇಗೌಡರು ಪ್ರತಿ ಹಕ್ಕಿಗಳ ಆಕೃತಿಯಲ್ಲಿ ಮೇಲೆ ತಿಳಿಸಿದ ಗುಣಧರ್ಮಗಳ ಭಾವಗಳನ್ನು ಅಭಿವ್ಯಕ್ತಿಸುವಲ್ಲಿ ಈ ಕೃತಿಯನ್ನು ಸಾರ್ಥಕಗೊಳಿಸಿದ್ದಾರೆ.

**೩. ಮಧ್ಯರಾತ್ರಿಯ ಹೂವು** (೧೯೮೭)

ಮಧ್ಯರಾತ್ರಿಯೆಂಬುದು ಪ್ರಕೃತಿಯ ಕರಾಳ, ನೀರವತೆ, ಸಾವಿನ ಪರಿಕಲ್ಪನೆ, ದುಃಖವನ್ನು ಸೂಚಿಸುತ್ತದೆ. ಅಂತೆಯೇ ಇಲ್ಲಿ ಸೃಷ್ಟಿಸಿದ ಮಧ್ಯರಾತ್ರಿಯ ಹೂವು ಸಹ ತನ್ನ ಅಪ್ರಯೋಜಕತೆಯನ್ನು ಹೇಳುತ್ತದೆ. ಇನ್ನೊಂದು ಅರ್ಥದಲ್ಲಿ ಬೆಳದಿಂಗಳ ಹೂವು ಅರಣ್ಯದ ಹೂವು ಎಂದು ಹೇಳಿದರೂ ಇದೇ ಅರ್ಥದ ಸಾರವನ್ನು ಕಂಪಿಸುತ್ತದೆ.[೨] ಒಟ್ಟಾರೆ ಇಲ್ಲಿ ರಚಿತಗೊಂಡ ಹೂವು ಸಂತೋಷಕ್ಕಿಂತ ದುಃಖವನ್ನು ಭ್ರಮಿಸುವ ಪರಿಕಲ್ಪನೆಯಾಗಿದೆ. ಹೂವಿನ ರೂಪ ಕುರೂಪಗೊಂಡಿದೆ. ಇದೊಂದು ರೀತಿಯ ಅಮೂರ್ತ ರೂಪವಾಗಿದ್ದು ಹೂವಿನ ರೂಪಾರ್ಥವನ್ನು ಹೊಂದಿದೆ. ಚಿತ್ರದ ಎಡಭಾಗದಲ್ಲಿ

೦೨. ವಿ.ಬಿ.ಹಿರೇಗೌಡರ ಅಭಿಪ್ರಾಯ



೩. ಮಧ್ಯರಾತ್ರಿಯ ಹೂವು, ೧೯೮೭



೪. ಕೆಂಪು ಮೋಡಗಳು, ೧೯೮೭

ಮಧ್ಯರಾತ್ರಿಯನ್ನು ಬಲಭಾಗದಲ್ಲಿ ಬೆಳದಿಂಗಳನ್ನು ಪ್ರತ್ಯೇಕಿಸಿ ತಮ್ಮ ಚಿತ್ರದ ಅರ್ಥಸಾಧ್ಯತೆಯನ್ನು ಪ್ರಸ್ತುತಿಪಡಿಸುವ ಹಿರೇಗೌಡರು ಎಂದಿನಂತೆ ಹಿನ್ನೆಲೆಯಲ್ಲಿ ಜ್ಯಾಮಿತಿಕ ಆಕೃತಿಗಳನ್ನು ಪಾರದರ್ಶಕವಾಗಿ ದುಡಿಸಿಕೊಂಡಿದ್ದಾರೆ. ಲಯಗಳಂತೆ ಹರಿದಾಡಿದ ಕುಂಚದ ಬೀಸುವಿಕೆಗಳು ಚಿತ್ರದ ಶೀರ್ಷಿಕೆಯನ್ನು ಸಾರ್ಥಕಗೊಳಿಸುವಲ್ಲಿ ರಚನೆಗೊಂಡಿದ್ದು, ದಟ್ಟ ವರ್ಣದಲ್ಲಿ ರಚನೆಯಾದ ಅಮೂರ್ತ ಬಗೆಯ ವಿನ್ಯಾಸದಲ್ಲಿ ಕಪ್ಪುವರ್ಣದ ಚಿಕ್ಕ ಚಿಕ್ಕ ರೇಖೆಗಳನ್ನು ಹೂವಿನ ಎಸಳುಗಳಂತೆ ಚಿತ್ರಿಸಲಾಗಿದೆ. ಅವು ನೋಡುಗರಿಗೆ ಒಂದು ಬಗೆಯಲ್ಲಿ ವಿಶಿಷ್ಟ ಅನುಭವವನ್ನು ನೀಡುತ್ತವೆ.

**೪. ಕೆಂಪು ಮೋಡಗಳು (೧೯೮೭)**

ಸಾಮಾನ್ಯವಾಗಿ ಮೋಡಗಳೆಂದರೆ ಬಿಳಿ ಮೋಡ, ಕಪ್ಪು ಮೋಡ ಎಂಬುದನ್ನು ನೋಡಿದ್ದೇವೆ. ಆದರೆ ಇಲ್ಲಿ ಕೆಂಪು ಮೋಡವನ್ನು ಸೃಷ್ಟಿಸಿರುವುದು ಒಂದು ಹೊಸ ಪರಿಕಲ್ಪನೆ. ಹಾಗೆಯೇ ಕರಿ ಮೋಡಗಳಾಚೆ ಚದುರಿಹೋಗುತ್ತಿರುವ ಕೆಂಪು ಅಥವಾ ಕಂದು ಮೋಡಗಳನ್ನು ರಚಿಸಿರುವುದನ್ನು ಗಮನಿಸಿದಾಗ ಬೌದ್ಧಿಕ ಅನುಭವಕ್ಕಿಂತಲೂ ಮಾನಸಿಕ ಅನುಭವದ ಪರದೆ ತೆರೆದುಕೊಳ್ಳುತ್ತದೆ. ಕೆಂಪು ಮೋಡವೆಂದಾಕ್ಷಣ ಭಯಾನಕತೆಯನ್ನು ಸೂಚಿಸಬಹುದು. ಆದರೆ ಅದರಾಚೆಗಿನ ಇನ್ನೊಂದು ಅರ್ಥವೆಂದರೆ ಕ್ರಿಯಾತ್ಮಕ ಹಾಗೂ ಚಲನಾತ್ಮಕತೆಯನ್ನು ಹೇಳುವ ಮತ್ತು ಔಪಯೋಗಿಕ ಎಂಬ ಅರ್ಥವನ್ನು ಭ್ರಮಿಸುವ ಹಿನ್ನೆಲೆಯಲ್ಲಿ ಕಾಗದದ ಮೇಲೆ ಶಾಯಿಯನ್ನು ನೀರು ಲೇಪಿಸಿ ಹರಡಿಸಿರುವ ತಂತ್ರವನ್ನು ಇಲ್ಲಿ ಅನುಸರಿಸಲಾಗಿದೆ. ಇಂತಹ ವರ್ಣ ತಂತ್ರಗಳನ್ನು ದುಡಿಸಿಕೊಳ್ಳುವುದರ ಮೂಲಕ ಚಲನಾತ್ಮಕ ಅನುಭವವನ್ನು ನೀಡುವಂತೆ ಹಿರೇಗೌಡರು ತಮ್ಮ ಬೌದ್ಧಿಕತೆಯನ್ನು ಪ್ರಯೋಗಕ್ಕೆ ಒಗ್ಗಿಸಿಕೊಳ್ಳುತ್ತಾರೆ. ಚಿತ್ರದ ಮಧ್ಯಭಾಗಕ್ಕೆ ದಟ್ಟವಾದ ಎರಡು ಪಟ್ಟಿಕೆಗಳನ್ನು ಮೋಡಗಳ ರೂಪಾರ್ಥದ ವಿನ್ಯಾಸಗಳ ಹಿನ್ನೆಲೆಯಾಗಿ ದುಡಿಸಿಕೊಂಡಿದ್ದು ಮೋಡಗಳಲ್ಲಿ ಪ್ರಮುಖವಾಗಿ ಮೂರು ಬಗೆಯ ವರ್ಣ ವಿನ್ಯಾಸಗಳನ್ನು ರೂಪಿಸಿದ್ದಾರೆ. ಸಂಯೋಜನಾ ಪರಿಕಲ್ಪನೆಯ ದೃಷ್ಟಿಯಿಂದ ವಿರಳವಾದ ದೃಶ್ಯಾನುಭವ ನೀಡುತ್ತದೆ ಈ ಕೃತಿ.

**೫. ಇಂದಿನ ಸುದ್ದಿ (೧೯೮೭)**

ಈ ಚಿತ್ರದ ವಿಶೇಷವೆಂದರೆ ಮೇಲ್ನೋಟಕ್ಕೆ ಇದೊಂದು ಕೋಲಾಜ ಕಲಾಕೃತಿಯಂತೆ ಭ್ರಮೆಯನ್ನು ಸೃಷ್ಟಿಸುತ್ತದೆ. ಆದರೆ ಇದೊಂದು ಸಾಮಾನ್ಯ ಇಂಕ್ ಮಾಧ್ಯಮದಿಂದ ಚಿತ್ರಿತಗೊಂಡದ್ದು. ರಚನಾ ತಂತ್ರ ಸಂಯೋಜನಾ ಪರಿಕಲ್ಪನೆ ಹಾಗೂ ದೃಶ್ಯೀಕರಣದ ಕೌಶಲ್ಯದಲ್ಲಿ ಸಂಪೂರ್ಣ ಹೊಸತನದಿಂದ ಕೂಡಿದೆ. ದಿನ ಪತ್ರಿಕೆಯ ಒಂದು ಭಾಗವನ್ನಾಧರಿಸಿದ ವಸ್ತುವೇ ಈ ಚಿತ್ರದ ಮೂಲ ವಸ್ತು ಎಂದು ಹೇಳಿದರೂ ನೋಡುಗನಿಗೆ ಕಟ್ಟಿಕೊಡುವ ಭ್ರಮೆ ಮಾತ್ರ ವಿಭಿನ್ನವೆನಿಸುವ ನೆಲೆಯಲ್ಲಿ ಬಹು ಅರ್ಥವನ್ನು ನೀಡುತ್ತದೆ ಈ ಕೃತಿ. ಕೆಳಭಾಗದಲ್ಲಿ ಬಲಿಷ್ಠತೆಯ ಸಂಕೇತದಂತೆ

---

೦೩. ವಿ.ಬಿ.ಹಿರೇಗೌಡರ ಅಭಿಪ್ರಾಯ



೫. ಇಂದಿನ ಸುದ್ದಿ, ೧೯೮೭



೬. ನನ್ನ ಪ್ರೀತಿ, ೧೯೮೭

ಗೋಚರವಾಗುವ ಮುಷ್ಠಿಯ ರಚನೆ, ಅದರ ಆಧಾರದ ಮೇಲೆ ರೂಪುಗೊಂಡ ದಿನಪತ್ರಿಕೆಯ ವಿನ್ಯಾಸ. ಹಿನ್ನೆಲೆಯಲ್ಲಿ ಪ್ರಕೃತಿ ಚಿತ್ರಣದಂತಹ ರಚನೆಗಳು ಈ ಕೃತಿಯಲ್ಲಿ ಇದ್ದುದರಿಂದ ಮೇಲ್ನೋಟಕ್ಕೆ "ಪತ್ರಿಕೋದ್ಯಮ ತುಂಬ ಬಲಿಷ್ಠವಾದುದು/ವಾದುದೆ?" ಎಂಬ ಸಂದೇಶವನ್ನು ನೀಡಬಹುದು. ಆದರೆ ಇದರಾಚೆಗೆ ಈ ಕೃತಿಯ ಸಂಯೋಜನೆ, ಹಿನ್ನೆಲೆಯನ್ನು ಸಾಂಪ್ರದಾಯಿಕ ರಚನಾ ವಿಧಾನದಿಂದ ದುಡಿಸಿಕೊಂಡಿರುವ ಕ್ರಮ ಇವುಗಳಿಂದ ಈ ಕೃತಿ ಬಹುಬಗೆಯ ಅರ್ಥಸಾಧ್ಯತೆಗಳನ್ನು ಕಟ್ಟಿಕೊಡಬಹುದು.

೬. ನನ್ನ ಪ್ರೀತಿ (೧೯೮೭)

ಈ ಚಿತ್ರದ ಪ್ರಮುಖ ವಸ್ತು ಶ್ವಾನ. ಜಾಗ್ರತೆಗೆ, ನಂಬಿಕೆಗೆ ಹಾಗೂ ಪ್ರೀತಿಗೆ ಇನ್ನೊಂದು ಪರ್ಯಾಯ ಶಬ್ದ ಶ್ವಾನ. ಈ ಪ್ರಾಣಿ ಹಗಲಿರುಳು ಯಜಮಾನನ ಶ್ರೇಯಸ್ಸಿಗೆ, ಆಸ್ತಿ-ಪಾಸ್ತಿಯ ರಕ್ಷಣೆಗೆ ದುಡಿಯುತ್ತದೆ. ಈ ಎಲ್ಲ ಸಾಕ್ಷಾತ್ಕಾರಗಳಿಗೆ ಪೂರಕವಾದ ಅಂಶಗಳನ್ನು ಅಳವಡಿಸಿಕೊಂಡಿದ್ದು, ನಿದ್ರಾವಸ್ಥೆಯಲ್ಲಿರುವ ಜನ ಸಮುದಾಯಕ್ಕೆ ಎಚ್ಚರದಿಂದಿರಲು ಶ್ವಾನ ತನ್ನ ಒಳದನಿಯಿಂದ ಕೂಗುತ್ತಿರುವ ಭಾವ ಪ್ರಕಟವಾಗಿದ್ದನ್ನು ದಟ್ಟ ವರ್ಣದಿಂದ ರಚಿಸಿದ್ದಾರೆ. ರಾತ್ರಿ ಮತ್ತು ಹಗಲಿನ ಸಂಕೇತವಾಗಿ ಹಿರೇಗೌಡರು ಅವಕಾಶದ ಹಿನ್ನೆಲೆಯ ಮೇಲ್ಭಾಗದಲ್ಲಿ ದಟ್ಟ ವರ್ಣ ಛಾಯೆಯನ್ನು, ಕೆಳಭಾಗದಲ್ಲಿ ಕಾಗದದ ಅವಕಾಶವನ್ನು ಬಿಡುವುದರ ಮೂಲಕ ಹಗಲಿನ ರೂಪಾರ್ಥವನ್ನು ಕಲ್ಪಿಸಿಕೊಟ್ಟಿದ್ದಾರೆ. ದಟ್ಟ ವರ್ಣ ಛಾಯೆಯಿಂದ ರೂಪಿತಗೊಂಡಿರುವ ಶ್ವಾನ ಒಳದನಿಯಿಂದ ಕೂಗುತ್ತಿರುವುದಕ್ಕೆ ಪೂರಕವಾಗಿ ಆಕೃತಿಯನ್ನು ರಚಿಸಿದ್ದು, ಅದು ಕೃತಿಯ ಆಶಯದ ಭಾವವನ್ನು ಸ್ಪಷ್ಟವಾಗಿ ಪ್ರಕಟಿಸುತ್ತಿದೆ.

ಉಪಸಂಹಾರ

ಹಿರೇಗೌಡರು ರಚಿಸಿದ ಆರು ಶಾಯಿ ಮಾಧ್ಯಮದ ಆಧುನಿಕ ನೆಲೆಯ ಕಲಾಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಚಿತ್ರ ೧ ಹೊರತು ಪಡಿಸಿದರೆ ಇನ್ನುಳಿದ ಎಲ್ಲ ಕೃತಿಗಳಲ್ಲಿ ಒಂದೇ ಬಗೆಯ ರಚನಾ ತಂತ್ರವನ್ನು ಸರಣಿ ರೂಪದಲ್ಲಿ ಕಾಣಬಹುದಾಗಿದೆ. ಆದರೆ ಕೃತಿಗಳ ಆಶಯಗಳು ಪರಸ್ಪರ ಭಿನ್ನವಾಗಿದ್ದು, ಕೃತಿಯ ಆಶಯಕ್ಕೆ ಪೂರಕವಾದ ಸಂಯೋಜನೆಯನ್ನು ವಿವಿಧ ಸ್ತರದಲ್ಲಿ ದುಡಿಸಿಕೊಂಡ ಹಿರೇಗೌಡರು, ಪ್ರತಿ ಕಲಾಕೃತಿಯ ಹಿನ್ನೆಲೆಯಲ್ಲಿ ತಮ್ಮ ಎಂದಿನ ಜ್ಯಾಮಿತಿಕ ವಿನ್ಯಾಸಗಳನ್ನು ಇಲ್ಲಿ ಪುನರಾವರ್ತಿಸಿದ್ದಾರೆ. ಚಿತ್ರ ೧ನ್ನು ಹೊರತುಪಡಿಸಿದಂತೆ ಚಪ್ಪಟೆಯಾದ ವರ್ಣಗಾರಿಕೆ ಇಲ್ಲಿನ ಎಲ್ಲ ಆಕೃತಿಗಳಲ್ಲಿ ಒಡಮೂಡಿದ್ದು, ಅವು ದಟ್ಟ ವರ್ಣಗಳಿಂದ ರಚಿತವಾಗಿವೆ. ಚಿತ್ರ ೧ ಪೌರಾಣಿಕ ಹಿನ್ನೆಲೆಯಲ್ಲಿ ರಚಿತಗೊಂಡಿದ್ದರೆ, ಇನ್ನುಳಿದ ಕಲಾಕೃತಿಗಳಲ್ಲಿ ಜೀವಿಗಳ ವಿಸ್ಮಯ ಪ್ರಪಂಚ, ಭೌತಿಕ ವಿಸ್ಮಯ ಹೀಗೆ ಹಲವು ನೆಲೆಗಳಲ್ಲಿ ಇಲ್ಲಿನ ಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

********

೫:೩. ತೈಲವರ್ಣ (ಆಧುನಿಕ, ನೈಜ, ಧಾರ್ಮಿಕ ಚಿತ್ರಗಳು)

ಹಿರೇಗೌಡರು ತೈಲವರ್ಣ ಮಾಧ್ಯಮದಲ್ಲಿ ಆಧುನಿಕ, ನೈಜ ಧಾರ್ಮಿಕ ಚಿತ್ರಗಳನ್ನು ನೂರಾರು ಸಂಖ್ಯೆಯಲ್ಲಿ ರಚಿಸಿದ್ದು ಅವುಗಳಲ್ಲಿ ಆಯ್ದ ಕಲಾಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

೧. ರಾಷ್ಟ್ರೀಯ ಭಾವೈಕ್ಯತೆ (೧೯೮೬)

ಈ ಕಲಾಕೃತಿಯಲ್ಲಿ ಒಂದು ಶ್ವಾನ, ಅದರ ಬೆನ್ನ ಮೇಲೆ ರಾಷ್ಟ್ರೀಯ ಬಾವುಟದ ಹೊದಿಕೆ, ಬೆಳಕು ಚೆಲ್ಲುತ್ತಿರುವ ದೀಪ, ಒಂದು ಕಿಟಕಿಯ ಮುಖಾಂತರ ಕಾಣುವ ಹರಿದ್ವರ್ಣ ಪ್ರಕೃತಿ. ಚಿತ್ರದ ಇನ್ನೊಂದು ಬದಿಗೆ ಬಟ್ಟೆಯ ಮುಖವಾಡದಲ್ಲಿ ಬಾಂಬುಗಳು ನಮ್ಮ ದೇಶದ ಒಳನುಗ್ಗುತ್ತಿರುವ ಭಾವ, ಅವುಗಳನ್ನು ತಡೆದು ನಿಲ್ಲಿಸುವಂತೆ ಭಾಸವಾಗುತ್ತಿರುವ ಯೋಧರ ಕೈಯಲ್ಲಿರುವ ರೈಫಲ್‌ಗಳಿಂದ ರಾಷ್ಟ್ರ ರಕ್ಷಣೆಯ ಭಾವ ಸೂಚಿತವಾಗುತ್ತದೆ. ರಾಷ್ಟ್ರಪ್ರೇಮ, ನಂಬಿಕೆ, ಸದಾ ಜಾಗ್ರತೆಯಿಂದ ಕೂಡಿದ ರಾಷ್ಟ್ರೀಯ ಭಾವೈಕ್ಯತೆಯನ್ನು ಸಾರುವ ಉದ್ದೇಶವನ್ನು[೧] ಹೊಂದಿದ ಈ ಕಲಾಕೃತಿಯಲ್ಲಿ ಆಕೃತಿ ನೈಜ ನೆಲೆಯಲ್ಲಿ ಚಿತ್ರಿತಗೊಂಡಿದೆ. ಇಲ್ಲಿ ಎರಡು ಬಗೆಯ ರಚನೆಗಳು ಇವೆ. ಮೊದಲನೆಯದು ಭಾರತವನ್ನು ಪ್ರತಿನಿಧಿಸುವ ರೂಪಾರ್ಥವನ್ನು ಹೊಂದಿದ ಮನೆಯ ಒಳಾವರಣದ ವಿನ್ಯಾಸದಲ್ಲಿ ಕೃತಿಯ ಪ್ರಧಾನ ಆಶಯವಾದ ಶ್ವಾನ. ಎರಡನೆಯದು ಮನೆಯ ಕಿಟಕಿಯಿಂದ ಕಾಣುವ ಹೊರಾವರಣ ದೃಶ್ಯ. ಈ ಎರಡೂ ದೃಶ್ಯಗಳಿಗೆ ಪೂರಕವಾದ ಉದ್ದೇಶಿತ ಆಕೃತಿಗಳು ಸಾಂಕೇತಿಕ ರೂಪುಗೊಂಡಿವೆ. ನಂಬಿಕೆಗೆ ಅರ್ಹವಾದ ಶ್ವಾನ ನೈಜ ನೆಲೆಯಲ್ಲಿ ಚಿತ್ರಿತಗೊಂಡಿದ್ದು ಅದರ ಮೇಲೆ ರಾಷ್ಟ್ರ ಧ್ವಜ ನಿರೂಪಿತಗೊಂಡಿದೆ. ಒಳಾವರಣದಲ್ಲಿ ಶ್ವಾನದ ಸಹಿತವಾಗಿ ಒಂದು ಬಗೆಯಲ್ಲಿ ಅಲೆಗಳಂತಹ ವಿನ್ಯಾಸಗಳು ಪ್ರಧಾನ ಆಕೃತಿಗಳನ್ನು ಮುಸುಕಾಗಿಸಿವೆ. ಶ್ವಾನದ ಮುಖವನ್ನು ಅತ್ಯಂತ ವಿವರವಾಗಿ

೦೧. ವಿ.ಬಿ.ಹಿರೇಗೌಡರ ಅಭಿಪ್ರಾಯ



೧. ರಾಷ್ಟ್ರೀಯ ಭಾವೈಕ್ಯತೆ, ೧೯೮೬





ರಚಿಸಿರುವ ಹಿರೇಗೌಡರು ಅದರಲ್ಲಿ ಮುಗ್ಧ ಭಾವವನ್ನು ಪ್ರಕಟಿಸಿದ್ದಾರೆ. ಕಿಟಕಿಯ ಆಚೆ ಕಾಣುವ ಪರಿಸರದಲ್ಲಿ ದೇಶದ ಗಡಿಯನ್ನು ಸೂಚಿಸುವ ಬೇಲಿ, ರಕ್ಷಣೆಗಾಗಿ ಸೈನಿಕರ ಕೋವಿಗಳನ್ನು ತೋರಿಸುವುದರ ಮೂಲಕ ಮೇಲೆ ಹೇಳಿದ ಉದ್ದೇಶವನ್ನು ಈಡೇರಿಸುತ್ತದೆ ಈ ಕೃತಿ. ವರ್ಣಗಾರಿಕೆಯಲ್ಲಿ ಬಹುತೇಕ ದಟ್ಟ ಹಳದಿವರ್ಣವನ್ನು ವಿವಿಧ ಶ್ರೇಣಿಗಳಲ್ಲಿ ರೂಪಾಂತರಿಸಿಕೊಂಡ ಹಿರೇಗೌಡರು, ರಮಣೀಯ ತಂತ್ರಗಾರಿಕೆಯಿಂದ ರಚಿಸಿದ್ದು, ಸಾಮಾನ್ಯ ನೋಡುಗನಿಗೂ ನಿಲುಕುವ ರೀತಿಯಲ್ಲಿ ಈ ಚಿತ್ರವನ್ನು ಪ್ರಸ್ತುತಪಡಿಸಿದ್ದಾರೆ.

೨. ಪ್ರಗತಿ ಮತ್ತು ನೆಹರು (೧೯೮೯)

ಈ ಚಿತ್ರದಲ್ಲಿ ಭಾರತದ ಪ್ರಥಮ ಪ್ರಧಾನಿಯಾದ ಜವಾಹರ್‌ಲಾಲ್ ನೆಹರುರವರ ಭಾವಚಿತ್ರ, ಅವರ ತಲೆಯ ಹಿಂಭಾಗದಲ್ಲಿ ಚಕ್ರ (ಪ್ರಗತಿಯ ಸಂಕೇತ) ಅವರು ಹೇಳಿದ ಧ್ಯೇಯೋಕ್ತಿ, "ಆರಾಮ್ ಹರಾಮ ಹೈ" ಮತ್ತು ನೆಹರುರವರು ಬರೆದ "ಡಿಸ್ಕವರಿ ಆಫ್ ಇಂಡಿಯಾ" ಗ್ರಂಥ ಹಾಗೂ ಸ್ವಾತಂತ್ರ್ಯವನ್ನು ಸಾರುವ ಹಾರುವ ಹಕ್ಕಿ ಇವೆಲ್ಲವೂ ಪ್ರಧಾನಿ ನೆಹರುರವರು ಭಾರತದ ಪ್ರಗತಿ ಕುರಿತಂತೆ ಕಂಡ ಕನಸಾಗಿತ್ತು ಎಂಬ ಉದ್ದೇಶವನ್ನು ಹೇಳುವ ಹಿನ್ನೆಲೆಯಲ್ಲಿ ಇಲ್ಲಿನ ವಿನ್ಯಾಸಗಳು ಒಂದರ ಮೇಲೊಂದರಂತೆ ಪಾರದರ್ಶಕ ಮತ್ತು ಮಸುಕಾಗಿಸುವ ತಂತ್ರಗಾರಿಕೆಯಿಂದ ರಚನೆಗೊಂಡಿವೆ. ಚಿತ್ರದ ಪ್ರಮುಖ ಆಶಯ ನೆಹರುರವರನ್ನು ಚಿಂತನಾ ಭಾವದಲ್ಲಿ ಚಿತ್ರಿಸಿದ ಹಿರೇಗೌಡರು, ಅವರ ಕನಸುಗಳನ್ನು ಪ್ರತಿಬಿಂಬಿಸುವ ಪ್ರಗತಿಯ ಚಕ್ರ, ಶಾಂತಿ ಸೂಚಕ ಪಾರಿವಾಳ, ಡಿಸ್ಕವರಿ ಆಫ್ ಇಂಡಿಯಾ ಗ್ರಂಥ, ಅವರ ಧ್ಯೇಯೋಕ್ತಿಯಾದ "ಆರಾಮ್ ಹರಾಮ ಹೈ"ಗಳನ್ನು ವಿನ್ಯಾಸಯುಕ್ತವಾಗಿ ದುಡಿಸಿಕೊಂಡ ಬಗೆ ಇದು. ಹಿರೇಗೌಡರು ತಮ್ಮ ಎಂದಿನ ಜ್ಯಾಮಿತಿಕ ಪಟ್ಟಿಕೆಯಲ್ಲಿ ನೆಹರು ಮತ್ತು ಪ್ರಗತಿಯ ಚಕ್ರವನ್ನು ವೈಭವೀಕರಿಸಿ, ಅದರ ಸುತ್ತಣ ನೆಹರುರವರ ಕನಸುಗಳನ್ನು ಸಾಂಕೇತಿಕವಾಗಿ ಪ್ರತಿಪಾದಿಸಿದ್ದಾರೆ. ಶೀತಲ ವರ್ಣ ಸಂಯೋಜನೆಯಿಂದ ಕ್ಯಾನ್ವಾಸನ್ನು ತುಂಬ ಸಮತೋಲನದಿಂದ ವಿಭಾಗಿಸಿಕೊಂಡ ಹಿರೇಗೌಡರು ದೂರದಲ್ಲಿ ಕಾಣುವ ಪ್ರಕೃತಿಯನ್ನು ಸಹ ಬಿಂಬಿಸಿದ್ದಾರೆ. ಹಾಗೆಯೇ ಅವಕಾಶದ ಮೇಲ್ಭಾಗದಲ್ಲಿ ನೀಲಾಕಾಶ ಸೂಚಕವಾಗಿ ನೀಲ ವರ್ಣದಿಂದ ಸೂಚ್ಯವಾಗಿಸಿದ್ದಾರೆ. ಅಕ್ಷರಗಳನ್ನು ಆಧುನಿಕ ಸಂದರ್ಭದಲ್ಲಿ ವಿನ್ಯಾಸಯುಕ್ತವಾಗಿ ದುಡಿಸಿಕೊಂಡ ಹಿರೇಗೌಡರು ಸಂಕೇತಗಳ ಸುತ್ತ ಒಂದು ಬಗೆಯ ದಟ್ಟತೆಯನ್ನು ಚಿತ್ರಿಸಿದ್ದಾರೆ.

೩. ಪ್ರಗತಿ ಮತ್ತು ನೆಹರು (೧೯೮೯)

ಈ ಚಿತ್ರದಲ್ಲಿ ನೆಹರುರವರು ಪ್ರಧಾನಿಯಾಗಿದ್ದ ಕಾಲದಲ್ಲಿ ಸಾಧಿಸಿದ ವೈಜ್ಞಾನಿಕ ಪ್ರಗತಿಯನ್ನು ಸಾರುವ ಪ್ರತಿಮೆಗಳು ಪ್ರಕಟಗೊಂಡಿವೆ. ಇಲ್ಲಿ ಬಾಬಾ ಅಣುಶಕ್ತಿ ಕೇಂದ್ರದ ಚಿತ್ರ, ಇನ್ನೊಂದೆಡೆ ಚಂದ್ರಯಾನದತ್ತ ಬಾಹ್ಯಾಕಾಶ ಉಪಗ್ರಹ ಉಡಾವಣೆ ಚಿತ್ರ, ಇವೆರಡರ ಮಧ್ಯದಲ್ಲಿ ನೆಹರುರವರನ್ನು ಪ್ರತಿನಿಧಿಸುವ ಅವರ ಪ್ರಿಯ ಪುಷ್ಪವಾದ ಗುಲಾಬಿ ಹೂವು ಸಾಂಕೇತಿಕವಾಗಿ ಚಿತ್ರಿತಗೊಂಡಿವೆ. ಬ್ರಿಟೀಷರ ದಾಸ್ಯದಿಂದ ಹೊರಬಂದು ಸ್ವತಂತ್ರ ರಾಷ್ಟವಾಗಿ ತಲೆ ಎತ್ತಿದ ಮೇಲೆ ನೆಹರುರವರ



೨. ಪ್ರಗತಿ ಮತ್ತು ನೆಹರು, ೧೯೮೯



೩. ಪ್ರಗತಿ ಮತ್ತು ನೆಹರು, ೧೯೮೯

ಆಳ್ವಿಕೆ ಸಂದರ್ಭ ಕೇವಲ ವ್ಯಕ್ತಿಗತವಾಗದೇ ಒಂದು ಶಕ್ತಿಯಾಗಿ ಪರಿಣಮಿಸಿತ್ತು ಎಂಬ ಉದ್ದೇಶವನ್ನು ಹೊಂದಿರುವ ಈ ಕಲಾಕೃತಿ ತಕ್ಷಣಕ್ಕೆ ತಂತ್ರ ಕಲೆಯ ವಿನ್ಯಾಸದಂತೆ ಗೋಚರವಾಗುತ್ತದೆ. ಅಣು ಶಕ್ತಿಗೆ ಹೆಚ್ಚಿನ ಒಲವು ತೋರಿಸಿದ ನೆಹರು ಅವರ ಆಶಯಕ್ಕೆ ಪೂರಕವಾಗಿ ಇಲ್ಲಿನ ವಿನ್ಯಾಸಗಳಲ್ಲಿ ಅಣು ಕೇಂದ್ರದ ವಿನ್ಯಾಸಗಳೇ ಪ್ರಧಾನವೆನಿಸುತ್ತವೆ. ಇಡೀ ಅವಕಾಶದಲ್ಲಿ ಹಳದಿ ವರ್ಣದ ಅರ್ಧ ವರ್ತುಲದ ಆಕೃತಿ, ಅದರ ಕೆಳಗೆ ಎರಡು ಕಮಾನುಗಳು, ಮೇಲ್ಭಾಗದ ಮಧ್ಯದಲ್ಲಿ ಸೂರ್ಯ, ಅದರ ಮುನ್ನೆಲೆಯಲ್ಲಿ ಅರಳಿದ ನೆಹರು ಅವರನ್ನು ಪ್ರತಿನಿಧಿಸುವ ಗುಲಾಬಿ, ಹೀಗೆ ರೂಪಾಂಶಗಳನ್ನು ವಿಂಗಡಿಸಿದ್ದಾರೆ. ಕೆಳಗಿನ ಕಮಾನಿನ ಆಕಾರಗಳಲ್ಲಿ ಮುಂಬೈನ ಬಾಬಾ ಅಣು ಶಕ್ತಿ ಕೇಂದ್ರದ ಚಿತ್ರ, ಇನ್ನೊಂದರಲ್ಲಿ ಚಂದ್ರಯಾನಕ್ಕೆ ಉಡಾಯಿಸಿರುವ ರಾಕೆಟ್‌ನ ವಿನ್ಯಾಸಗಳನ್ನು ಮೇಲಿನ ಉದ್ದೇಶಕ್ಕೆ ಪೂರಕವಾಗಿ ದುಡಿಸಿಕೊಳ್ಳಲಾಗಿದೆ. ಪ್ರಗತಿಯ ಮೂಲಕ ಭಾರತ ಬೆಳಗಬೇಕೆಂಬ ಆಶಯ ಪೂರಕವಾಗಿ ಸೂರ್ಯನಂತೆ ಪ್ರಖರವಾಗಿ ಗೋಚರವಾಗುವ ವೃತ್ತವೊಂದರ ಮುಂದೆ ಗುಲಾಬಿ ರಚನೆ ನೆಹರು ಅವರ ಪ್ರತಿನಿಧಿಯಂತೆ ತೋರ್ಪಡಿಸಲಾಗಿದ್ದು, ಅದರ ಹಿನ್ನೆಲೆಯಲ್ಲಿ ಪಟ್ಟಿಕೆ ಎಂದಿನಂತೆ ರಚನೆಯಾಗಿದೆ. ಈ ಎರಡೂ ಕಲಾಕೃತಿಗಳು ಬೆಂಗಳೂರಿನಲ್ಲಿ (೧೯೮೯) ನಡೆದ ನೆಹರು ಜನ್ಮ ಶತಮಾನೋತ್ಸವ ಸಂದರ್ಭದಲ್ಲಿ ನಡೆದ ಕಲಾಶಿಬಿರದಲ್ಲಿ ರಚಿಸಲಾದ ಕೃತಿಗಳು.

### ೪. ಸ್ಥಿರ ಚಿತ್ರಣ

ಸ್ಥಿರ ಚಿತ್ರಣ ಎಂಬುದು ಚಿತ್ರಕಲಾ ಕಲಿಕೆಯಲ್ಲಿ ಪ್ರಾರಂಭಿಕ ಅಧ್ಯಯನದ ಒಂದು ನೈಸರ್ಗಿಕ ಇಲ್ಲವೆ ಮಾನವೀಕೃತ ವಸ್ತುಗಳ ಜೋಡಣಾ ವಿಧಾನದ ವಿಷಯವಾಗಿದ್ದರೂ ಅದೊಂದು ಗಂಭೀರ ಸ್ವರೂಪದ ಪ್ರಾಯೋಗಿಕ ಹಾಗೂ ಸೃಜನಾತ್ಮಕ ಅಧ್ಯಯನವೂ ಹೌದು ಎಂದು ಅರಿಯಲು ಈ ಪ್ರಸ್ತುತ ಚಿತ್ರ ಸಾಕ್ಷಿ[೨] ಎಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ. ಏಕೆಂದರೆ ಚಿತ್ರಣ ಎಂಬುದು ನೈಜ ಅರ್ಥದಲ್ಲಿ ಹೇಳುವದಾದರೆ ಉನ್ನತ ಕಲಾಧ್ಯಯನದ ಪ್ರಾರಂಭಿಕ ಹಂತದಲ್ಲಿ ಯಾವುದೇ ವಸ್ತುಗಳನ್ನು ವಿದ್ಯಾರ್ಥಿಗಳ ಎದುರಿನಲ್ಲಿ ನೆರಳು ಬೆಳಕಿನ ವ್ಯವಸ್ಥೆಯೊಂದಿಗೆ ಯಥಾವತ್ತಾದ ವಸ್ತುವಿನ ಬಾಹ್ಯಾಕಾರ, ಪ್ರಮಾಣ, ಒಂದು ವಸ್ತುವಿನಿಂದ ಇನ್ನೊಂದು ವಸ್ತುವಿನ ಅಂತರ, ನೆರಳು ಬೆಳಕು ಹಾಗೂ ವರ್ಣಗಳನ್ನು ಯಥಾವತ್ತಾಗಿ ಗ್ರಹಿಸಿ ರೇಖೆ, ಛಾಯೆ ಹಾಗೂ ವರ್ಣಗಳನ್ನು ತುಂಬಿ ಸುಂದರವಾಗಿ ಪೂರ್ಣಗೊಳಿಸುವುದು ಎಂಬುದು ಪ್ರಾಥಮಿಕ ಹಂತದ ಅಧ್ಯಯನದ ಉದ್ದೇಶ. ಆದರೆ ಕಲಾ ಪ್ರೌಢಿಮೆಯ ಹಂತವನ್ನು ದಾಟಿದ ನಂತರ ಸ್ಥಿರ ಚಿತ್ರಣದ ವ್ಯಾಪ್ತಿ ವಿಸ್ತೃತವಾಗುತ್ತದೆ. ಅಂದರೆ ಚಿತ್ರೀಕರಣದಲ್ಲಿ ಕಲಾವಿದನಿಗೆ ಹೆಚ್ಚಿನ ಸ್ವಾತಂತ್ರ್ಯ ಬಳಸಿಕೊಂಡು ನಿರ್ದಿಷ್ಟ ವಸ್ತುವಿಗೆ ವಿಶೇಷತೆಯನ್ನೂ, ವೈವಿಧ್ಯತೆಯನ್ನೂ ಹಾಗೂ ಸೃಜನಾತ್ಮಕತೆಯ ಪ್ರಕ್ರಿಯೆಯಾದ ಪ್ರಾಬಲ್ಯ ಹೆಚ್ಚು ಆವರಿಸಿಕೊಳ್ಳುತ್ತದೆ. ಇದರ ಜೊತೆಗೆ ತಂತ್ರಗಾರಿಕೆ, ವಿಶಿಷ್ಟ ಮೈವಳಿಕೆಗಳ ರಚನೆ ಮುಂತಾದ ಪ್ರಯೋಗದಿಂದಾಗಿ ಮೂಲ ವಸ್ತು ಹೆಚ್ಚು ಹೆಚ್ಚು ಪರಿಷ್ಕೃತಗೊಂಡು, ಶೈಕ್ಷಣಿಕ ಒಲವಿನಿಂದ ಸೃಜನಶೀಲತೆಯ ಒಲವುಗಳು ಹೆಚ್ಚು ಕಾಣಿಸಿಕೊಳ್ಳುತ್ತಾ ಚಿತ್ರವು ವೈವಿಧ್ಯಮಯ ಸ್ವರೂಪಕ್ಕೆ ತಿರುಗುತ್ತದೆ. ಅಂಥ ವೈವಿಧ್ಯತೆಗೆ

೦೨. ವಿ.ಬಿ.ಹಿರೇಗೌಡರ ಅಭಿಪ್ರಾಯ



೪. ಸ್ಥಿರ ಚಿತ್ರಣ, ೧೯೯೦



೫. ಸಂಯೋಜನೆ, ೧೯೯೨

ಪೂರಕವಾದ ಈ ಚಿತ್ರ ಕಲಾವಿದನ ಸ್ವಾತಂತ್ರ್ಯಕ್ಕೆ, ನವ್ಯತೆಗೆ, ಹಾಗೂ ಸೃಜನಶೀಲತೆಗೆ ಒಂದು ಉತ್ತಮ ಉದಾಹರಣೆ ಎಂದು ಹೇಳಬಹುದಾಗಿದೆ. ಇಲ್ಲಿ ಬಳಕೆಯಾಗಿರುವ ವಸ್ತುಗಳೆಂದರೆ, ಹೂದಾನಿಗಳು, ಹೂಗುಚ್ಛಗಳು ಹಿನ್ನೆಲೆಗೆ ಪೂರಕವಾಗಿ ತ್ರಿಆಯಾಮವಾದದ ಶೈಲಿಯಲ್ಲಿ ರಚಿತಗೊಂಡಿವೆ ಹಾಗೂ ಸ್ಥಿರ ಚಿತ್ರಕ್ಕೆ ಒಂದು ವಿಶೇಷ ಮೆರಗನ್ನು ಹಾಗೂ ಅನುಭವವನ್ನು ನೀಡುವಂಥ ಚಿತ್ರ ಇದಾಗಿದ್ದು ಕ್ಯೂಬಿಕ್ ಶೈಲಿಯಲ್ಲಿ ರಚನೆಗೊಂಡಿದೆ.

ಚಿತ್ರದ ಪ್ರಧಾನ ಆಶಯವಾದ ಹೂದಾನಿ, ಹೂಗುಚ್ಛಗಳು ದಟ್ಟ ವರ್ಣದ ವಿವಿಧ ಶ್ರೇಣಿಗಳಲ್ಲಿ ರಚನೆಯಾಗಿದ್ದು, ಹೂದಾನಿಯ ಮೈವಳಿಕೆಗೆ ಪೂರಕವಾಗಿ ಜ್ಯಾಮಿತಿಕವಾಗಿ ಛಾಯೆಗಳನ್ನು ಸೃಷ್ಟಿಸಿರುವ ಹಿರೇಗೌಡರು, ಹಿನ್ನೆಲೆಯ ಅವಕಾಶದಲ್ಲಿ ಮಸುಕಾಗಿ ತಮ್ಮ ಎಂದಿನ ಆಯತಾಕಾರದ ಪಟ್ಟಿಕೆಗಳಲ್ಲಿ ತುಣುಕು ತುಣುಕಾದ ವಿವಿಧ ಜ್ಯಾಮಿತಿಕ ಆಕೃತಿಗಳನ್ನು ಹಳದಿ ವರ್ಣದ ವಿವಿಧ ಛಾಯೆಗಳಲ್ಲಿ ದುಡಿಸಿಕೊಂಡ ಕ್ರಮ ಇಲ್ಲಿದೆ. ಈ ಜ್ಯಾಮಿತಿಕ ಆಕೃತಿಗಳನ್ನು ಸ್ಪಷ್ಟವಾಗಿಸಲು ಅಲ್ಲಲ್ಲಿ ದಟ್ಟ ಛಾಯೆಯ ಸ್ಪರ್ಶ ನೀಡಲಾಗಿದೆ. ಸಂಯೋಜನೆಯ ದೃಷ್ಟಿಯಿಂದ ಒಟ್ಟು ಅವಕಾಶವನ್ನು ಪ್ರಧಾನ ಆಕೃತಿಯೊಂದಿಗೆ ಹಿನ್ನೆಲೆಯನ್ನೂ ಸಹ ವಿಂಗಡಿಸಿದ ಕ್ರಮವನ್ನು ಇಲ್ಲಿ ಅನುಸರಿಸಲಾಗಿದೆ. ಹೀಗಾಗಿ ಈ ಕಲಾಕೃತಿ ಪ್ರಧಾನ ಆಕೃತಿಯ ಮಹತ್ವಕ್ಕೆ ಸೀಮಿತವಾಗದೇ ಹಿನ್ನೆಲೆಗೂ ಅಷ್ಟೇ ಮಹತ್ವವನ್ನು ಕಲ್ಪಿಸಿಕೊಡುತ್ತದೆ.

೫. ಸಂಯೋಜನೆ (೧೯೬೨)

ಇದು ಹಿರೇಗೌಡರ ಸ್ವ-ಭಾವ ಚಿತ್ರ. ಬೆಳಕಿನ ಹಿನ್ನೆಲೆ ಒಂದು ರೀತಿಯ ಭ್ರಮಾಲೋಕವನ್ನು ಸೃಷ್ಟಿಸಿದ್ದು, ಅದರಲ್ಲಿ ಜ್ಯಾಮಿತಿಕ ಹಾಗೂ ನಿಸರ್ಗದ ರೂಪಗಳನ್ನು ಹೊಂದಿದೆ. ಬಹುಶ: ಈ ಕೃತಿ ಕಲಾವಿದನ ನಿಸರ್ಗ ಪ್ರೀತಿಯನ್ನು ಎತ್ತಿ ತೋರಿಸುತ್ತದೆ. ಇದರಲ್ಲಿ ಕಂಡುಬರುವ ಬೆಳಕಿನ ಪ್ರಭೆ ಕಲಾವಿದನ ಪ್ರತಿಭೆಯನ್ನು ಸೂಚಿಸುತ್ತಿದ್ದು, ಅದಕ್ಕೆ ಸ್ಪಷ್ಟತೆಯನ್ನು ಒದಗಿಸುವ ಕಾರಣವಾಗಿ ದಟ್ಟ ಛಾಯೆಯಿಂದ ಚೌಕಟ್ಟಿನಂತೆ ಆಯತಾಕಾರದ ವಿನ್ಯಾಸ ರಚನೆಯಾಗಿದೆ. ದಟ್ಟ ವರ್ಣದ ಛಾಯೆಯಲ್ಲಿ ರೂಪುಗೊಂಡ ಹಿರೇಗೌಡರ ಅವರ ಭಾವ ಚಹರೆ ವಾಸ್ತವತೆಗಿಂತ ಸೃಜನಾತ್ಮಕ ನೆಲೆಯಲ್ಲಿ, ಸಾಂಕೇತಿಕವಾಗಿ ನಿರೂಪಿಸಲ್ಪಟ್ಟಿರುವುದು. ಅವರ ಮುಖಲಕ್ಷಣದಲ್ಲಿ ಪ್ರಮುಖವಾಗಿ ಕಂಡು ಬರುವುದು ಕೇಶವಿನ್ಯಾಸ. ಅಂತಹ ಕೇಶ ವಿನ್ಯಾಸವನ್ನು ದುಡಿಸಿಕೊಂಡ ಹಿರೇಗೌಡರು ಹಿನ್ನೆಲೆಯ ಸುತ್ತ ಜ್ಯಾಮಿತಿಕ ಆಕೃತಿಗಳ ವಿವಿಧ ಆಯತಾಕಾರಗಳು ಎಂದಿನಂತೆ ರಚನೆಯಾಗಿವೆ. ಪ್ರಾಕೃತಿಕ ವಿನ್ಯಾಸಗಳನ್ನು ಚಿತ್ರದ ಎಡಭಾಗದಲ್ಲಿ ಮಸುಕಾಗಿ ನಿರೂಪಿಸಿರುವ ಹಿರೇಗೌಡರು ಅವುಗಳನ್ನು ಸಹ ಹಿನ್ನೆಲೆಯ ಒಂದು ಭಾಗವಾಗಿ ಚಿತ್ರಿಸಿದ್ದಾರೆ. ಶುಭ್ರ ವರ್ಣಗಳ ಸಾಂಗತ್ಯದಿಂದ ನಿರೂಪಿತಗೊಂಡ ಇಲ್ಲಿನ ಹಿನ್ನೆಲೆ ಕೃತಿಯ ಪ್ರಮುಖ ಆಶಯವೆಂಬಂತೆ ಕಂಡು ಬರುತ್ತದಲ್ಲದೇ, ಅದರಲ್ಲಿ ಬೆಳಕು ಮತ್ತು ಕತ್ತಲೆಯ ಅನುಭವವನ್ನು ಕೊಡುವಂತೆ ವಿನ್ಯಾಸಗಳನ್ನು ಒಂದರ ಮೇಲೊಂದರಂತೆ ಚಿತ್ರಿಸಿದ್ದಾರೆ. ವಾಸ್ತವವಾಗಿ ಹಿನ್ನೆಲೆಯಲ್ಲಿ ಬೆಳಕಿನ ಛಾಯೆಯು ಇದ್ದಾಗ, ಮುಂಭಾಗದಲ್ಲಿರುವ ವಸ್ತು ಅಥವಾ ವ್ಯಕ್ತಿ ಕಪ್ಪಾಗಿ ಕಾಣುವ ಪರಿಣಾಮವನ್ನು ಈ ಕೃತಿ ನೆನಪಿಸಿದರೂ, ಹಿನ್ನೆಲೆಯ ವರ್ಣ ಮೇಳಗಳ



೬. ಮದ್ರಾಸ್ ಕಣ್ಣು, ೧೯೯೬



೭. ಚೆಂಬೆಳಕು, ೧೯೯೬



೮. ತಾಯಿ ಮತ್ತು ಮಗು, ೧೯೯೬

ಆಧಾರದ ಮೇಲೆ ಹಿರೇಗೌಡರ ಬದುಕಿನ ವರ್ಣಪುಟಗಳನ್ನು ಪ್ರತಿಬಿಂಬಿಸುವ ಆಶಯವನ್ನು ಹೊಂದಿದೆ ಎನಿಸುತ್ತದೆ. ಕೃತಿಯಲ್ಲಿ ಕಂಡು ಬರುವ ಚಿಕ್ಕ ಚಿಕ್ಕ ಛಾಯೆಗಳ ಆಕೃತಿಗಳೇ ಕ್ಯಾನ್ವಾಸನ್ನು ವಿಂಗಡಿಸುವ ಕ್ರಮ ಇಲ್ಲಿದೆ. ಹೀಗಾಗಿ ಸಂಯೋಜನೆ ದೃಷ್ಟಿಯಲ್ಲಿ ಮತ್ತು ವಸ್ತು ವಿಷಯದ ಆಯ್ಕೆಯಲ್ಲಿ ಈ ಕಲಾಕೃತಿ ವಿಭಿನ್ನ ನೆಲೆಯಲ್ಲಿ ತನ್ನ ಮಹತ್ವವನ್ನು ಕಂಡುಕೊಳ್ಳುತ್ತದೆ.

**೬. ಮದ್ರಾಸ ಕಣ್ಣು** (೧೯೯೬)

ಮದ್ರಾಸ ಕಣ್ಣು ಬಂದವರ ಕೆಂಪು ಕಣ್ಣನ್ನು ನೇರವಾಗಿ ಗಮನಿಸಿದರೆ ನೋಡಿದವರಿಗೂ ಮದ್ರಾಸ ಕಣ್ಣು ಬರುತ್ತದೆ ಎಂಬ ನಂಬಿಕೆ ಇದೆ. ಏಕೆಂದರೆ ಈ ರೋಗ ಅಷ್ಟೊಂದು ಭಯಂಕರ ಸೋಂಕು ರೋಗವೆಂಬುದು ವೈದ್ಯರ ಸಲಹೆಯಾಗಿದೆ. ಆ ಹಿನ್ನೆಲೆಯಲ್ಲಿ ಈ ಚಿತ್ರ ನಿರ್ಮಿತವಾಗಿದೆ.[೩] ಇಲ್ಲಿ ಒಬ್ಬ ಹೆಣ್ಣು ಮಗಳು ತನ್ನ ಎಡಗೈಯನ್ನು ಮುಖದ ಮೇಲೆ ಎತ್ತಿ ಹಿಡಿದು ತನ್ನ ಕಣ್ಣನ್ನು ಮುಚ್ಚಿಕೊಂಡಿರುವ ರಚನೆ ಇದೆ. ಹಾಗೆಯೇ ತನ್ನ ಬಲಗೈಯನ್ನು ತನ್ನ ದೇಹದ ಹಿಂದಕ್ಕೆ ಚಾಚಿಕೊಂಡು ನನ್ನ ಕಣ್ಣನ್ನು ನೋಡಬೇಡಿ ಎಂಬ ಭಂಗಿಯಲ್ಲಿ ನಿಂತಂತಿದೆ. ಈ ಚಿತ್ರದ ಮೇಲ್ಭಾಗದಲ್ಲಿ ಒಂದು ಮಗುವಿನ ಕೈ ಚಾಚಿದಂತೆ ಕಾಣುತ್ತಿದೆ. ಅದೂ ಸಹ ನೀನು ನನ್ನ ಹತ್ತಿರ ಬರಬೇಡವೆಂಬಂತೆ ಕೈಸನ್ನೆ ಮಾಡಿದ ಅನುಭವವಾಗುತ್ತಿದೆ. ಅಂದರೆ "ನೀ ನನ್ನ ನೋಡಬೇಡ" ಎಂಬ ಸಂದೇಶ ನೀಡಿದಂತಿರುವುದು ಈ ಚಿತ್ರದ ವಿಶೇಷತೆ. ಸಾಮಾನ್ಯ ನೋಡುಗನಿಗೆ ತಕ್ಷಣಕ್ಕೆ ಗ್ರಹಿಕೆಗೆ ಒಳಗಾಗದ, ಈ ಕಲಾಕೃತಿ ಆಕೃತಿಗಳ ಅಂಚುಗಳೆಲ್ಲವು ದಟ್ಟ ಛಾಯೆಯಿಂದ ರೂಪಿತಗೊಂಡಿವೆ. ಕಣ್ಣನ್ನು ಅವಕಾಶದ ಬಲಭಾಗದಲ್ಲಿ ಚಿತ್ರಿಸಿ, ಅದಕ್ಕೆ ಪೂರಕವಾಗಿರುವ ಕೈಗಳನ್ನು ಅವಕಾಶದ ಅರ್ಧದ ಮೇಲ್ಭಾಗದಲ್ಲಿ ವಿನ್ಯಾಸಗೊಳಿಸಲಾಗಿದೆ. ಹಳದಿ ವರ್ಣದ ಛಾಯೆಯಲ್ಲಿ, ಕಿತ್ತಳೆ ವರ್ಣದ ವಿವಿಧ ಶ್ರೇಣಿಯ ವರ್ಣಗಳನ್ನು ಹಿತವಾಗಿ ದುಡಿಸಿಕೊಂಡಿರುವ ಹಿರೇಗೌಡರು ಕೃತಿಯ ಶೀರ್ಷಿಕೆಗೆ ಪೂರಕವಾದ ವರ್ಣಗಾರಿಕೆಯನ್ನು ಸಾಂಕೇತಿಕವಾಗಿ ಬಳಸಿಕೊಂಡ ಪರಿ ಇಲ್ಲಿದೆ. ಒಂದು ಬಗೆಯಲ್ಲಿ ತ್ರಿಕೋನಾಕೃತಿಯನ್ನು ತಲೆಕೆಳಗಾದ ಬಗೆಯಲ್ಲಿ ಒಟ್ಟು ವಿನ್ಯಾಸಗಳನ್ನು ಸಂಯೋಜಿಸಿದ, ತೈಲವರ್ಣವನ್ನು ಪಾರದರ್ಶಕ ತಂತ್ರದಲ್ಲಿ ದುಡಿಸಿಕೊಂಡ ತಂತ್ರಗಾರಿಕೆ ಇಲ್ಲಿದೆ.

**೭. ಚಿಂಬೆಳಕು** (೧೯೯೬)

ಈ ಚಿತ್ರದ ವಿಶೇಷವೆಂದರೆ, ನಿಸರ್ಗದಲ್ಲಿ ಕರಾಳ ರಾತ್ರಿಯಲ್ಲಿ ಯಾವುದೋ ದಿಕ್ಕಿನಿಂದ ಒಂದು ವಿದ್ಯುತ್ ಬೆಳಕು ಗಿಡದ ಎಲೆಗಳ ಮಧ್ಯದಿಂದ ಸಂಚಲನವಾದರೆ ತೂರಿ ಬರುವ ಬೆಳಕು ಅತೀ ಪ್ರಖರವಾಗಿರುತ್ತದೆ, ಸಮೃದ್ಧವಾಗಿರುತ್ತದೆ, ಮೂಲ ವರ್ಣದ ಪ್ರಖರತೆಯ ಹತ್ತು ಪಟ್ಟು ಪ್ರಜ್ವಲಿಸುತ್ತವೆ ಎಂಬ ಅನುಭವವನ್ನು ಇದು ಎತ್ತಿ ತೋರಿಸುತ್ತದೆ. ಆ ಹಿನ್ನೆಲೆಯಲ್ಲಿ ಈ ಕಲಾಕೃತಿಯಲ್ಲಿ ರೂಪಿತಗೊಂಡ ಎಲೆಗಳು, ಕಾಂಡಗಳು ಹಾಗೂ ಅವುಗಳಿಗೆ ಲೇಪಿತಗೊಂಡ ಕೆಂಪು, ಹಳದಿ ಹಾಗೂ ಕಂದು ವರ್ಣಗಳು ಸಂತಸ ನೀಡುವುದರೊಂದಿಗೆ ಭಯವನ್ನೂ ಸೃಷ್ಟಿಸುವ ಹಿನ್ನೆಲೆಯಲ್ಲಿ

೦೩. ಎ.ಬಿ.ಹಿರೇಗೌಡರ ಅಭಿಪ್ರಾಯ

ಸಮ್ಮಿಶ್ರ ಅನುಭವ ನೀಡುವ ಚಿತ್ರ. ಎಲೆಗಳ ವಿನ್ಯಾಸಗಳು ಲಾಲಿತ್ಯಪೂರ್ಣವಾಗಿ ರಚನೆಗೊಂಡಿದ್ದು, ವರ್ಣಗಾರಿಕೆಯಲ್ಲಿ ಶುದ್ಧತೆಯನ್ನು ಕಾಪಿಟ್ಟುಕೊಳ್ಳಲಾಗಿದೆ. ಓರೆಯಾಗಿ ಸಂಯೋಜನೆಗೊಂಡಿರುವ ಇಲ್ಲಿ ಆಕೃತಿಗಳು ಪ್ರಕೃತಿ ಮೃದುತ್ವದೊಂದಿಗೆ ಕತ್ತಲೆ ಮತ್ತು ಬೆಳಕಿನ ಸ್ಪಷ್ಟ ವ್ಯತ್ಯಸ್ಥ ನೀತಿಯೊಂದನ್ನು ಪ್ರತಿಪಾದಿಸುತ್ತವೆ. ಬೆಳಕಿನ ರೂಪಾರ್ಥಗಳನ್ನು ಸ್ಪಷ್ಟಗೊಳಿಸುವ ಆಶಯಕ್ಕೆ ಪೂರಕವಾಗಿ ದಟ್ಟ ಛಾಯೆಯ ಇತರ ವಿನ್ಯಾಸಗಳು ಲಲಿತವಾಗಿ ರಚನೆಗೊಂಡು ಕತ್ತಲೆಯ ಲಯವನ್ನು ಪ್ರತಿನಿಧಿಸುತ್ತವೆ.

**೮. ತಾಯಿ ಮತ್ತು ಮಗು (೧೯೯೬)**

ಈ ಚಿತ್ರದ ಪ್ರಮುಖ ವಸ್ತು ಹಳ್ಳಿಯ ಗೃಹಿಣಿ ತನ್ನ ಮಗುವಿನೊಂದಿಗೆ ತನ್ನ ಪ್ರೀತಿಯನ್ನು ಹಂಚಿಕೊಳ್ಳುತ್ತಿರುವಂತೆ ಭಾಸವಾಗುತ್ತದೆ. ಅಲ್ಲದೆ ಪಕ್ಕದಲ್ಲಿ ಮಗುವಿನ ಆಟಿಕೆ ಸಾಮಾನು, ಮಲಗುವ ಹೊರಸು, ಹಾಗೂ ಹಿನ್ನೆಲೆಯಲ್ಲಿ ಹಳ್ಳಿಯ ಮನೆಗಳ ಹೊರಾಂಗಣ ಮೋಡ ಕವಿದ ಆಕಾಶ ಒಂದು ವಿನೂತನ ರೀತಿಯಲ್ಲಿ ಚಿತ್ರೀಕರಿಸಲ್ಪಟ್ಟಿದೆ. ಈ ಚಿತ್ರದ ವರ್ಣ ಸಂಯೋಜನೆಯು ಮೃದುತ್ವವನ್ನು ಹೇಳುವುದರೊಂದಿಗೆ ತಾಯಿ ಮಗುವಿನ ಮಧುರ ಪ್ರೀತಿಯನ್ನು ಸ್ಫುರಿಸುತ್ತದೆ. ಹಿರೇಗೌಡರು ಎಂದಿನ ಜ್ಯಾಮಿತಿಕ ಆಕಾರಗಳನ್ನೇ ಕಲಾಕೃತಿಯ ಪ್ರಧಾನ ಆಕೃತಿಯಲ್ಲಿ ಹಾಗೆಯೇ ಹಿನ್ನೆಲೆಯಲ್ಲೂ ದುಡಿಸಿಕೊಂಡ ಕ್ರಮವಿದೆ. ಈ ಆಕೃತಿಯಲ್ಲಿ ಬಹು ಹಿತಮಿತವಾದ ವರ್ಣಗಳನ್ನು ಸೂಕ್ಷ್ಮ ಛಾಯೆಗಳನ್ನು ವಿವಿಧ ಶ್ರೇಣಿಯಲ್ಲಿ ಸೃಷ್ಟಿಸುವುದರ ಮೂಲಕ ಕೃತಿಯ ಆಶಯಕ್ಕೆ ಬಲ ತಂದುಕೊಡುತ್ತಾರೆ. ಆಕೃತಿಯಲ್ಲಿ ನೀಳ ಶರೀರವನ್ನು ಸೃಷ್ಟಿಸಿ, ತಾಯಿ ಮತ್ತು ಮಗುವಿನ ಅಪ್ಪುಗೆಯ ಹಿತಾನುಭವ ಆಧುನಿಕ ಶೈಲಿಯಲ್ಲೂ ಪ್ರಕಟವಾಗುತ್ತದೆ! ಅದಕ್ಕೆ ಪೂರಕವಾಗಿ ಮನೆಯ ಒಳಾವರಣವನ್ನು ಚಪ್ಪಟೆಯಾಗಿ ಚಿತ್ರಿಸಿದ ಹಿರೇಗೌಡರು ತಮ್ಮ ಎಂದಿನ ಚಿಕ್ಕ ಚಿಕ್ಕ ಆಕೃತಿಗಳೊಂದಿಗೆ ಈ ಕೃತಿ ರಚಿಸಿದ್ದಾರೆ. ಅದಕ್ಕಾಗಿಯೇ ಅವಕಾಶವನ್ನು ಆಯತಾಕಾರದಲ್ಲಿ ವಿಭಜಿಸಿಕೊಂಡು ಹಿನ್ನೆಲೆಗೆ ಒಂದು ಬಗೆಯ ಹಿತವಾದ ವಾತಾವರಣವನ್ನು ಕಲ್ಪಿಸಿಕೊಂಡು ಕೆಳಭಾಗದಲ್ಲಿ ಮಸುಕಾದ ರಚನಾ ನಿರ್ವಹಣೆಯಲ್ಲಿ ಬಟ್ಟೆಗಳನ್ನು, ಆಟಿಕೆ ಸಾಮಾನುಗಳನ್ನು, ಹೊರಸುಗಳನ್ನು ರಚಿಸಿದ್ದಾರೆ. ಈ ಚಿತ್ರದ ಒಟ್ಟಾರೆ ಅರ್ಥಸಾಧ್ಯತೆ ಭಾವಪರವಶತೆ. ಇದನ್ನು ತುಂಬ ಅರ್ಥಗರ್ಭಿತ ನೆಲೆಯಲ್ಲಿ ಸೃಷ್ಟಿಸಿರುವುದರ ಹಿನ್ನೆಲೆಯಲ್ಲಿ ಒಬ್ಬ ಸೃಜನಶೀಲರಾಗಿ ಹೊರಹೊಮ್ಮುತ್ತಾರೆ.

**೯. ಸ್ವರ್ಣದ್ವಾರ (೧೯೯೬)**

ಈ ಚಿತ್ರದಲ್ಲಿ ಪ್ರಮುಖವಾಗಿ ಕಾಣುವ ರೂಪಗಳು ಗತವೈಭವ ಸಾರುವ ಅರಮನೆಯ ದ್ವಾರಗಳು. ಅವೆಲ್ಲವೂ ನಿರ್ಲಕ್ಷಕ್ಕೆ ಒಳಗಾಗಿ ಅಳಿವು ಉಳಿವಿನ ಅಂಚಿನಲ್ಲಿ ತೊಳಲಾಡುತ್ತಿವೆ. ಇಂಗ್ಲೀಷಿನ "ಓಲ್ಡ್ ಈಸ್ ಗೋಲ್ಡ್" ಎಂಬ ನಿತ್ಯ ನೂತನವಾದ ಗಾದೆಯನ್ನು ನೆನಪಿಸುತ್ತದೆ ಈ ಕೃತಿ, ಕಾಲ ಕಾಲಕ್ಕೂ ತನ್ನ ಅಸ್ತಿತ್ವವನ್ನು ಚಿರಾಯುವಾಗಿಸಿಕೊಂಡಿದೆ. ಈ ಚಿತ್ರದಲ್ಲಿ ಕಾಣುವ ಅರಮನೆಯ ವಿವಿಧ ದ್ವಾರಗಳು ವಿವಿಧ ಕಾಲದಲ್ಲಿ ಆಳ್ವಿಕೆ ನಡೆಸಿದ ರಾಜ ಮಹಾರಾಜರು, ಮಹಾರಾಣಿಯರು, ಯುವರಾಜರು, ಪಂಡಿತರು ಇತ್ಯಾದಿ ಮಹಾನ್ ಶಕ್ತಿಗಳಿಗೆ ಅಸ್ತಿತ್ವ ನೀಡಿ



೯. ಸ್ವರ್ಣದ್ವಾರ, ೧೯೯೬



೧೦. ಲಾವಾರಸ, ೧೯೯೬



೧೧. ಸಮುದ್ರ ತಟ, ೧೯೯೬

ಪಾವನಗೊಂಡಿವೆ. ಕಾಲ ಕಳೆದಂತೆಲ್ಲ ರಾಜ ಮಹಾರಾಜರ ಸಾಧನೆಗಳು, ಘೋಷಣೆಗಳು ಮಸುಕಾಗಿ ನೆನಪಿನಂಗಳದಿಂದ ಮಾಯವಾಗುತ್ತವೆ. ಆದರೆ ಆ ನೆನಪುಗಳಿಗೆ ಐತಿಹ್ಯವೆಂಬ ಸುವರ್ಣ ಕಳೆ ಬರುತ್ತದೆ. ಹಾಗೆಯೇ ಅವರು ಕಟ್ಟಿದ ಅರಮನೆಗಳು, ಗುರುಮನೆಗಳು, ಕೋಟೆಕೊತ್ತಲಗಳು ಇತಿಹಾಸದ ಪುಟದಲ್ಲಿ ಸೇರುತ್ತವೆ ಹಾಗೂ ಅಂಥ ಪಳೆಯುಳಿಕೆ ನಿರಂತರವಾಗಿ ಪ್ರವಾಸಿಗರ ನೋಟಕ್ಕೆ ಕಾರಣವಾಗುತ್ತವೆ. ಈ ಕಾರಣದಿಂದ "ಓಲ್ಡ್ ಈಸ್ ಗೋಲ್ಡ್" ಎಂಬ ಉಕ್ತಿಗೆ ಪೂರಕವಾಗಿ ಈ ಚಿತ್ರದಲ್ಲಿ ಕಾಣುವ ದ್ವಾರಗಳು ಸ್ವರ್ಣದ್ವಾರವೆಂಬ ಪರಿಕಲ್ಪನೆಗೆ ಹತ್ತಿರವಾಗುತ್ತಾ ಹೋಗುತ್ತವೆ ಎಂಬ ಅನುಭವಕ್ಕೆ ಪೂರಕವಾಗಿ ಸ್ವರ್ಣಯುಕ್ತವಾದ ವರ್ಣ ಮೇಳವನ್ನೇ ಈ ಕೃತಿ ರಚನೆಗೆ ದುಡಿಸಿಕೊಂಡಿದ್ದಾರೆ.

ಹಿನ್ನೆಲೆಯಲ್ಲಿ ಬೆಳ್ಳಿ ಮೋಡಗಳನ್ನು ಪ್ರತಿನಿಧಿಸುವ ಆಕೃತಿಗಳೊಂದಿಗೆ ಮುನ್ನೆಲೆಯಲ್ಲಿ ಆಗ್ರಾ ಕೋಟೆಯನ್ನೇ ನೆನಪಿಸುವ ಅರಮನೆಗಳ ಆಕೃತಿಗಳು ವಿವಿಧ ಛಾಯೆಗಳಲ್ಲಿ ಪಾರದರ್ಶಕವಾಗಿ ಒಂದರ ಮೇಲೊಂದಂತೆ ರಚನೆಗೊಂಡಿವೆ. ಅರಮನೆಗಳ ವೈಭವೀಕರಣಕ್ಕೆ ಪೂರಕವಾದ ವಿವರಣಾತ್ಮಕ ವಿನ್ಯಾಸಗಳು ಇಲ್ಲಿ ರಚನೆಗೊಳ್ಳದಿದ್ದರೂ, ಅರಮನೆಗಳ ವಾಸ್ತು ವಿನ್ಯಾಸವನ್ನು ಚಪ್ಪಟೆಯಾಗಿ ಗ್ರಹಿಸಿರುವ ಹಿರೇಗೌಡರು ಕೃತಿಯ ಒಟ್ಟು ಆಶಯಕ್ಕೆ ಶುಭ್ರ ವರ್ಣಗಳ ಸಾಂಗತ್ಯವನ್ನು ನಿರ್ವಹಿಸಿದ್ದಾರೆ. ಸಂಯೋಜನೆಯ ದೃಷ್ಟಿಯಿಂದ ಈ ಕೃತಿಯನ್ನು ವಿಶ್ಲೇಷಿಸಿದಾಗ ಅವಕಾಶದ ಬಲಭಾಗದಲ್ಲಿ ಎತ್ತರದ ಅಲಂಕಾರಿಕ ಕಟ್ಟಡ ರಚನೆಗೊಂಡಿದ್ದರೆ, ಎಡ ಪಾರ್ಶ್ವದಲ್ಲಿ ಅವಕಾಶದ ಅರ್ಧದ ಕೆಲಭಾಗದಲ್ಲಿ ಅವು ರಚನೆಗೊಂಡಿವೆ. ಹೀಗೆ ಹಲವು ಬಗೆಯ ಅರ್ಥಸಾಧ್ಯತೆಗಳಿಂದ ಮತ್ತು ಅನುಭವಗಳಿಂದ ಈ ಕೃತಿ ತನ್ನ ಮೂಲ ಆಶಯವನ್ನು ಸಾರ್ಥಕಗೊಳಿಸಿಕೊಳ್ಳುತ್ತದೆ.

### ೧೦. ಲಾವಾರಸ (೧೯೯೬)

ಯಾವುದೇ ಗ್ರಹದ ಗರ್ಭದಲ್ಲಿ ಅಗಣಿತವಾದ ಲಾವಾರಸದ ಖಣಿ ಹುದುಗಿರುವುದು ವೈಜ್ಞಾನಿಕ ಸತ್ಯ. ಇದಕ್ಕೆ ನಿದರ್ಶನವೆಂದರೆ ಜಗತ್ತಿನ ಅನೇಕ ಭಾಗದಲ್ಲಿ ಜ್ವಾಲಾಮುಖಿಗಳು ಉದ್ಭವವಾಗಿ ಕುದಿಯುವ ಲಾವಾರಸ ಉಕ್ಕಿ ಹೊಳೆ ಹರಿದಂತೆ ಹರಿದು ಅದಕ್ಕೆ ಸಿಲುಕಿದ ಅನೇಕ ಜೈವಿಕ ವಸ್ತು ಸುಟ್ಟು ಶಿಲಾಸಾಗರವಾಗಿರುವ ವಿಸ್ಮಯಗಳು ಇಂದಿಗೂ ಕಾಣಸಿಗುತ್ತವೆ. ಈ ವೈಜ್ಞಾನಿಕ ಸತ್ಯದ ಹಿಂದಿರುವ ಲಾವಾರಸದ ಪ್ರಖರತೆಯನ್ನು ಅಮೂರ್ತ ರೀತಿಯ ಭ್ರಮಾಲೋಕಕ್ಕೆ ನೋಡುಗನನ್ನು ಒಯ್ಯುವ ಪ್ರಯತ್ನ ಈ ಚಿತ್ರದ ಉದ್ದೇಶವಾಗಿದೆ. ಈ ಹಿನ್ನೆಲೆಯಲ್ಲಿ ಈ ಕೃತಿ ಅತೀ ಸಂಕ್ಷೇಪಯುಕ್ತವಾದ ಆಕೃತಿಗಳಿಂದ ರೂಪಿತಗೊಂಡಿದೆ. ಅವಕಾಶದ ಮಧ್ಯಭಾಗಕ್ಕೆ ಸಂಯೋಜನೆಗೊಂಡಿರುವ ವೃತ್ತದಲ್ಲಿ ಕೇಸರಿವರ್ಣ, ಸುತ್ತಣದಲ್ಲಿ ಹಳದಿವರ್ಣವು ಜ್ವಾಲಾಮುಖಿಯನ್ನು ಪ್ರತಿನಿಧಿಸುತ್ತದೆ. ಮೇಲ್ಭಾಗದಲ್ಲಿ ಬೆಂಕಿಯ ಕೆನ್ನಾಲಿಗೆಗಳನ್ನು ರೂಪಾರ್ಥಿಸುವ ರಚನೆ ಇದೆ. ಹಿನ್ನೆಲೆಯಲ್ಲಿ ಪಾರದರ್ಶಕವಾದ ವೃತ್ತಾಕಾರದ ಪಟ್ಟಿಕೆಗಳು ಚಿತ್ರಿತಗೊಂಡಿವೆ. ಹೀಗೆ ಜ್ವಾಲಾಮುಖಿ ಪ್ರೇರಣೆಯಿಂದ ಹಿರೇಗೌಡರು ದೃಶ್ಯ ಮುಖಿಯಾಗಿ ಈ ಕೃತಿಯನ್ನು ರಚಿಸಿದ್ದಾರೆ.

### ೧೧. ಸಮುದ್ರ ತಟ (೧೯೯೬)

ಈ ಕಲಾಕೃತಿಯನ್ನು ಸೂಕ್ಷ್ಮವಾಗಿ ಗ್ರಹಿಸಿದರೆ ಸಮುದ್ರದ ಅಲೆಗಳು ಒಂದಕ್ಕೊಂದು ಅಪ್ಪಳಿಸಿ ನಿಧಾನಗತಿಯಲ್ಲಿ ಸಮುದ್ರ ತಟವನ್ನು ಸೇರುವಾಗ ನಿಶ್ಯಕ್ತವಾದ ಬುರುಗು ಮಾತ್ರ ಉಳಿದು ಪುನಃ ಅಲೆಗಳು ಹಿಂದಕ್ಕೆ ಸರಿದು ಇನ್ನೊಂದು ಅಬ್ಬರದ ಅಲೆಯೊಳಗೆ ಸೇರಿ ಲೀನವಾಗುತ್ತದೆ ಎಂಬ ನಿತ್ಯ ಸತ್ಯವನ್ನು ಬಹಿರಂಗಪಡಿಸುವುದು.[೪] ಸಾಮಾನ್ಯವಾಗಿ ಮುಂಗಾರು ಮಳೆಗಾಲದ ಸಂದರ್ಭದಲ್ಲಿ ಸಮುದ್ರ ತಟದಿಂದ ದಿಗಂತದ ಮಧ್ಯದಲ್ಲಿ ಅನೇಕ ರೀತಿಯ ಪ್ರಕೃತಿಯ ವಿಸ್ಮಯಗಳು ಘಟಿಸುತ್ತವೆ. ಆ ಸಂದರ್ಭದಲ್ಲಿ ಗುಡುಗು, ಮಿಂಚು, ಕಾರ್ಮೋಡದ ಭರಾಟೆ, ನಿಶ್ಯಬ್ಧವಾದ ಮಂಜಿನಾಕಾರದ ತೆಳು ನೀಲ ಆಕಾಶ, ಆಕಾಶದಲ್ಲಿ ಇನ್ನೊಂದು ವೈವಿಧ್ಯಮಯವಾದ ವರ್ಣಲೋಕ ಅನಾವರಣಗೊಳ್ಳುವ ರೀತಿ, ಅದರೊಳಗೆ ಅಪರೂಪದ ಹಸಿರು ವರ್ಣ ಉದ್ಭವವಾಗುವ ಸನ್ನಿವೇಶ. ಹೀಗೆ ಹತ್ತು ಹಲವು ಅಪರೂಪದ ಚಿತ್ರ ವಿಚಿತ್ರಗಳನ್ನು ಸಮುದ್ರ ತಟದಲ್ಲಿ ಕುಳಿತು ವೀಕ್ಷಿಸಿದಾಗ ಸಿಕ್ಕ ಅನುಭವಗಳ ಸರಣೀ ಫಲಕಗಳನ್ನು ಈ ಚಿತ್ರದಲ್ಲಿ ಗಮನಿಸಬಹುದಾಗಿದೆ. ಇಲ್ಲಿ ಮೂರು ಪಟ್ಟಿಕೆಗಳು ಲಂಬವಾಗಿ ರಚನೆಗೊಂಡಿದ್ದು, ಅದರಲ್ಲಿ ಪ್ರಮುಖವಾದುದು ಮುನ್ನೆಲೆಯಲ್ಲಿ ಇರುವ ಪಟ್ಟಿಕೆ. ಹಿರೇಗೌಡರು ಭೌತಿಕ ವಿಸ್ಮಯಗಳನ್ನು, ಅಂದರೆ ಮುಂಗಾರಿನ ಸಂದರ್ಭದಲ್ಲಿ ಉಂಟಾಗುವ ಪರಿಣಾಮಗಳ ಕುರಿತು ಶುಭ್ರ ವರ್ಣಗಳನ್ನು ಹಿತವಾಗಿ ಬಳಸಿಕೊಂಡಿದ್ದಾರೆ. ಹಿನ್ನೆಲೆಯ ಎರಡು ಆಕೃತಿಗಳು ಮಸುಕಾಗಿದ್ದು ಮುನ್ನೆಲೆಯ ಪಟ್ಟಿಕೆಯಿಂದ ದೂರದ ಅನುಭವವನ್ನು ನೀಡುತ್ತವೆ. ಈ ಪಟ್ಟಿಕೆಗೆ ಅಡ್ಡವಾಗಿ ಸಮುದ್ರದ ಅಲೆಗಳನ್ನು ನೀಲಿ ಮತ್ತು ತೆಳು ಕಿತ್ತಳೆ ವರ್ಣದ ಸಾಂಗತ್ಯದಿಂದ ರಚಿಸಿದ್ದಾರೆ. ಹಿನ್ನೆಲೆಯಲ್ಲಿ ಆಕಾಶ ಸೂಚಕವಾದ ಚಪ್ಪಟೆಯಾದ ಲೇಪನದೊಳಗೆ ಅಲ್ಲಲ್ಲಿ ಮಸುಕಾದ ಜ್ಯಾಮಿತಿಕ ಆಕೃತಿಗಳು ಮುಂಗಾರಿನ ಸಂದರ್ಭದಲ್ಲಿ ನಡೆಯುವ ಪರಿಣಾಮಗಳನ್ನು ಪ್ರತಿನಿಧಿಸುತ್ತವೆ.

### ೧೨. ಭಾವಚಿತ್ರ (೧೯೯೬)

ಇದೊಂದು ನವ್ಯ ಸ್ವರೂಪದ ಭಾವಚಿತ್ರವೆಂದು ಹೇಳಬಹುದು. ಮಧ್ಯವಯಸ್ಸಿನ ದೃಢಕಾಯದ ಮನುಷ್ಯನ ಭಾವಚಿತ್ರ. ಬೆಳ್ಳಿ ಛಾಯೆಯ ನೆರೆಗೂದಲು, ಮಂಜುಗಣ್ಣಿಗೆ ಕವಚವಾಗಿರುವ ಚಾಳೀಸು, ಉದ್ದನೆಯ ನೆರೆ ಮೀಸೆ, ಮೊಂಡ ಮೂಗು, ತಾಳ ತಪ್ಪಿದ ಕೆಂದುಟಿ ಚಿತ್ರದ ಹಿನ್ನೆಲೆಯಲ್ಲಿ ಕಣ್ಣು ಮುಚ್ಚಿದಾಗ ಮನುಷ್ಯನ ಸ್ಮೃತಿಪಟಲದ ಮೇಲೆ ಹಾಯ್ದುಹೋಗುವ ಮಂದವಾದ ಸಿಹಿಕಹಿ ನೆನಪುಗಳ ಪರದೆಗಳು ಎಂಬಂತೆ ಭಾಸವಾಗುವ ಅಲೆಗಳು ಕೆಲವು ಚೌಕಟ್ಟುಗಳಲ್ಲಿ ಹರಡಿಕೊಂಡಿವೆ. ಚಿತ್ರದ ಕೆಳಭಾಗದಲ್ಲಿ ಕೆಲವು ವೃತ್ತಾಕಾರದ ಅಲೆಗಳು, ಬಹುಶಃ ಕಣ್ಣುಮುಚ್ಚಿದರೆ ಪಟಲದಲ್ಲಿ ಅಮೂರ್ತ ರೀತಿಯಲ್ಲಿ ಚಲಿಸುವ ನಕ್ಷತ್ರಾಕಾರಗಳು ವೈವಿಧ್ಯಮಯ ಬೆಳಕಿನ ಲೋಕವನ್ನು ಸೃಷ್ಟಿಸುತ್ತವೆ. ಸಾಮಾನ್ಯವಾಗಿ ಪ್ರತಿಯೊಬ್ಬ ವ್ಯಕ್ತಿಯು ಕಣ್ಣು ಮುಚ್ಚಿದಾಗ ಆಗುವ ಅನುಭವಗಳೆಂದೇ ಹೇಳಬಹುದು. ಈ ಅನುಭವಕ್ಕೆ ಪೂರಕವಾಗಿ ಹಿರೇಗೌಡರು ನೀಲ-ಹಸಿರಿನ ವಿವಿಧ ಶ್ರೇಣಿಗಳ ವರ್ಣ ಮೇಳವನ್ನು ಸಂಘಟಿಸಿದ್ದಾರೆ. ಆ ವರ್ಣಗಳನ್ನು ಮಸುಕಾದ ತಂತ್ರದೊಂದಿಗೆ ವಿವಿಧ ಆಕೃತಿಗಳಲ್ಲಿ ವಿಭಜಿಸುವ ಕ್ರಮವನ್ನು

೦೪. ಎ.ಬಿ.ಹಿರೇಗೌಡರ ಅಭಿಪ್ರಾಯ



೧೨. ಭಾವಚಿತ್ರ, ೧೯೯೬



೧೩. ಗಾಂಧಿ ಅಂದು-ಇಂದು, ೧೯೯೬

ಅನುಸರಿಸಿದ್ದಾರೆ. ಅವಕಾಶದ ಮಧ್ಯಭಾಗದಲ್ಲಿ ಅಂಚಿನಲ್ಲಿ ಅಸ್ಪಷ್ಟಗೊಂಡ ಚೌಕಾಕಾರದಲ್ಲಿ ಭಾವಚಿತ್ರವನ್ನು ರಚಿಸಿರುವ ಹಿರೇಗೌಡರು ವರ್ಣಗಳ ಮುಖೇನವಾಗಿ ಮೇಲಿನ ಅರ್ಥಸಾಧ್ಯತೆಯನ್ನು ಬಿಂಬಿಸಿದ್ದಾರೆ. ಸಮ್ಮಿಶ್ರ ಮಾದರಿಯ ವರ್ಣ ತಂತ್ರಗಾರಿಕೆ ಈ ಕೃತಿಯಲ್ಲಿನ ಮುಖ್ಯ ಅಂಶ.

**೧೩. ಗಾಂಧಿ ಅಂದು ಇಂದು (೧೯೯೬)**

ಗಾಂಧಿ ಕುರಿತಂತೆ ಅನೇಕ ಕಲಾವಿದರು ಅನೇಕ ರೀತಿಯಲ್ಲಿ ಚಿತ್ರೀಕರಣ ಮಾಡಿದ್ದಾರೆ. ಗಾಂಧಿಯನ್ನು ಮಹಾತ್ಮನನ್ನಾಗಿ ಮಾಡಿದ್ದು ಅವರ ಅಹಿಂಸಾ ಆಂದೋಲನ. ಯಾವುದಕ್ಕಾಗಿ? ತನ್ನ ವೈಯಕ್ತಿಕ ಸ್ವಾರ್ಥಕ್ಕಾಗಿಯೇ? ಅಲ್ಲ. ಆದರೆ ರಾಷ್ಟ್ರವನ್ನು ಬ್ರಿಟೀಷರ ದಾಸ್ಯದಿಂದ ಬಿಡುಗಡೆ ಮಾಡಿ ಭಾರತಕ್ಕೆ ಸ್ವಾತಂತ್ರ್ಯವನ್ನು ತಂದುಕೊಡುವುದೇ ಮೂಲ ಮಂತ್ರವಾಗಿತ್ತು ಎಂಬುದು ಮಸುಕಾದ ಇತಿಹಾಸ ಮಾತ್ರ. ಅಂದಿನ ಸ್ವಾತಂತ್ರ್ಯಾಂದೋಲನದ ಯಶಸ್ಸಿನಿಂದಾಗಿ ನಮಗೆಲ್ಲ ಸ್ವತಂತ್ರ ಭಾರತವನ್ನಾಗಿಸಿತು. ಅದರ ಫಲವಾಗಿ ನಾವಿಂದು ಸರ್ವ ಸ್ವತಂತ್ರರಾಗಿದ್ದೇವೆ. ನಮ್ಮಿಂದ ನಮ್ಮವರು ನಮಗಾಗಿ ಆಳುವ ಪ್ರಜಾತಂತ್ರದಲ್ಲಿ ದೇಶದ ಪ್ರಗತಿಗಾಗಿ ಕಾರ್ಯ ನಿರ್ವಹಿಸುವ ಅವಕಾಶ ಲಭ್ಯವಾಯಿತು. ಆದರೆ ಇಂದು ಆದದ್ದೇನು? ನಡೆಯುತ್ತಿರುವುದೇನು? ನಮಗೆ ಸಿಕ್ಕ ಸ್ವಾತಂತ್ರ್ಯ ಅತಂತ್ರವಾಗಿ ಸ್ವೇಚ್ಛಾಚಾರಕ್ಕಿಳಿದು ಸಮಾಜದಲ್ಲಿ ಜಾತಿ ಜಾತಿಗಳ ಮಧ್ಯೆ ಆಂತರಿಕ ಗಲಭೆಗಳು, ರಾಜ್ಯ ರಾಜ್ಯಗಳ, ಭಾಷೆ ಭಾಷೆಗಳ, ಧರ್ಮ ಧರ್ಮಗಳ ಮಧ್ಯದಲ್ಲಿ ಆಂತರಿಕ ಯುದ್ಧಗಳು ಅನೇಕ ಮುಖವಾಡದಲ್ಲಿ ನಡೆದು ಅಶಾಂತಿ, ದೌರ್ಜನ್ಯ, ಸಾವು-ನೋವುಗಳು ಹಾಗೂ ರಾಜಕೀಯ ಅಸ್ಥಿರತೆಯಿಂದಾಗಿ ಸಾಮಾಜಿಕವಾಗಿ ಅತೃಪ್ತಿಯ ಹೊಗೆ ಸುಳಿದಾಡುತ್ತಿದೆ. ಇದರಿಂದಾಗಿ ಬ್ರಿಟೀಷರ ಕಾಲದಲ್ಲಿ ನಾವು ಸುಖವಾಗಿ ಇದ್ದೆವು ಎಂಬ ಸಾಮಾನ್ಯ ಜನಾಭಿಪ್ರಾಯವಾಗಿದೆ ಎಂಬುದು ಅನೇಕ ತಾತ್ವಿಕ ನೆಲೆಯಲ್ಲಿ ಚಿಂತಿಸುವ ಜನಸಾಮಾನ್ಯರ ಚಿಂತನೆಗಳಾಗಿವೆ. ಒಂದುವೇಳೆ ಮಹಾತ್ಮಾ ಗಾಂಧಿ ಇಂದು ಬದುಕಿದ್ದರೆ ಅವರು ಇಂದಿನ ದೇಶದ ಪರಿಸ್ಥಿತಿಯ ಕುರಿತು ಏನು ಹೇಳುತ್ತಿದ್ದರು ಎಂಬ ಪ್ರಶ್ನೆ ಆಧಾರಿತವಾದ ಕಲಾಕೃತಿ ಇದಾಗಿದೆ.[೫]

ಓರೆಯಾಗಿರುವ ಚೌಕಟ್ಟಿನ ವಿನ್ಯಾಸದಲ್ಲಿ ಗಾಂಧೀಜಿಯವರನ್ನು ಹಸಿರು ವರ್ಣದಿಂದ ಚಿತ್ರಿಸಿದ ಹಿರೇಗೌಡರು, ವಾಸ್ತವ ವರ್ಣಗಾರಿಕೆಗಿಂತ ಭಿನ್ನವಾಗಿ, ಸೂಚ್ಯ ನೆಲೆಯಲ್ಲಿ ಚಿತ್ರಿಸಿದ್ದಾರೆ. ಅದಕ್ಕೆ ಪೂರಕವಾಗಿ ಹಿನ್ನೆಲೆಯಲ್ಲಿ ವಿವಿಧ ಬಗೆಯ ಜ್ಯಾಮಿತಿಕ ಆಕೃತಿಗಳಲ್ಲಿ ಹಳದಿವರ್ಣವನ್ನು ವಿವಿಧ ಶ್ರೇಣಿಗಳಲ್ಲಿ ದುಡಿಸಿಕೊಂಡಿದ್ದಾರೆ. ದಟ್ಟ ಮತ್ತು ತೆಳು ಛಾಯೆಯ ವರ್ಣಗಳು ಹಿನ್ನೆಲೆಯನ್ನು ಸಂಯೋಜಿಸುವ, ಅವುಗಳಲ್ಲಿಯೇ ವಿಭಿನ್ನ ಆಕಾರಗಳನ್ನು ಸೃಷ್ಟಿಸುತ್ತ, ಅವಕಾಶವನ್ನು ಓರೆಯಾಗಿಯೇ ವಿಂಗಡಿಸುವ ವಿನೂತನ ಕ್ರಮವನ್ನು ಹಿರೇಗೌಡರು ಇಲ್ಲಿ ಅನುಸರಿಸಿದ್ದಾರೆ. ಈ ಕಲಾಕೃತಿಯ ಹೂರಣವಾಗಿರುವ ವರ್ಣಗಳ ಸಂಯೋಜನೆ, ಆಕೃತಿಗಳು ಹಿರೇಗೌಡರ ಮೇಲೆ ಸೂಚಿಸಿದ ಆಶಯವನ್ನು ಸಮರ್ಥಿಸುತ್ತವೆ.

೦೫. ಎ.ಬಿ.ಹಿರೇಗೌಡರ ಅಭಿಪ್ರಾಯ



೧೪. ಕರಗುತ್ತಿರುವ ಬಂಡೆಗಳು, ೧೯೯೬



೧೫. ಮಾಗಿದ ಎಲೆ, ೧೯೯೬



೧೬. ಮಂಜಿನ ಹನಿಗಳು, ೧೯೯೭

### ೧೪. ಕರಗುತ್ತಿರುವ ಬಂಡೆ (೧೯೯೬)

ಈ ಕಲಾಕೃತಿಯ ಮುಖ್ಯ ವಸ್ತು ಬೃಹದಾಕಾರದ ಕಲ್ಲು ಬಂಡೆಗಳು ನಂತರ ಬೆಟ್ಟದ ಸರಣಿಗಳಲ್ಲಿ ಆಕಾಶದಲ್ಲಿ ತೇಲುತ್ತಿರುವ ಮಂಜಿನ ಗಡ್ಡೆಗಳು. ಇವುಗಳ ಮಧ್ಯದಲ್ಲಿ ಬಂಡೆಗಳು ಕರಗಿ ಕರಗಿ ಮೋಡಗಳಂತೆ ಪರಿವರ್ತನೆಯಾಗುತ್ತಿವೆ ಎಂಬ ಭ್ರಮೆಯನ್ನು ಸೃಷ್ಟಿಸುತ್ತವೆ. ಈ ಕೃತಿಯು ನಿಜಾತೀತವಾದವನ್ನು ಭ್ರಮಿಸುತ್ತವೆ ಎಂದು ಹೇಳಬಹುದು. ಸುಪ್ರಸಿದ್ಧ ಲೇಖಕರಾದ ದೇವೇಂದ್ರ ಕುಮಾರ ಹಕಾರಿಯವರ ಬರೆದ "ಕೂಗುತಿವೆ ಕಲ್ಲುಗಳು" ಎಂಬ ಪ್ರಬಂಧದ ನೆನಪು ತರುತ್ತಿದೆ. ಅದರಲ್ಲಿ ಅವರು ಹಳೆಬೀಡು ಬೇಲೂರಿನ ಶಿಲ್ಪಗಳನ್ನು ಕಂಡಾಗ ಆದ ಅನುಭವಗಳನ್ನು ತಮ್ಮದೇ ಆದ ರೀತಿಯಲ್ಲಿ ವರ್ಣಿಸಿದ್ದಾರೆ. ಹಾಗೆಯೇ ಹಿರೇಗೌಡರು ಇಲ್ಲಿ ಚಿತ್ರದುರ್ಗದ ಬೆಟ್ಟದಲ್ಲಿ ಗೋಚರಿಸುವ ಬೃಹದಾಕಾರದ ಬಂಡೆಗಳನ್ನು ಮುಸ್ಸಂಜೆಯಲ್ಲಿ ಕಂಡಾಗ ಆದ ಅನುಭವಕ್ಕೆ ವರ್ಣರೂಪ ನೀಡಿ ಬಂಡೆಗಳು ಮಂಜಿನಂತೆ ಕರಗಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡು ರೂಪಾಂತರಗೊಳ್ಳುವ ಭ್ರಮೆಯನ್ನು ಸೃಷ್ಟಿಸುತ್ತಿವೆ. ಈ ಹಿನ್ನೆಲೆಯಲ್ಲಿ ಕೃತಿಯ ಪ್ರಮುಖ ಆಶಯವಾದ ಕಿತ್ತಳೆ ವರ್ಣದ ಬಂಡೆಯಲ್ಲಿ ರಿಯಲಿಸ್ಟಿಕ್ ತಂತ್ರಗಾರಿಕೆಯನ್ನು ಅಳವಡಿಸಿಕೊಂಡಿದ್ದರೂ, ತಮ್ಮದೇ ಆದ ಅನುಭವದ ನೆಲೆಯಲ್ಲಿ ಸೃಜನಾತ್ಮಕ ಸ್ಪರ್ಶ ನೀಡಿದ್ದಾರೆ. ವಾಯುಮಂಡಲದಲ್ಲಿ ಕಾಣುವ ಹಿನ್ನೆಲೆಯ ಬೆಟ್ಟಗಳ ಶ್ರೇಣಿ, ಇಬ್ಬನಿಯಲ್ಲಿ ಬಂಡೆಗಳು ಕರಗಿಹೋಗುತ್ತಿವೆಯೇನೋ ಎಂಬ ಭ್ರಮೆ ನೋಡುಗನಿಗೆ ಉಂಟಾಗುತ್ತದೆ. ಆ ಬಂಡೆಗಳ ಜೊತೆಯಲ್ಲಿ ಲಯವಾಗಿ ರೂಪಗೊಂಡ ವಿವಿಧ ವರ್ಣಗಳ ಆಕೃತಿಗಳು ಆಕಾಶದ ಒಂದು ಭಾಗವಾಗಿಯೇ ಕಾಣಿಸಿಕೊಳ್ಳುತ್ತವೆ. ಅದಕ್ಕೆ ಪೂರಕವಾಗಿ ಅವಕಾಶದ ಕೆಳಭಾಗದಲ್ಲಿ ಲಯಯುಕ್ತವಾದ ಭೂಪಾತಳಿಯನ್ನು ಪದರುಗಳ ರೂಪದಲ್ಲಿ ಚಿತ್ರಿಸಿದ ಹಿರೇಗೌಡರು ಕುಂಚದ ತಂತ್ರದಿಂದ ತನ್ನಿಂದ ತಾನೆ ಹುಟ್ಟಿಕೊಂಡ ರೇಖೆಗಳನ್ನು ಆ ವರ್ಣದ ಭಾಗವಾಗಿಯೇ ರೂಪಿಸಿದ್ದಾರೆ. ಅತ್ಯಂತ ಶುಭ್ರ ವರ್ಣಗಳ ಸಾಂಗತ್ಯದಿಂದ ರಚನೆಗೊಂಡ ಈ ಕಲಾಕೃತಿ ಹಿರೇಗೌಡರನ್ನು ರಮಣೀಯ ನೆಲೆಯಲ್ಲಿ ಕೇಂದ್ರೀಕರಿಸುತ್ತದೆ.

### ೧೫. ಮಾಗಿದ ಎಲೆ (೧೯೯೬)

ಯಾವುದೇ ನೈಸರ್ಗಿಕ ಜೈವಿಕ ವಸ್ತುವಿಗೆ ಹುಟ್ಟು ಬೆಳವಣಿಗೆ ತಾರುಣ್ಯ ಮುಪ್ಪು ಹಾಗೂ ಸಾವು ಎಂಬ ಅವಸ್ಥೆಗಳು ಸರ್ವೇಸಾಮಾನ್ಯ. ಯಾವುದು ಶೀಘ್ರವಾಗಿ ಬೆಳೆಯುತ್ತದೆಯೋ ಅದು ಶೀಘ್ರವಾಗಿ ಸಾವಿನಂಚಿಗೆ ಸರಿಯುತ್ತದೆ. ನಿಸರ್ಗದ ಕೆಲವು ವಸ್ತುಗಳಾದ ಎಲೆ ಹೂವು ಹಣ್ಣುಗಳು ಮಾಗುವ ಅವಸ್ಥೆಗೆ ಬಂದಾಗ ಹಳದಿ, ಕೆಂಪು, ಕೇಸರಿ ಹಾಗೂ ಮಧುರ ಕಂದು ವರ್ಣಗಳಿಗೆ ತಿರುಗಿ ನೋಡುಗನ ಮನಸ್ಸಿಗೆ ಸುಂದರ ಅನುಭವಗಳನ್ನು ಸೃಷ್ಟಿಸುತ್ತವೆ. ಅಂಥ ಒಂದು ಮಧುರ ಅನುಭವವನ್ನು ಈ ಪ್ರಸ್ತುತ "ಮಾಗಿದ ಎಲೆ" ಚಿತ್ರದಲ್ಲಿ ಕಾಣಬಹುದಾಗಿದ್ದು, ಅವೂ ಸಹ ಒಂದು ರೀತಿಯ ಮಾಗಿಯಲ್ಲಿಯೂ ಮಾಧುರ್ಯವನ್ನು ಕೊಡುವ ಹಿನ್ನೆಲೆಯಲ್ಲಿ ರಚನೆಗೊಂಡ ಈ ಕಲಾಕೃತಿಯಲ್ಲಿ ವೇಗೋತ್ಕರ್ಷದಿಂದ ಕೂಡಿದ ವರ್ಣ ಲೇಪಿತ ಕುಂಚದ ಬೀಸುಗಳು ಬಹು

ಸದ್ಬಲವಾಗಿ ಮೂಡಿ ಹಿರೇಗೌಡರ ಆಶಯವನ್ನು ಸ್ಥಿರೀಕರಿಸುತ್ತವೆ. ಕತ್ತಲೆಯಲ್ಲಿ ತೂರಿ ಬಂದ ಬೆಳಕಿನಂತೆ ಭಾಸವಾಗುವ ಇಲ್ಲಿನ ಪ್ರಾಕೃತಿಕ ಆಕೃತಿಗಳು ವಕ್ರೋಕ್ತವಾಗಿ ರಚನೆಗೊಂಡು ಚಲನಶೀಲ ಅನುಭವವನ್ನು ನೀಡುತ್ತವೆ. ಲಂಬವಾಗಿ, ಓರೆಯಾಗಿ ಸಂಯೋಜನೆಗೊಂಡ ಆಕೃತಿಗಳಲ್ಲಿ ಒಮ್ಮೆಗೆ ದಟ್ಟಛಾಯೆಯ ಬೀಸುಗಳು ನುಸುಳಿಬರುವುದರಿಂದ ಈ ಕೃತಿ ವಿಭಿನ್ನ ಬಗೆಯ ಅನುಭವವನ್ನು ನೀಡಬಹುದು. ಬೇರೆ ಬೇರೆ ಅವಸ್ಥೆಗಳಲ್ಲಿ ಕಂಡು ಬರುವ ಎಲೆಗಳ ವರ್ಣಗಾರಿಕೆಯನ್ನು ಅಷ್ಟೇ ಶುಭ್ರವಾಗಿ ಪ್ರಕಟಪಡಿಸಿರುವ ಹಿರೇಗೌಡರು, ವಾಸ್ತವ ರಚನೆಗಳನ್ನು ಆಧುನಿಕವಾಗಿ ಹಾಗೂ ಸೃಜನಾತ್ಮಕವಾಗಿ ದೃಶ್ಯಗಳ ಮೂಲಕ ಪರಿವರ್ತಿಸಿರುವ ಕ್ರಮವನ್ನು ಇಲ್ಲಿ ಕಾಣಬಹುದಾಗಿದೆ.

**೧೬. ಮಂಜಿನ ಹನಿಗಳು (೧೯೯೭)**

ಸಾಮಾನ್ಯವಾಗಿ ನಿಸರ್ಗದಲ್ಲಿ ಸೂರ್ಯೋದಯ, ಸೂರ್ಯಾಸ್ಥ ವೇಳೆಯಲ್ಲಿ ಇಲ್ಲವೇ ವಸಂತ ಋತುವಿನಲ್ಲಿ ಪ್ರಕೃತಿಯನ್ನು ಸೂಕ್ಷ್ಮವಾಗಿ ಗಮನಿಸಿದರೆ, ಎಲೆಯ ಮೇಲೆ, ಹೂವಿನ ಮೇಲೆ, ಇಲ್ಲವೇ ಜೇಡರ ಬಲೆಯ ಮೇಲೆ ಸೂಕ್ಷ್ಮವಾದ ಮಂಜಿನ ಹನಿಗಳು ಮುತ್ತನ್ನು ಪೋಣಿಸಿದ ಹಾಗೆ ಇಲ್ಲವೆ ಮುತ್ತುಗಳು ಜಾರಿ ಬೀಳುವ ಹಾಗೆ ತುಂತುರು ಹನಿಗಳು ಸೂರ್ಯನ ಕಿರಣಕ್ಕೆ ಮುತ್ತು ಕೊಡುವ ಅನುಭವವನ್ನು ನೀಡುತ್ತವೆ. ಅಂಥ ಕೆಲವು ಸನ್ನಿವೇಶಗಳನ್ನು ಇಲ್ಲಿ ಆಯ್ದು ಎಲೆ, ಹೂವು, ಮಂಜಿನ ಹನಿಗಳ ಪ್ರಯೋಗ[೬] ಮಾಡಿರುವ ಹಿನ್ನೆಲೆಯಲ್ಲಿ ಮಧುರವಾದ ಕಂದು ಬಣ್ಣಗಳ ಸಮ್ಮಿಶ್ರಣವು ಚಿತ್ರಕ್ಕೆ ಹೆಚ್ಚಿನ ಸೊಬಗನ್ನು ನೀಡುತ್ತದೆ. ಇದಕ್ಕೆ ಪೂರಕವಾಗಿ ಆಕೃತಿಗಳಲ್ಲಿ ಎರಡು ಬಗೆಯಲ್ಲಿ ದುಡಿಸಿಕೊಳ್ಳಲಾಗಿದೆ. ಹಿನ್ನೆಲೆಯಲ್ಲಿ ಉದ್ದಗಲಕ್ಕೆ ಚಾಚಿಕೊಂಡಿರುವ ಜ್ಯಾಮಿತಿಕ ಆಕೃತಿಗಳಲ್ಲಿ ವೃತ್ತಾಕಾರವಾಗಿ ರಚನೆಗೊಂಡ ಮಂಜಿನ ಹನಿಗಳ ರೂಪಾರ್ಥಗಳು ಪಾರದರ್ಶಕವಾಗಿ ರೂಪುಗೊಂಡಿವೆ. ಸ್ಥಿರವಾಗಿ ಎಲೆಗಳ ಮೇಲೆ ಇದ್ದಂತೆ, ಎಲೆಗಳಿಂದ ಜಾರಿ ಬೀಳುತ್ತಿರುವಂತೆ ಭಾಸವಾಗುವ ಹಾಗೆ ಹನಿಗಳಿಗೆ ರೂಪು ನೀಡಲಾಗಿದೆ. ಆ ಹನಿಗಳಿಗೆ ವಾಸ್ತವದಲ್ಲಿ ಕಂಡ ನೆರಳು–ಬೆಳಕಿನ ಛಾಯೆಗಳ ಸ್ಪರ್ಶವನ್ನು ಸಹ ನೀಡಲಾಗಿದೆ. ಕ್ಯೂಬಿಸ್ಟ ಶೈಲಿಯ ಕೃತಿಗಳನ್ನೇ ಬಹುವಾಗಿ ರಚಿಸಿರುವ ಹಿರೇಗೌಡರು ಕೂಬಿಸ್ಟನಲ್ಲಿ ವೃತ್ತಾಕಾರದ ವಿನ್ಯಾಸಗಳನ್ನು ಸಮ್ಮಿಶ್ರಗೊಳಿಸಿದ ಬಗೆ ಇಲ್ಲಿದೆ. ಅವಕಾಶದೊಳಗೆ ಮಾತ್ರ ಗೋಚರವಾಗುವ ಹನಿಗಳ ಆಕೃತಿಗಳು, ಅವಕಾಶದ ಹೊರಗಡೆಯಿಂದ ಒಳಪ್ರವೇಶಿಸುವ, ಒಳಗಡೆಯಿಂದ ಹೊರಕ್ಕೆ ಚಲಿಸುವಂತಹ ಜ್ಯಾಮಿತಿಕ ಆಕೃತಿಗಳು ಹಿನ್ನೆಲೆಯಲ್ಲಿ ರಚನೆಗೊಂಡಿವೆ. ಬಹು ಅಲ್ಪ ವರ್ಣಗಳಲ್ಲಿ, ಬಹು ಬಗೆಯ ಪ್ರಾಕೃತಿಕ ವಿನ್ಯಾಸಗಳನ್ನು ವಾಸ್ತವಾತೀತವಾಗಿ ದುಡಿಸಿಕೊಂಡಿರುವ ಕ್ರಮವನ್ನು ಇಲ್ಲಿ ಕಂಡುಕೊಳ್ಳಬಹುದು.

**೧೭. ಏಕದಂತ (೧೯೯೭)**

ಗಣಪತಿಗೆ ಅನೇಕ ಹೆಸರುಗಳಿಂದ ಕರೆಯುತ್ತಾರೆ. ಉದಾ: ವಿಘ್ನೇಶ್ವರ, ಪಾರ್ವತಿ ಸುತ ಗಣನಾಯಕ, ಜಾಂಬವ, ಮಹಾಗಣೇಶ, ಗಜಾನನ, ವಿಘ್ನನಾಶಕ, ಹೇರಂಬ ಎಂದೆಲ್ಲ ಪುರಾಣ

೦೬. ವಿ.ಬಿ.ಹಿರೇಗೌಡರ ಅಭಿಪ್ರಾಯ



೧೭. ಏಕದಂತ, ೧೯೯೭



೧೮. ದಟ್ಟ ಕಾಡು, ೧೯೯೭



೧೯. ಭೂಕಂಪ, ೧೯೯೭

ಮಣ್ಯ ಕಥೆಗಳಿಂದ, ತಿಳಿದುಬರುತ್ತದೆ. ಇಲ್ಲಿ ಏಕದಂತ ಎಂಬ ಕಲಾಕೃತಿ ಕೇವಲ ಗಣಪತಿಯ ಮೂಲ ಆಕೃತಿಯನ್ನೇ ಒಂದು ವಿಶೇಷ ರೂಪದಲ್ಲಿ ಚಿತ್ರಿಸಲಾಗಿದೆ. ಹಾಗೂ ಪಂಚಮುಖಿ ನಾಗರ, ಕೈಯಲ್ಲಿ ಹಿಡಿದಿರುವ ಶಂಕು ತಲೆಯ ಮೇಲೆ ಕೂತಿರುವ ಮೂಷಕ ಇವೆಲ್ಲವೂ ಒಂದು ರೀತಿಯ ನವ್ಯ ಶೈಲಿಯಲ್ಲಿ ಬಳಕೆ ಮಾಡಿರುವ ವಿಧಾನ, ಹಾಗೂ ಒಟ್ಟಾರೆ ಚಿತ್ರದಲ್ಲಿ ಒಡ ಮೂಡಿರುವ ರೇಖಾ ತಂತ್ರಗಾರಿಕೆ ಇತ್ಯಾದಿ ಗುಣಲಕ್ಷಣಗಳು ಒಡಮೂಡಿದೆ. ಡ್ರೈ ಬ್ರಶ್ ತಂತ್ರಗಾರಿಕೆಯನ್ನು ದುಡಿಸಿಕೊಂಡು ಗಣಪನ ಆಕೃತಿಯನ್ನು ಪ್ರಧಾನವಾಗಿ ರಚಿಸಿಲಾದ ಈ ಕೃತಿಯಲ್ಲಿ ವಿರೋಧಾಭಾಸದ ವರ್ಣಗಾರಿಕೆ ಇದೆ. ವಿವರಿಸಿ ಹೇಳುವುದಾದರೆ ಕ್ಯೂಬಿಸ್ಟ ನೆಲೆಯಲ್ಲಿ ರಚನೆಗೊಂಡ ಈ ಕೃತಿಯಲ್ಲಿ ನೀಲಿ ಮತ್ತು ತೆಳು ಕೆಂಪು ವರ್ಣಗಳೇ ಪ್ರಧಾನವಾಗಿದ್ದು, ವಾಸ್ತವವಾಗಿ ಇವೆರಡೂ ಪರಸ್ಪರ ವಿರೋಧಿ ವರ್ಣಗಳಾಗಿದ್ದರೂ ಆಧುನಿಕವಾಗಿ ನೆಲೆಯಲ್ಲಿ ಹೇಗೆ ದುಡಿಸಿಕೊಳ್ಳಬಹುದು ಎಂಬುದಕ್ಕೆ ಈ ಕೃತಿ ಸೂಕ್ತ ನಿದರ್ಶನವಾಗುತ್ತದೆ. ಗಣಪನ ಕೈ-ಕಾಲುಗಳು ಹಾಗೂ ಮುಖವನ್ನು ರೂಪಿಸಿದರೆ, ನೀಲಿ ವರ್ಣ ಅವನ ಹೊಟ್ಟೆಯನ್ನು ರೂಪಿಸಿದೆ. ಜ್ಯಾಮಿತಿಕವಾದ ಆಕೃತಿಗಳು ಗಣಪನನ್ನು ಸೃಷ್ಟಿಸಿದ್ದರೆ, ಅದರ ಭಾಗವಾಗಿ ವೃತ್ತಾಕಾರದ ಆಕೃತಿಗಳನ್ನು ಸಹ ದ್ವಿತೀಯ ನೆಲೆಯಲ್ಲಿ ಇಲ್ಲಿ ಸಂಯೋಜಿಸಲಾಗಿದೆ. ಒಂದು ಬಗೆಯಲ್ಲಿ ಚಲನಾತ್ಮಕವಾಗಿರುವ ಗಣಪ ಪಾರದರ್ಶಕ ತಂತ್ರದಿಂದ ರಚಿತಗೊಂಡಿದ್ದು, ತೈಲ ವರ್ಣದ ಇತರ ಸಾಧ್ಯತೆಗಳನ್ನು ಹಿರೇಗೌಡರು ಅನ್ವೇಷಿಸಿರುವುದಕ್ಕೆ ಈ ಕೃತಿ ಒಂದು ನಿದರ್ಶನವಾಗಬಹುದು.

**೧೮. ದಟ್ಟಕಾಡು** (೧೯೯೭)

ವೃಕ್ಷವೃಂದ ಉಬ್ಬು ಮೈವಳಿಕೆಯಲ್ಲಿ ನಿರ್ಮಾಣಗೊಂಡಿದೆ. ರಾತ್ರಿ ವೇಳೆಯಲ್ಲಿ ಅರಣ್ಯ ಪ್ರದೇಶ ಗಮನಿಸಿದರೆ ಮುಂಭಾಗದ ಕೆಲವೇ ಗಿಡಗಳ ಮೇಲೆ ಬಿದ್ದಿರುವ ಬೆಳಕಿನ ಪ್ರಭಾವ ಎಷ್ಟರ ಮಟ್ಟಿಗೆ ಗಾಢವಾಗಿರುತ್ತದೆ. ಅದರಿಂದ ಸೃಷ್ಟಿಯಾಗುವ ನೀರವತೆ, ಭಯಾನಕತೆ ಹೆಚ್ಚು ಕಣ್ಣನ್ನು ಸೆರೆ ಹಿಡಿಯುತ್ತದೆ. ಹಾಗೂ ಭೂಪಾತಳಿಯಲ್ಲಿ ಕಾಣುವ ತರಗೆಲೆಗಳ ಸಮೂಹ ಒಂದು ರೀತಿಯ ಅರಣ್ಯದ ಕರಾಳ ರೋಧನೆಯ ಅನುಭವ ಸೃಷ್ಟಿಸುವಲ್ಲಿ ಈ ಚಿತ್ರ ವಿಭಿನ್ನವಾದ ಈ ಕೃತಿಯಲ್ಲಿ ಗಿಡಮರಗಳನ್ನು ಫೆವಿಕಾಲ್‌ನ್ನು ಅವಕಾಶದ ಮೇಲಿನಿಂದ ಹರಿಯಬಿಟ್ಟಾಗ ಮರಗಳ ವಿನ್ಯಾಸದಂತೆ ಗೋಚರವಾಗಿದೆ. ಅದು ಒಣಗಿದ ನಂತರ ವರ್ಣದಿಂದ ಮರಗಳ ಕೊಂಬೆಗಳನ್ನು ತರಗೆಲೆಗಳನ್ನು ಚಿತ್ರಿಸಲಾಗಿದೆ. ಹೀಗಾಗಿ ಇದು ಉಬ್ಬುಶಿಲ್ಪದ ಅನುಭವವನ್ನು ನೀಡುತ್ತದೆ. ಮರಗಳನ್ನು ಶುಭ್ರ ಛಾಯೆಯಿಂದ ಚಿತ್ರಿಸಿರುವ ಪರಿಣಾಮದಿಂದ ಕತ್ತಲೆಯಲ್ಲಿ ಪ್ರಖರ ಬೆಳಕಿನ ಕಿರಣಗಳು ಮರಗಳ ಮೇಲೆ ಬಿದ್ದು ಪ್ರಖರವಾಗಿ ಕಾಣುವ ಅನುಭವಕ್ಕೆ ನಿಲುಕುತ್ತದೆ. ಅವಕಾಶದ ಅರ್ಧಭಾಗದಲ್ಲಿ ಮರಗಳನ್ನು, ಇನ್ನರ್ಧ ಭಾಗದಲ್ಲಿ ಭೂಪಾತಳಿಯನ್ನು ಚಿತ್ರಿಸಿರುವ ಹಿರೇಗೌಡರು ಭೂ ಪಾತಳಿಯಲ್ಲಿ ಕೆಂಪು, ಕಡು ಕಪ್ಪು ವರ್ಣಗಳಿಂದ ತರಗೆಲೆಗಳ ರೂಪಾರ್ಥದಲ್ಲಿ ವಿನ್ಯಾಸಗೊಳಿಸಿದ್ದಾರೆ. ಇಲ್ಲಿ ಪ್ರಮುಖವಾಗಿ ಎರಡು (ದಟ್ಟತೆ ಮತ್ತು ಬೆಳಕು) ಛಾಯೆಗಳು ಗೋಚರವಾಗುವುದರಿಂದ ಹಿರೇಗೌಡರ ಮೇಲಿನ ಸೂಚಿತ ಆಶಯವನ್ನು ಈಡೇರಿಸುತ್ತದೆಯಲ್ಲದೇ ನೋಡುಗನಿಗೂ ಸಹ ಅದೇ ಬಗೆಯ ಅನುಭವವನ್ನು ನೀಡುತ್ತದೆ.

## ೧೯. ಭೂಕಂಪ (೧೯೯೭)

ಈ ಚಿತ್ರದಲ್ಲಿ ಭೂಕಂಪದಿಂದಾದ ಸಾವು–ನೋವು, ನಷ್ಟ, ಹಾಹಾಕಾರ, ಆಕ್ರಂದನ, ಭಯಾನಕತೆ ಇದಾವುದೂ ಇಲ್ಲಿ ಸ್ಪಷ್ಟವಾಗಿ ಗೋಚರಿಸುವದಿಲ್ಲ ಹಾಗೂ ಅದೆಲ್ಲವನ್ನೂ ಅಭಿವ್ಯಕ್ತಿಸುವ ಚಪಲತೆಯೂ ಈ ಚಿತ್ರದ ಉದ್ದೇಶವಾಗಿಲ್ಲ. ಆದರೆ ಭೂಕಂಪನದಿಂದಾಗಿ ಅಲ್ಲಿ ಕಾಣಸಿಗುವ ನಿಗೂಢ ಮೌನ, ನಿಶ್ಶಬ್ಧ, ನಿರ್ಜನ ವಾತಾವರಣದ ಹಿಂದೆ ಮನಸ್ಸಿಗೆ ಅಪ್ಪಳಿಸುವ ಆಘಾತ ಹಾಗೂ ಅಗೋಚರವಾಗಿ ಮಡುಗಟ್ಟಿ ಪ್ರಜ್ವಲಿಸುವ ನಿರ್ವಿಕಾರ, ನೋವು ಇವೆಲ್ಲವೂ ಚಿತ್ರದಲ್ಲಿ ಮೂಡಿ ಬಂದ ಕಡುಗಂದು, ಹಾಗೂ ನಿಸ್ಸತ್ವಯುತವಾದ ಕಿತ್ತಳೆ ಹಾಗೂ ಹಳದಿ ವರ್ಣಗಳು ಪ್ರಕ್ಷುಬ್ಧತೆಯನ್ನು ಪ್ರತಿನಿಧಿಸುತ್ತವೆ. ಈ ಚಿತ್ರ ರಮಣೀಯ ನೆಲೆಯಲ್ಲಿ ರಚನೆಗೊಂಡಿದ್ದರೂ, ರಮಣೀಯ ಉದ್ದೇಶವನ್ನು ಹೊಂದಿಲ್ಲವೆಂದು ಮೇಲಿನ ಅರ್ಥಸಾಧ್ಯತೆಯಿಂದ ಹೇಳಬಹುದು. ಒಂದು ಬಗೆಯಲ್ಲಿ ಅಮೂರ್ತ ಚಿತ್ರವಾಗಿ ಸ್ಥಾನ ಪಡೆಯುವ ಈ ಕೃತಿ ಅವಕಾಶದ ಕೆಳ ಮೂಲೆಯಿಂದ ದಟ್ಟವಾಗಿ ಕಂಡರೆ, ಕ್ರಮೇಣವಾಗಿ ಮೇಲ್ಭಾಗದಲ್ಲಿ ತೆಳುವರ್ಣ ಛಾಯೆಯನ್ನು ಹೊತ್ತುಕೊಂಡು ಜ್ಯಾಮಿತಿಕವಾಗಿ ಗೋಚರವಾಗುವ ತಂತ್ರಾನುಭವ ನೀಡುತ್ತದೆ. ಓರೆ ಕೋರೆಯಾಗಿ ರೂಪುಗೊಂಡ ಜ್ಯಾಮಿತಿಕ ಆಕಾರಗಳು ಭೂಕಂಪನದ ಅವಶೇಷಗಳ ರೂಪಾರ್ಥವನ್ನು ಪ್ರತಿನಿಧಿಸುತ್ತವೆ. ವರ್ಣಗಳನ್ನು ಶುಭ್ರಯುಕ್ತವಾಗಿ ದುಡಿಸಿಕೊಂಡ ಹಿರೇಗೌಡರು ಭೂಕಂಪನ ಪ್ರದೇಶವನ್ನು ಪಕ್ಷಿನೋಟದಿಂದ ಕಂಡುಬಂದು ರೂಪಾಂಶಗಳನ್ನು ಸೃಜನಾತ್ಮಕವಾಗಿ ರೂಪಾಂತರಿಸಿದ ಪ್ರಯೋಗಕ್ಕೆ ಒಳಗಾದ ಒಂದು ಉತ್ತಮ ಕಲಾಕೃತಿ ಇದು.

## ೨೦. ಬೆಳದಿಂಗಳ ಬಾಲೆ (೧೯೯೮)

ಈ ಚಿತ್ರ ಏನನ್ನು ಹೇಳುತ್ತದೆ ಎನ್ನುವದಕ್ಕಿಂತ ಏನನ್ನು ಹೇಳುವುದಿಲ್ಲ? ಎಂದು ಕೇಳುವುದು ಹೆಚ್ಚು ಸೂಕ್ತವೆಂದು ಹೇಳಬಹುದು. ಕಾರಣ ಇಲ್ಲಿ ರಚಿತಗೊಂಡ ಮಾನವಾಕೃತಿ ಅಮೂರ್ತ, ಚೆಲ್ಲಿದ ಬೆಳಕು ಮತ್ತು ಕತ್ತಲೆ ಇದೆ ಎಂದರೆ ಇದೆ. ಇಲ್ಲವೆಂದರೆ ಇಲ್ಲ.[೭] ಯಾಕೆಂದರೆ ಬೆಳದಿಂಗಳು ಎನ್ನುವ ಬೆಳ್ಳಿಯ ಬೆಳಕಿಗೆ ಸ್ಪಷ್ಟತೆಯನ್ನು ಕೊಡುವ ಶಕ್ತಿ ನೂರಕ್ಕೆ ತೊಂಬತ್ತೊಂಬತ್ತರಷ್ಟು ಇರುವುದಿಲ್ಲ ಇದೊಂದು ಅಮೂರ್ತತೆಯ ಕಣಜವೆಂದು ಹೇಳಿದರೆ ತಪ್ಪಾಗಲಾರದು ಆದ್ದರಿಂದ ಬೆಳದಿಂಗಳದಲ್ಲಾಗುವ ಅನುಭವಗಳು ಕನಸಿನಲ್ಲಿ ಸಿಗುವಷ್ಟೇ ಶುಭ್ರಯುಕ್ತ ಸತ್ಯ. ಈ ಹಿನ್ನೆಲೆಯಲ್ಲಿ ಅವಕಾಶದ ಉದ್ದಗಲಕ್ಕೂ ಓರೆಕೋರೆಯಾಗಿ ಹರಡಿದ ಲಂಬ, ವಕ್ರ ಆಕೃತಿಗಳು ವರ್ಣಗಳ ಪಾರದರ್ಶಕದಿಂದ ರಚಿತಗೊಂಡಿವೆ. ಅವಕಾಶದ ಅಂಚಿನಲ್ಲಿ ಅಲ್ಲಲ್ಲಿ ದಟ್ಟತೆಯನ್ನು ತೋರ್ಪಡಿಸಿ ಮಧ್ಯಭಾಗದಲ್ಲಿ ಶುಭ್ರ ವರ್ಣಗಳ ಸಾಂಗತ್ಯದಿಂದ ಪ್ರಜ್ವಲಿಸುವ ಬೆಳಕಿನ ಛಾಯೆಗಳು ಕೃತಿಯ ಕೇಂದ್ರೀಕೃತ ಆಶಯವಾಗಿವೆ. ಈ ಒಂದು ಕೃತಿಯಲ್ಲಿ ಮೇಲೊಂದು ಕೆಳಗೊಂದು ಕಲಾಕೃತಿ ರಚನೆಗೊಂಡಂತೆ ಭಾಸವಾಗಲು ಅವಕಾಶದ ಮಧ್ಯೆ ಅಸ್ಪಷ್ಟವಾಗಿ ಮೂಡಿದ ಬೀಸು ಕಾರಣವಾಗುತ್ತದೆ. ಆದರೆ ಎಡಭಾಗದಲ್ಲಿ ಅದು ಮಸುಕಾಗಿರುವುದರಿಂದ ಎರಡೂ ಭಾಗಗಳಿಗೆ ಪುನರ್ ಸಂಪರ್ಕ ಕಲ್ಪಿಸುವ ಭಾವವನ್ನು ತಂದುಕೊಡುತ್ತದೆ. ಮೂರ್ತ ಅನುಭವವನ್ನು ನೀಡದ ಈ ಕೃತಿ ಒಂದು

೦೭. ವಿ.ಬಿ.ಹಿರೇಗೌಡರ ಅಭಿಪ್ರಾಯ



೨೦. ಬೆಳದಿಂಗಳ ಬಾಲೆ, ೧೯೯೮



೨೧. ತಾಯಿ ಮತ್ತು ಮಗು, ೧೯೯೮

ಬಗೆಯಲ್ಲಿ ಚಲನಾತ್ಮಕವಾದ ಅಮೂರ್ತ ಅನುಭವವನ್ನು ನೀಡಿ ಪ್ರಶ್ನಾರ್ಥಕವಾದ ಗ್ರಹಿಕೆಗೆ ಒಳಗಾಗುತ್ತದೆ.

**೨೧. ತಾಯಿ ಮತ್ತು ಮಗು (೧೯೯೮)**

ತಾಯಿ ಮಗುವಿನ ಮಧ್ಯದಲ್ಲಿರುವದು ಒಂದೇ ಹೃದಯದ ಎರಡು ಬಡಿತಗಳು ಮತ್ತು ಅವೆರಡೂ ಹೃದಯದ ಬಡಿತ ತಾಯಿ ಮತ್ತು ಮಗುವಿನ ಮಧ್ಯದ ಪ್ರೀತಿಯ ಮಿಡಿತ. ಏಕೆಂದರೆ ತಾಯಿ ಮಗುವಿಗೆ ಅಮೂರ್ತವಾದ ಅಭಿವ್ಯಕ್ತಿ. ಆದರೆ ತಾಯಿಗೆ ಮಗುವಿನ ಮುಗ್ಧತೆ, ಪ್ರೀತಿಯ ಸಾಕ್ಷಾತ್ಕಾರವನ್ನು ನೀಡುತ್ತದೆ. ತಾಯಿ ಮಗುವಿಗೆ ಆಟಿಕೆಯ ಸಾಮಗ್ರಿ ಒದಗಿಸುತ್ತಾಳೆ. ಆದರೆ ಅದನ್ನು ನೋಡಿ ಸಂತೋಷಪಡಲೂಬಹುದು ಇಲ್ಲವೆ ಅದನ್ನು ಮುಟ್ಟದೆ ಅಳಲೂಬಹುದು. ಆದರೆ ತಾಯಿ ಅವೆರಡನ್ನೂ ಪ್ರೀತಿಯ ಸಾಗರವಾಗಿ ಅನುಭವಿಸುತ್ತಾಳೆ. ಆದ್ದರಿಂದ ಮಗುವಿನ ಅಳು ಮತ್ತು ನಗು ಇವೆರಡೂ ಸಮಾನವಾದ ಅಪಾರ ಖುಷಿಯನ್ನು ತಾಯಿಗೆ ನೀಡುತ್ತವೆ. ಇದು ತಾಯಿಯಲ್ಲಿರುವ ಅಗಮ್ಯವಾದ ಸಹನ ಶೀಲತೆಯನ್ನು ಎತ್ತಿ ತೋರಿಸುತ್ತದೆ. ಆದ್ದರಿಂದ ತಾಯಿಯನ್ನು ಸಹನಾಮೂರ್ತಿಯನ್ನಾಗಿ ಅಭಿವ್ಯಕ್ತಿಸುವ ಹಿರೇಗೌಡರ ಪರಿ ಇಲ್ಲಿದೆ. ಅವಕಾಶದ ಮಧ್ಯಭಾಗದಲ್ಲಿ ಓರೆಯಾಗಿ ಒಂದು ಅಸ್ಪಷ್ಟ ಪಟ್ಟಿಕೆಯಲ್ಲಿ ರೂಪುಗೊಂಡ ತಾಯಿ ಮತ್ತು ಮಗುವಿನ ಆಕೃತಿಗಳು ಕ್ಯೂಬಿಸ್ಟ ಮತ್ತು ವಕ್ರಾಕಾರದ ಸಮ್ಮಿಶ್ರಣದ ನೆಲೆಯಲ್ಲಿ ರೂಪುಗೊಂಡಿವೆ. ನೀಳಕಾಯದ ಶರೀರವನ್ನು ಎರಡೂ ಆಕೃತಿಗಳಲ್ಲಿ ಕಾಣಬಹುದಾಗಿದ್ದು, ಮಸುಕಾದ ವರ್ಣ ನಿರ್ವಹಣೆಯಿಂದ ಈ ಕಲಾಕೃತಿ ವಿಶಿಷ್ಟ ಅನುಭಕ್ಕೆ ನಿಲುಕುತ್ತದೆ. ಡ್ರೈ ಬ್ರಶ್ ತಂತ್ರವು ಆಕೃತಿಗಳ ಎಡಬಲದಲ್ಲಿ ಚಲಿಸುವ ವಿಧಾನದಿಂದ ಅಂಚಿನಲ್ಲಿ ವರ್ಣ ಸ್ಥಿರಗೊಂಡು ದಟ್ಟ ರೇಖೆ ಸೃಷ್ಟಿಯಾಗುತ್ತದೆ. ಅಂತಹ ತಂತ್ರದಿಂದ ಇಲ್ಲಿನ ಆಕೃತಿಗಳನ್ನು ರಚಿಸಲಾಗಿದೆ. ಹಿನ್ನಲೆಯಲ್ಲಿ ಪಾರದರ್ಶಕ ತಂತ್ರದಿಂದ ವಿವಿಧ ಬಗೆಯ ಆಕೃತಿಗಳನ್ನು ಮಸುಕಾಗಿ ಚಿತ್ರಿಸಿದ್ದು ಅವೂ ಸಹ ಪ್ರಧಾನ ಆಕೃತಿಗೆ ಅಂತರಿಕ ಬೆಂಬಲವನ್ನು ನೀಡುತ್ತವೆ. ಅವಕಾಶದ ಕೆಲಭಾಗದಲ್ಲಿ ಜ್ಯಾಮಿತಿಕ ಆಕೃತಿಗಳು ಒಂದರ ಮೇಲೊಂದರಂತೆ ರಚನೆಗೊಂಡಿದ್ದು ವಿಶಿಷ್ಟ ಅನುಭವವನ್ನು ನೀಡುತ್ತವೆ. ಕಲಾಕೃತಿಯ ಉದ್ದೇಶಕ್ಕೆ ಪೂರಕವಾದ ವರ್ಣಗಳ ಸಾಂಗತ್ಯದಿಂದ ಭಾವತೀವ್ರತೆಯ ಅನುಭವ ದಕ್ಕಿದರೆ, ಅವಕಾಶವನ್ನು ವಿಂಗಡಿಸಿ ದುಡಿಸಿಕೊಂಡ ಬಗೆಯನ್ನು ಈ ಕೃತಿಯಲ್ಲಿ ಕಾಣಬಹುದು.

**೨೨. ಮತ್ಸ್ಯ ಸರಣಿ ಚಿತ್ರಗಳು (೧೯೯೮)**

ಇಲ್ಲಿ ಮತ್ಸ್ಯಗಳ ವಿವಿಧ ಆಕಾರದ ಮೂರ್ತ ಮತ್ತು ಅಮೂರ್ತ ವಿಧಾನದ ಚಿತ್ರಗಳಿವೆ. ಇವುಗಳಿಗೆ ವೈವಿಧ್ಯಮಯ ವರ್ಣ ಸಂಯೋಜನೆ ಮಾಡಲಾಗಿದೆ. ಕೆಲವು ಉಷ್ಣ ವರ್ಣವಲಯಕ್ಕೆ ಒಳಪಟ್ಟಿವೆ. ಅದರಂತೆ ಮತ್ಸ್ಯ ಪ್ರಪಂಚದಲ್ಲಿ ಅವುಗಳ ಗಾತ್ರ, ವಿನ್ಯಾಸ, (ಆಕಾರ) ವರ್ಣ, ಮೈವಳಿಕೆ ಇತ್ಯಾದಿಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಅವೆಲ್ಲವೂ ವೈವಿಧ್ಯಮಯವಾದ ಪ್ರಪಂಚವನ್ನೇ ತೆರೆದಿಡುತ್ತವೆ. ಅಂಥ ಒಂದು ವೈವಿಧ್ಯಮಯ ಪ್ರಯತ್ನ ಈ ಚಿತ್ರದ ಉದ್ದೇಶವಾಗಿದ್ದು ನಾಲ್ಕೂ ಚಿತ್ರಗಳಲ್ಲಿ ಕ



ಅ.



ಬ.



ಕ.



ಡ.

೨೨. ಮತ್ಸ್ಯ, ಸರಣಿ ಚಿತ್ರಗಳು
೧೯೯೮



೨೩. ದುಃಖಿಗಳು, ೧೯೭೮



೨೪. ಮುಂಗಾರು ಮೋಡಗಳು, ೧೯೭೮



೨೫. ಪ್ರಿಯ ಪುಷ್ಪ, ೧೯೭೮

ಚಿತ್ರವೊಂದನ್ನು ಹೊರತುಪಡಿಸಿದರೆ ಇನ್ನುಳಿದ ಮೂರೂ ಚಿತ್ರಗಳಲ್ಲಿ ಆಕಾರಗಳ ರಚನೆಗಳು ಒಂದೇ ಶೈಲಿಯಲ್ಲಿ ನಿರೂಪಿತಗೊಂಡಿವೆ. ಅ ಚಿತ್ರದಲ್ಲಿ ದೊಡ್ಡ ಮತ್ತು ಚಿಕ್ಕ ಮೀನಿನ ಆಕೃತಿಗಳು ರಮಣೀಯ ವರ್ಣಗಳ ಮೇಳಗಳಿಂದ ಒಡಮೂಡಿದರೆ, ಬ ಚಿತ್ರದಲ್ಲಿ ಅವು ಒಂದು ಬಗೆಯಲ್ಲಿ ಅಮೂರ್ತ ರೂಪದಲ್ಲಿ ಮೂಡಿದರೂ ಮತ್ಸ್ಯ ಆಕಾರವನ್ನೇ ಹೊಂದಿವೆ. ಡ ಚಿತ್ರದಲ್ಲೂ ಸಹ ಮೀನುಗಳು ಅಮೂರ್ತ ಬಗೆಯಲ್ಲಿ ರಚನೆಗೊಂಡರೂ ಅವುಗಳ ಶರೀರದ ಲಯದಿಂದ ಆಕರ್ಷಕವೆನಿಸುತ್ತವೆ. ಚಿತ್ರ ಕ ದಲ್ಲಿ ಇತರ ಮೂರು ಚಿತ್ರಗಳಿಗಿಂತ ವಿಭಿನ್ನವಾಗಿ, ಅಂದರೆ ಕ್ಯೂಬಿಸ್ಟ ಮತ್ತು ವಕ್ರತೆಯ ನೆಲೆಯಲ್ಲಿ ಪ್ರಖರವರ್ಣಗಳಿಂದ ರೂಪಾಂತರಗೊಂಡಿವೆ. ಅದಕ್ಕೆ ಹಿನ್ನೆಲೆಯಲ್ಲಿ ದಟ್ಟ ಛಾಯೆಯ ಚಪ್ಪಟೆಯಾದ ಲೇಪನದಿಂದ ಇಲ್ಲಿನ ಆಕೃತಿಗಳು ಸ್ಪಷ್ಟವಾಗುತ್ತವೆ. ಚಿತ್ರ ಬ ಮತ್ತು ಡ ಗಳಲ್ಲಿ ಒಂದೇ ಬಗೆಯ ಸಂಯೋಜನಾ ಕ್ರಮವನ್ನು ಅನುಸರಿಸಿದರೆ, ಚಿತ್ರ ಅ ಮತ್ತು ಕ ವಿಭಿನ್ನವಾಗಿ ಸಂಯೋಜನೆಗೊಂಡಿದ್ದು, ಸಾಮಾನ್ಯ ನೋಡುಗನಿಗೂ ಈ ಸಂಯೋಜನೆಗಳ ವ್ಯತ್ಯಸ್ಥ ಪರಿಣಾಮಗಳು ಗ್ರಹಿಸುವುದರಲ್ಲಿ ಎರಡು ಮಾತಿಲ್ಲ. ನಾಲ್ಕೂ ಚಿತ್ರಗಳಲ್ಲಿ ಹಿರೇಗೌಡರು ಬಹುತೇಕವಾಗಿ ಪ್ರಾಥಮಿಕ ವರ್ಣಗಳ ಸಾಂಗತ್ಯದಿಂದ ಚಿತ್ರಿಸಿದ್ದರೂ ಆಕೃತಿಗಳ ಸಾಂದರ್ಭಿಕ ನಿಲುವುಗಳಿಗೆ ಪೂರಕವಾಗಿ ವಿವಿಧ ಶ್ರೇಣೀಕೃತ ವರ್ಣಗಳನ್ನು ರೂಪಾಂತರಿಸುವ ತಂತ್ರವನ್ನು ಅನುಸರಿಸಿದ್ದಾರೆ. ಮತ್ಸ್ಯಗಳ ಸರಣಿ ಚಿತ್ರದ ಮೂಲಕ ಹಿರೇಗೌಡರು ನೀರಿನಾಳದಲ್ಲಿ ಜಲಚರಗಳ ವಯ್ಯಾರ, ಸೌಂದರ್ಯಗಳನ್ನು ಮೂರ್ತ ಮತ್ತು ಅಮೂರ್ತ ರೂಪದಲ್ಲಿ ನೀಡಿದ್ದಾರೆ.

**೨೩. ದುಃಖಿಗಳು (೧೯೯೮)**

ಈ ಚಿತ್ರದ ಪ್ರಮುಖ ವಸ್ತು ನಿರಾಶಾದಾಯಕ ಭಾವ ಸೂಚಿಸುವ ಇಬ್ಬರೂ ಕೂಲಿಗಳದ್ದು ಅವರಲ್ಲಿ ಒಬ್ಬ ಕೂಲಿ ದುಃಖಿತನಾಗಿದ್ದಾನೆ. ಇನ್ನೊಬ್ಬನು ಚಿಂತಾಕ್ರಾಂತನಾಗಿದ್ದಾನೆ. ಅಂದರೆ, ಇವೆರಡರ ಅಂತಿಮ ಅನುಭವ, ಬದುಕಿನ ಅನಿಶ್ಚಿತತೆ ಮತ್ತು ಕರಾಳತೆಯನ್ನು ಅವೆರಡೂ ಮುಖಗಳಲ್ಲಿ ತೋರಿಸಿರುವ ರೀತಿ ಹಾಗೂ ಅವೆರಡರಲ್ಲಿ ಕಂಡುಬರುವ ವಿಭಿನ್ನ ಭಾವಗಳೂ ಸಹ ನಿರಾಶೆಯ ಪ್ರತಿ ರೂಪಗಳು ಎಂದು ತಿಳಿಸುವದೇ. ಈ ಚಿತ್ರದ ಉದ್ದೇಶವಾಗಿದ್ದು, ಹಿರೇಗೌಡರ ಎಂದಿನ ಶೈಲಿಯಲ್ಲಿ ನಿರೂಪಿತಗೊಂಡಿದೆ. ಆದರೆ ಅವರ ಎಂದಿನ ಕ್ಯೂಬಿಸ್ಟ ರಚನೆಗಳಿಂದ ಹೊರಬಂದ ಇಲ್ಲಿನ ಆಕೃತಿಗಳಲ್ಲಿ ಹಿರೇಗೌಡರ ರೇಖಾಚಿತ್ರಗಳಲ್ಲಿ ಕಂಡುಬರುವ ರೂಪಗಳಂತೆಯೇ ರಚನೆಗೊಂಡಿದ್ದು, ಕೂಲಿಗಳ ಶರೀರದ ಬಲಿಷ್ಠತೆಯನ್ನು ಹಿರೇಗೌಡರ ಪ್ರಬುದ್ಧ ಗ್ರಹಿಕೆ ಅಭಿವ್ಯಕ್ತಪಟ್ಟಿದೆ. ಹಿನ್ನೆಲೆಯಲ್ಲಿ ಆಕೃತಿಗಳು ದಟ್ಟವಾಗಿ ಮೂಡಿದ್ದರೂ, ಮುನ್ನೆಲೆಯ ಆಕೃತಿಗಳು ಸ್ಪಷ್ಟವಾಗಿ ಗೋಚರಪಡಿಸುವ ಕ್ರಮವನ್ನು ಇಲ್ಲಿ ಅನುಸರಿಸಲಾಗಿದೆ. ಡ್ರೈ ಬ್ರಶ್ ತಂತ್ರದಿಂದ ದುಡಿಸಿಕೊಳ್ಳಲಾದ ಇಲ್ಲಿನ ಚಿತ್ರಗಾರಿಕೆ ವಿಶಿಷ್ಟ ಅನುಭವವನ್ನು ನೀಡುವುದರ ಜೊತೆಗೆ ಆಕೃತಿ ಪ್ರಧಾನ ಸಂಯೋಜನೆಗೆ ಒಳಪಟ್ಟಿದೆ.

**೨೪. ಮುಂಗಾರು ಮೋಡಗಳು (೧೯೯೮)**

ಮುಂಗಾರು ಮೋಡಗಳ ದಟ್ಟ ಛಾಯೆಗಳ ವೈಖರಿ ಅವುಗಳ ತಿಕ್ಕಾಟದಿಂದುಂಟಾಗುವ ಕೋಲ್ಮಿಂಚುಗಳು, ಪ್ರಾಣಿ ಪಕ್ಷಿಗಳು ತಮ್ಮ ತಮ್ಮ ಗೂಡು ಸೇರಿದಾಗ ಉಂಟಾಗುವ ವಾತಾವರಣದ

ನೀರವತೆ, ಮುಂತಾದ ಬದಲಾವಣೆಯ ವೈಚಿತ್ರ್ಯಗಳ ಅನುಭವವನ್ನು ನೀಡುತ್ತದೆ. ಆ ನಂತರದ ಮಳೆರಾಯನ ಸಂಚಲನದಿಂದ ಮತ್ತೆ ವಾತಾವರಣದಲ್ಲಿ ಶೀತಲ ಹವೆಯ ಪ್ರವೇಶದಿಂದ ಮನುಷ್ಯನ ಮೇಲೆ ಉಂಟಾಗುವ ಪ್ರಕೃತಿ ವೈಚಿತ್ರ್ಯಗಳ ಹಿಂದೆ ಅಡಗಿರುವ ವಿಸ್ಮಯ ಭಾವ ಸ್ಫುರಿಸುವಂತೆ ಮಾಡುವ ದೃಶ್ಯ ಬಿಂಬಿಸುವುದೇ ಈ ಚಿತ್ರದ ಉದ್ದೇಶ.ಮೇಲ್ನೋಟಕ್ಕೆ ಈ ಕೃತಿಯಲ್ಲಿ ನೀರವತೆಯ ಭಾವ ಪ್ರಕಟವಾಗುತ್ತದೆ. ಏಕೆಂದರೆ ತೃತೀಯ, ಚತುರ್ಥ, ವರ್ಣಗಳನ್ನು ವಿವಿಧ ಆಕಾರಗಳಾಗಿ ದುಡಿಸಿಕೊಂಡ ಕ್ರಮದಲ್ಲಿ ಚೈತನ್ಯ ಅಡಗಿದೆ. ಅದಕ್ಕೆ ಕಾರಣ ಇಲ್ಲಿನ ವರ್ಣ ಸಂಯೋಜನೆ. ಹೀಗಾಗಿ ಹಿರೇಗೌಡರ ಆಶಯವಾದ ಶೀತಲ ಅನುಭವವನ್ನು ನೀಡುತ್ತದೆ. ಕೃತಿಯ ಒಂದು ಪಾರ್ಶ್ವದಲ್ಲಿ ಬೆಳಕಿನ ಛಾಯೆಯ ಮೂಲಕವಾಗಿ ಕೃತಿಯ ಆಶಯ ಕೇಂದ್ರೀಕೃತಗೊಳ್ಳುವ ಬಗೆಯು ಹಿನ್ನೆಲೆಯಲ್ಲಿ ವರ್ಣಾಕೃತಿಗಳು ಮಸುಕಾದ, ಸಮ್ಮಿಶ್ರದ ನೆಲೆಯಲ್ಲಿ ಮೂಡಿವೆ.

**೨೫. ಪ್ರೀಯ ಪುಷ್ಪ (೧೯೯೮)**

ಪುಷ್ಪವೆಂದರೆ ಪ್ರೀಯವೆಂದರ್ಥ. ಸೂರ್ಯನ ಉದಯದಿಂದ ಪ್ರಕೃತಿ ಚೈತನ್ಯಶೀಲವಾಗಲು ಕಾರಣವಾಗುತ್ತದೆ. ಸೂರ್ಯನ ಸುವರ್ಣ ಕಿರಣಗಳೂ ಸಂಚರಿಸುವುದರಿಂದ ವಾತಾವರಣದಲ್ಲಿ ಸಂತಸದ ಅನುಭವ ತುಂಬುತ್ತದೆ. ಹಳದಿಯ ಪಕ್ಕದಲ್ಲಿ ಕೆಂಪು ವರ್ಣ ಮೊಳಕೆಯೊಡೆದರೆ ಇನ್ನೂ ಶಕ್ತಿಯುತ ಚೈತನ್ಯದ ಪರಿಣಾಮಗಳು ಘಟಿಸುತ್ತವೆ. ಇಂಥ ವರ್ಣ ಸಂಯೋಜನೆಯನ್ನು ಯಥೇಚ್ಚವಾಗಿ ಬಳಸಿ, ಸೂರ್ಯಪಾನ ಹೂವಿನ ಪರಿಕಲ್ಪನೆಯನ್ನು ಹಾಗೂ ಪ್ರೀಯಭಾವವನ್ನು ಈ ಚಿತ್ರದಲ್ಲಿ ಬಳಸಿಕೊಂಡ ಹಿರೇಗೌಡರು, ಎಂದಿನಂತೆ ತಮಗೆ ಪ್ರಿಯವೆನಿಸುವ ವರ್ಣಗಳನ್ನೇ ಇಲ್ಲಿ ದುಡಿಸಿಕೊಂಡಿದ್ದಾರೆ. ಶುದ್ಧವರ್ಣಗಳ ಸಾಂಗತ್ಯದಿಂದ ಈ ಕೃತಿ ಪ್ರಜ್ವಲಿಸುತ್ತಿದೆ. ಸಂಯೋಜನೆಯಲ್ಲಿ ಸೂರ್ಯಪಾನ ಹೂವಿನ ಆಕೃತಿಯನ್ನು ಅವಕಾಶದ ಮೇಲ್ಬಾಗದಲ್ಲಿ ಚಿತ್ರಿಸಿದರೆ, ಅದಕ್ಕೆ ಪೂರಕವಾದ ಹಿನ್ನೆಲೆಯಲ್ಲಿ ಲಯವಾಗಿ ಹರಡಿಕೊಂಡ ವರ್ಣಗಳು ವಿವಿಧ ಶ್ರೇಣಿಗಳಲ್ಲಿ ಬಗೆ ಬಗೆಯ ಅಲೆಗಳನ್ನು ಸೃಷ್ಟಿಸಿವೆ. ಕಲಾಕೃತಿಯ ಯಾವೊಂದು ಭಾಗವೂ ಶುದ್ಧತೆಯ ಹೊರತಾಗಿ ರೂಪಿತವಾಗಿಲ್ಲವೆಂಬುದು ಈ ಕೃತಿಯ ವೈಶಿಷ್ಟವಾದರೆ, ಪ್ರಕೃತಿಯ ಶುದ್ಧ ರೂಪಗಳನ್ನು ಸೃಜನಾತ್ಮಕವಾಗಿ ರೂಪಾಂತರಿಸಿ ದುಡಿಸಿಕೊಳ್ಳುವ ಕ್ರಮವನ್ನು ಇಲ್ಲಿ ಕಾಣಬಹುದು.

**೨೬. ಅಧ್ಯಯನ (೧೯೯೮)**

ಈ ಚಿತ್ರದಲ್ಲಿ ಓದುಗ, ತೆರೆದ ಪುಸ್ತಕ, ಹಾಗೂ ಹಿನ್ನೆಲೆಯಲ್ಲಿ ಓಡುವ ನಾಯಿ. (ಅಂದರೆ ದಾಹದ ಪರಿಕಲ್ಪನೆಯ ಸಂಕೇತ.) ಮುಂತಾದವುಗಳನ್ನು ಚಿತ್ರಿಸಲಾಗಿದೆ. ಇದು ಓದುಗನ ಜ್ಞಾನ ದಾಹವನ್ನು ಅಭಿವ್ಯಕ್ತಿಸುವ ಉದ್ದೇಶ ಹೊಂದಿದ ವಿಭಿನ್ನ ಚಿತ್ರ. ಇದರ ವಸ್ತು ಸಂಯೋಜನೆ ಹಾಗೂ ವರ್ಣ ಸಂಯೋಜನೆ, ಶೀತಲ ವರ್ಣ ಪಂಕ್ತಿಯ ಅನುಭವ ಕೊಡುತ್ತದೆ. ವರ್ಣಗಳಿಂದ ಲೇಪಿತಗೊಂಡ ಕುಂಚಗಳನ್ನು (ಡ್ರೈ ಬ್ರಶ್) ಎಡಬಲಗಳ ದಿಕ್ಕಿನಲ್ಲಿ ತಿಕ್ಕಿದಾಗ, ಪಾರದರ್ಶಕವಾಗಿ ಮತ್ತು ಹಾಗೆ ತಿಕ್ಕಿದ ವರ್ಣಗಳಿಗೆ ಆಕೃತಿಗೆ ಅಂಚಿನಲ್ಲಿ ದಟ್ಟ ಬಾಹ್ಯ ರೇಖೆ ಉಂಟಾಗುತ್ತದೆ.



೨೬. ಅಧ್ಯಯನ, ೧೯೯೮



೨೭. ಭಯೋತ್ಪಾದಕ, ೧೯೯೮



೨೮. ಜೇನುತುಪ್ಪ, ೧೯೯೮

ಅಂತಹ ತಂತ್ರದಿಂದ ಈ ಕೃತಿಯನ್ನು ರಚಿಸಲಾಗಿದೆ. ನೀಳಕಾಯದ ಶರೀರದ ವಿನ್ಯಾಸವುಳ್ಳ ವ್ಯಕ್ತಿ ಮಲಗಿಕೊಂಡು ಗ್ರಂಥವೊಂದನ್ನು ಅಧ್ಯಯನ ಮಾಡುತ್ತಿದ್ದು, ಹಿನ್ನೆಲೆಯಲ್ಲಿ ಜ್ಞಾನ ದಾಹಕ್ಕೆ ಸಂಬಂಧಿಸಿದಂತೆ ಶ್ವಾನಗಳನ್ನು ಓಡುತ್ತಿರುವಂತೆ ಚಿತ್ರಿಸಲಾಗಿದೆ. ಪ್ರಮುಖ ಆಕೃತಿಯ ಸುತ್ತಲೂ ವಿಭಿನ್ನ ಬಗೆಯ ಜ್ಯಾಮಿತಿಕ ಆಕೃತಿಗಳು ಮೇಲೆ ಹೇಳಿದ ತಂತ್ರದಲ್ಲಿ ಒಡಮೂಡಿವೆ. ಬಹಳ ಅಲ್ಪ ವರ್ಣಗಳ ಸಾಂಗತ್ಯದಿಂದ ರಚಿಸಲಾದ ಈ ಕೃತಿ ವಿಶಿಷ್ಟ ತಂತ್ರಗಾರಿಕೆ ಮತ್ತು ಮೈವಳಿಕೆಯ ದೃಷ್ಟಿಯಿಂದ ಮಹತ್ವದ್ದು.

**೨೭. ಭಯೋತ್ಪಾದಕತೆ** (೧೯೯೮)

ಜಾಗತಿಕವಾಗಿ ಭಯೋತ್ಪಾದನೆ ಹೆಮ್ಮರವಾಗಿ ಬೆಳೆದು ನಿಂತಿದೆ. ಈ ಭಯೋತ್ಪಾದನೆಯ ಹಿಂದೆ ಇರುವ ವ್ಯಕ್ತಿಗಳು ಯಾರು? ಅವರ ಉದ್ದೇಶವಾದರೂ ಏನು? ಇದರ ಕೊನೆ ಯಾವಾಗ? ಹಾಗೂ ಪರಿಹಾರ ಸೂತ್ರಗಳಾವವು? ಈ ಎಲ್ಲ ಪ್ರಶ್ನೆಗಳು ಒಂದು ಸಣ್ಣ ಕುಟುಂಬ ಮಟ್ಟದಿಂದ ಹಿಡಿದು ಜಾಗತಿಕ ಮಟ್ಟದಲ್ಲಿ ಹರಡಿಕೊಂಡಿವೆ ಎಂಬುದನ್ನು ಹೇಳುವುದು ಈ ಚಿತ್ರದ ಉದ್ದೇಶವಾಗಿದೆ. ಒಬ್ಬ ವ್ಯಕ್ತಿಯನ್ನೇ ನಾವು ಮಾದರಿಯಾಗಿ ತೆಗೆದುಕೊಂಡರೆ, ಅವನ ಎರಡು ಕಣ್ಣುಗಳಲ್ಲಿ ಒಂದು ಕಣ್ಣು ಕಂಡದ್ದನ್ನು ಇನ್ನೊಂದು ಕಣ್ಣು ನಂಬುವಂತಿಲ್ಲ. ಅದೇ ರೀತಿ ಎಡಗಿವಿ ಕೇಳಿದ್ದನ್ನು ಬಲಗಿವಿ ನಂಬುವ ಪರಿಸ್ಥಿತಿಯಿಲ್ಲ. ಹಾಗೆ ಮೈಮೇಲೆ ತೊಟ್ಟಿರುವ ಬಟ್ಟೆಗೂ, ತಲೆಯ ಮೇಲೆ ಹಾಕಿರುವ ಶಿರಸ್ತ್ರಾಣಕ್ಕೂ ಹೊಂದಾಣಿಕೆ ಇಲ್ಲ. ಈ ಕ್ಷಣದಲ್ಲಿ ಮಾತನಾಡಿದ ಬಾಯಿ ಇನ್ನೊಂದು ಕ್ಷಣಕ್ಕೆ ಬೇರೆಯದನ್ನೇ ಮಾತನಾಡುತ್ತದೆ. ಈ ಹಿನ್ನೆಲೆಯಲ್ಲಿ ಒಬ್ಬ ವ್ಯಕ್ತಿ ತನಗೆ ತಾನೆ ಭಯೋತ್ಪಾದಕನಾಗಿ ರೂಪುಗೊಂಡಿದ್ದಾನೆ. ಇದಕ್ಕೆ ಪರಿಹಾರ ಹೇಗೆ? ಯಾವಾಗ? ಯಾರಿಂದ? ಎಂಬೆಲ್ಲ ಪ್ರಶ್ನೆಗೆ ಉತ್ತರ ಸಿಗುವುದು ಯಾರಿಂದ? ಆದ್ದರಿಂದ ಭಯೋತ್ಪಾದಕತೆ ಎಂಬುದು ಒಂದು ಪ್ರಶ್ನೆಯೇ ಹೊರತು ಉತ್ತರವಾಗಲು ಸಾಧ್ಯವಿಲ್ಲವೆಂಬುದು ಈ ಚಿತ್ರದ ಅರ್ಥ.[೮] ಈ ಅರ್ಥಕ್ಕೆ ಪೂರಕವಾಗಿ ಮುಸ್ಲಿಂ ಮೂಲಭೂತವಾದಿಗಳ ರೂಪಾರ್ಥವನ್ನು ತೋರ್ಪಡಿಸಲು, ಅಸ್ಪಷ್ಟ ನೆಲೆಯಲ್ಲಿ ದಾಡಿ ಬಿಟ್ಟ, ಹಸಿರು ವರ್ಣದ ಟೊಪ್ಪಿಗೆ ಹಾಕಿದ ಭಾವ ಇಲ್ಲಿ ಪ್ರಕಟವಾಗಿದೆ. ಅದರ ಭಾಗವಾಗಿ ಹಿನ್ನೆಲೆಯ ಬೀಸುಗಳು ಮೂಡಿ ಪ್ರಧಾನ ಆಕೃತಿಯೊಳಗೆ ತಾವೂ ಒಂದಾಗಿವೆ. ಇಲ್ಲಿ ಪ್ರಖರ ವರ್ಣಗಳು ಭಯೋತ್ಪಾದನೆಗೆ ರೂಪಾರ್ಥ ಒದಗಿಸಿದರೆ, ಇನ್ನುಳಿದ ವರ್ಣದ ಲಯಬದ್ಧ ಬೀಸುಗಳು ಜ್ಯಾಮಿತಿಕ ಆಕೃತಿಯೊಳಗೆ, ಪ್ರಧಾನ ಆಕೃತಿಯೊಳಗೆ ಸಮ್ಮಿಶ್ರಗೊಂಡು ಕೃತಿಯ ಆಶಯವನ್ನು ಈಡೇರಿಸುತ್ತವೆ.

**೨೮. ಜೇನು ತುಪ್ಪ** (೧೯೯೮)

ಜೇನು ತುಪ್ಪವೆಂಬುದು ಯೌವ್ವನದ ಉತ್ತುಂಗ ಶಿಖರವೆಂಬ ಅರ್ಥದ ಹಿನ್ನೆಲೆಯಲ್ಲಿ ರಚಿತಗೊಂಡ ಚಿತ್ರ ಇದಾಗಿದೆ. ಒಂದು ಹೆಣ್ಣು ಒಂದು ಗಂಡು ಯೌವ್ವನಾವಸ್ಥೆಯಲ್ಲಿ ಸಮಾನ ಮನಸ್ಸು, ಸಮಾನ ಆಕಾಂಕ್ಷೆಗಳು ಏಕರೂಪದಲ್ಲಿ ಕ್ರಿಯಾಶೀಲವಾದರೆ ಅದರಿಂದ ಸಿಗುವ ಫಲವೇ

೧೮. ವಿ.ಬಿ.ಹಿರೇಗೌಡರ ಅಭಿಪ್ರಾಯ

ಜೇನು ಸವಿದಂತೆ ಎಂದು ಬೇರೆ ಹೇಳಬೇಕಿಲ್ಲ. ಜೇನು ತುಪ್ಪವೆಂಬುದು ಯೌವನಾನುಭವದ ತಾತ್ಪರ್ಯ ಎಂದು ಸಾರುವುದು ಈ ಚಿತ್ರದ ಉದ್ದೇಶ. ಈ ಉದ್ದೇಶವನ್ನು ಸಾರ್ಥಕಗೊಳಿಸಲು ಹಿರೇಗೌಡರು ಎಂದಿನಂತೆ ಅವಕಾಶದಲ್ಲಿ ನಾಲ್ಕಾರು ಪಟ್ಟಿಕೆಗಳನ್ನು ರೂಪಿಸಿ ಅದರ ಒಡಲಲ್ಲಿ ಒಡಮೂಡಿದ ಹಾಗೆ ಎಡಕ್ಕೆ ಸ್ತ್ರೀ ರೂಪವನ್ನು ಬಲಕ್ಕೆ ಪುರುಷ ರೂಪವನ್ನೂ ಚಿತ್ರಿಸಿದ್ದಾರೆ. ಅವು ನಗ್ನವಾಗಿದ್ದು, ಆಕೃತಿಯೊಳಗೆ ಕಾಮಸೂಚಕವಾದ (ವೈಜ್ಞಾನಿಕವಾಗಿ ವೀರ್ಯವನ್ನು ಸೂಚಿಸುವಂತೆ) ಪಾರದರ್ಶಕ ಆಕೃತಿಗಳನ್ನು ಭಾಗವಾಗಿ ಚಿತ್ರಿಸಿದ್ದಾರೆ. ಹಿನ್ನೆಲೆಯಲ್ಲಿ ಲಯಬದ್ಧವಾಗಿ ಹರಿದಾಡಿದ ಹಲವಾರು ಸೂಕ್ಷ್ಮ ವಿನ್ಯಾಸಗಳು ವಿವಿಧ ಚೌಕಟ್ಟುಗಳಲ್ಲಿ ರೂಪಣಗೊಂಡು ಪ್ರಧಾನ ಆಕೃತಿಗಳಿಗೆ ಪೂರಕ ಬೆಂಬಲವನ್ನು ನೀಡುತ್ತವೆ. ಸದೃಢ ಶರೀರದ ವಿನ್ಯಾಸವನ್ನು ಹೊಂದಿದ ಎರಡೂ ಮಾನವಾಕೃತಿಗಳಲ್ಲಿ ಸೃಜನಾತ್ಮಕವಾದ ರಚನೆ ಇದೆ. ಪುರುಷನು ಕೈಯಲ್ಲಿರುವ ಸೇಬುಹಣ್ಣಿನಂತಹ (ಜೇನುತುಪ್ಪ?)ವಸ್ತುವನ್ನು ಸ್ತ್ರೀಗೆ ತೋರಿಸಿ ಕಾಮಕ್ರಿಯೆಗೆ ಆಹ್ವಾನಿಸುವ ಭಾವ ಇಲ್ಲಿದೆ. ಆದರೆ ಸ್ತ್ರೀಯಲ್ಲಿ ನಿರಸ ಭಾವ ಪ್ರಕಟವಾಗಿದ್ದು ಹಿರೇಗೌಡರ ಈ ಕೃತಿಯ ಆಶಯವೂ ಇದಾಗಿರಬಹುದು.

**೨೯. ಮಾನವೀಯ ಪಾಪ (೧೯೯೮)**

ಪಾಪದ ಬಗ್ಗೆ ಚಿತ್ರಿಸಲು ಹೇಳಿದರೆ ಯಾವ ರೀತಿ ಚಿತ್ರಿಸುವಿರಿ ಎಂದು ಕಲಾವಿದನ ಹತ್ತಿರ ಒಬ್ಬ ಪತ್ರಕರ್ತ ಕೇಳಿದನಂತೆ, ಹಾಗೇ ಮುಂದುವರೆದು ಯಾವ ಯಾವ ರೀತಿಯ ಪಾಪಗಳನ್ನು ಎಲ್ಲೆಲ್ಲಿ ಕಂಡು ಅನುಭವಿಸಿದ್ದೀರಿ ಎಂದು ಪತ್ರಕರ್ತ ಮತ್ತೆ ಕೇಳಿದ. ಆಗ ಸಾಮಾನ್ಯವಾಗಿ ಎಲ್ಲ ಪ್ರಾಣಿಗಳೂ ಪಾಪವನ್ನು ಮಾಡುತ್ತವೆ. ಯಾಕೆಂದರೆ ಅವುಗಳಿಗೆ ಬದುಕಬೇಕೆಂಬುದೊಂದೆ ಆಶೆ. ಯಾವುದೇ ಪಾಪ ಮಾಡಿದರೂ ಅದು ಅಂದಿನ ಹಸಿವನ್ನು ಇಂಗಿಸುವದಕ್ಕಾಗಿ ಮಾತ್ರ ಎಂಬುದು ಅದಕ್ಕೆ ತಿಳಿದಿತ್ತು. ಯಾಕೆಂದರೆ ಅವುಗಳಿಗೆ ಬುದ್ದಿ ಇಲ್ಲ. ಅದೇ ರೀತಿ ಮನುಷ್ಯನೂ ಸಹ ಪಾಪ ಮಾಡುತ್ತಾನೆ. ಆದರೆ ಮನುಷ್ಯ ಬುದ್ಧಿ ಜೀವಿ ಎಂಬುದನ್ನು ಮರೆತು ಪಾಪ ಮಾಡುತ್ತಾನೆ. ಇದಕ್ಕೆ ಕಾರಣ ಸೂರ್ಯದೇವ ಬೆಳಕನ್ನು ನೀಡಿ ನಮ್ಮನ್ನೆಲ್ಲ ಪಾಪಿಗಳನ್ನಾಗಿ ಮಾಡಿದ್ದಾನೆ. ಆದ್ದರಿಂದ ಪಾಪ ಮಾಡದ ದೇವರಿಲ್ಲ, ಮನುಷ್ಯರಿಲ್ಲ. ಹೀಗಾಗಿ ಎಷ್ಟು ಪಾಪ ಮಾಡಿದ್ದಾನೆ ಎಂದು ಕೇಳಿದರೆ ಬೆಟ್ಟದಷ್ಟು ಪಾಪ ಮಾಡಿದ್ದಾನೆ ನೋಡೆಂದು ಪತ್ರಕರ್ತನಿಗೆ ತಾನು ಮಾಡಿದ ಚಿತ್ರವನ್ನು ತೋರಿಸಿದನಂತೆ. ಆ ಬೆಟ್ಟದ ತುಂಬೆಲ್ಲ ಪಾಪ ಮಾಡಿದ ಸತ್ತ ಮಾನವ ದೇಹಗಳಿಂದ ನಿರ್ಮಾಣಗೊಂಡ ಬೆಟ್ಟದ ಚಿತ್ರವಾಗಿತ್ತಂತೆ ಹೀಗಾಗಿ ಎಲ್ಲಿಯೋ ಅಪ್ಪಿ ತಪ್ಪಿ ಪುಣ್ಯಮಾಡಬೇಕೆಂಬ ಆಶೆಯುಳ್ಳ ಮನುಷ್ಯನಿದ್ದರೆ ಅವನಿಗೆ ಪಾಪ ಮಾಡದ ಸ್ಥಳ ಹುಡುಕಾಡಿದರೆ ಅಂಥ ಪವಿತ್ರ ಸ್ಥಳ ಸಿಗಲೇ ಇಲ್ಲವಂತೆ. ಆದ್ದರಿಂದ ನಾನೂ ಪಾಪಿಯಾದರೆ ಮಾತ್ರ ಬದುಕಲು ಸಾಧ್ಯವೆಂದು ತಿಳಿದು ಪಾಪದ ಕೂಪದಲ್ಲಿ ನಾನೂ ಹೊಳಲ್ಪಟ್ಟೆ ಎಂಬ ಅನುಭವವನ್ನು ತಿಳಿಸಿದನಂತೆ. ಈ ಸಮಾಚಾರ ತಿಳಿಯುವಷ್ಟರಲ್ಲಿ ಪಾಪಿ ಸೂರ್ಯ ದೇವನು ಪಾಪಿಗಳ ಬೆಟ್ಟದ ಹಿಂದೆ ಸರಿದು ಮಾಯವಾದನಂತೆ ಎಂದು ಹೇಳುವುದೇ ಈ ಚಿತ್ರದ ಉದ್ದೇಶವಾಗಿದೆ.[೯] ಬೆಟ್ಟದಂತಹ ವಿನ್ಯಾಸದೊಳಗೆ ಮನುಷ್ಯಾಕೃತಿಗಳನ್ನು ಕುಂಚದ

೦೯. ವಿ.ಬಿ.ಹಿರೇಗೌಡರ ಅಭಿಪ್ರಾಯ



೩೧. ಸಂಯೋಜನೆ, ೧೯೯೯



೩೨. ಸ್ವಭಾವ ಚಿತ್ರ ಸಂಯೋಜನೆ, ೨೦೦೦

ಬೀಸುವಿಕೆಗಳೊಂದಿಗೆ ರಚಿಸಿದ ಹಿರೇಗೌಡರು ಹಿನ್ನೆಲೆಯಲ್ಲಿ ಸೂರ್ಯನನ್ನು ಪ್ರಖರ ವರ್ಣಗಳೊಂದಿಗೆ ಚಿತ್ರಿಸಿ ಅದರ ಸುತ್ತ ವೃತ್ತಾಕಾರದಲ್ಲಿ ವರ್ಣಗಳನ್ನು ಪದರುಗಳಂತೆ ಚಿತ್ರಿಸಿದ್ದಾರೆ. ಇಲ್ಲಿನ ವರ್ಣ ಸಂಯೋಜನೆ ಸೂರ್ಯಾಸ್ತವನ್ನೇ ನೆನಪಿಸುವಂತಿದೆ. ಕೆಳಭಾಗದಲ್ಲಿ ಭೂಪಾತಳಿಯನ್ನು ಪ್ರಕೃತಿಚಿತ್ರದ ನಿರ್ವಹಣೆಯಂತೆ ರಚಿಸಿದ್ದಾರೆ. ಅವಕಾಶದ ಮಧ್ಯದಲ್ಲಿ ಎಂದಿನಂತೆ ಹಿರೇಗೌಡರು ತೆಳು ವರ್ಣದ ಪಟ್ಟಿಕೆಯನ್ನು ಸೃಷ್ಟಿಸಿ ಅವರ ಶೈಲಿಯ ಅಸ್ತಿತ್ವವನ್ನು ಇಲ್ಲಿಯೂ ಪ್ರತಿಪಾದಿಸಿದ್ದಾರೆ. ಶುಭ್ರವರ್ಣಗಳಿಂದ ಕೂಡಿದ ಈ ಸಂಯೋಜನೆ ಮೇಲ್ನೋಟಕ್ಕೆ ಪ್ರಕೃತಿ ಚಿತ್ರವೆಂಬಂತೆ ಕಂಡರೂ ಅದರಾಚೆಗೆ ಆಧುನಿಕ ಒಲವುಗಳನ್ನು ಈ ಹಿಂದೆ ಹೇಳಿದ ಕೃತಿಯ ಉದ್ದೇಶವನ್ನು ಸಾರ್ಥಕ್ಯಗೊಳಿಸುವಲ್ಲಿ ಯಶಸ್ವಿಯಾಗಿದೆ.

**೩೦. ಬೇರುಗಳು** (೧೯೯೮)

ಯಾವುದೇ ಪ್ರಾಣಿಯಾಗಲೀ, ಪಕ್ಷಿಯಾಗಲೀ ಮನುಷ್ಯನಾಗಲೀ, ಇಲ್ಲವೇ ನಿಸರ್ಗದಲ್ಲಿಯ ವೃಕ್ಷವಾಗಲಿ ಅದರದೇ ಆದ ಒಂದು ಪಳಿಯುಳಿಕೆ ಇರುತ್ತದೆ ಅಥವಾ ಮೂಲ ಬೇರು ಇರುತ್ತದೆ. ಅದನ್ನು ಗಮನಿಸಿದಾಗ ಅದು ಭೂಮಿಯಲ್ಲಿ ಎಷ್ಟು ಆಳಕ್ಕೆ ಹೋಗಿದೆ ಅದಕ್ಕೆ ಎಷ್ಟು ಕವಲುಗಳು ಇವೆ, ಅದು ಎಷ್ಟು ವ್ಯಾಪ್ತಿಯಲ್ಲಿ ಹರಡಿಕೊಂಡಿದೆ ಎಂಬುದನ್ನು ಅರಿವು ಮಾಡಿಕೊಡುವುದೇ ಈ ವರ್ಣ ಚಿತ್ರದ ಗ್ರಹಿಕೆಯಾಗಿದೆ. ಅವಕಾಶವನ್ನು ಎಂದಿನಂತೆ ವಿಂಗಡಿಸಿದ ಹಿರೇಗೌಡರು ಆಯತಾಕಾರದ ಪಟ್ಟಿಕೆಗಳನ್ನು ಲಂಬವಾಗಿಸಿಕೊಂಡು ಶುಭ್ರ ವರ್ಣಗಳಿಂದ ಲಯಬದ್ಧವಾದ ಬೀಸುವಿಕೆಗಳಿಂದ ಚಿತ್ರದ ಅರ್ಥಸಾಧ್ಯತೆಗೆ ಎಂದಿನ ಸಂಯೋಜನೆಗೆ ಬದ್ಧವಾಗಿದ್ದಾರೆ. ಬೇರಿನ ರೂಪಾರ್ಥವನ್ನು ಹೊಂದಿದ ಮಧ್ಯದಲ್ಲಿರುವ ದಟ್ಟ ಆಕೃತಿಯಿಂದ ಬೇರುಗಳ ಹಾಗೆ ಹರಡಿಕೊಂಡ ಕುಂಚದ ಬೀಸುಗಳು ಲಯಪೂರ್ಣವಾಗಿ, ಅಪೂರ್ಣವೆಂಬಂತೆ ಕಂಡರೂ ಮತ್ತೆ ರೂಪಾಂತರಗೊಂಡು ಮುಂದುವರೆಯುವ ಹಾಗೆ ಇಲ್ಲಿ ವರ್ಣಗಾರಿಕೆಯನ್ನು ದುಡಿಸಿಕೊಳ್ಳಲಾಗಿದೆ. ಹಿನ್ನೆಲೆಯಲ್ಲಿ ಕೆಂಪು ವರ್ಣಗಳ ವಿವಿಧ ಶ್ರೇಣಿಗಳಲ್ಲಿ ಅಲ್ಲಲ್ಲಿ ಜ್ಯಾಮಿತಿಕವಾಗಿ ವಿಭಜನೆಗೊಂಡು ಮುಖ್ಯ ಆಕೃತಿಯನ್ನು ತನ್ನ ಉದರದೊಳಗೆ ಹಾಕಿಕೊಳ್ಳುವ ಕ್ರಮ ಇಲ್ಲಿದೆ. ಇದರ ಮುಖೇನವಾಗಿ ಕೃತಿಯ ಅರ್ಥಸಾಧ್ಯತೆಗಳನ್ನು ಸ್ಪಷ್ಟವಾಗಿಸುವ ಹಿರೇಗೌಡರ ಯತ್ನ ಫಲಿಸಿದೆ.

**೩೧. ಸಂಯೋಜನೆ** (೧೯೯೮)

ಇದೊಂದು ಅಮೂರ್ತ ಚಿತ್ರ, ನವ್ಯ ಶೈಲಿಯ ಒಂದು ಸಂಯೋಜನಾ ಮಾದರಿ. ಇದು ಜ್ಯಾಮಿತಿಕ ಆಕಾರಗಳನ್ನು ಬಳಸಿಕೊಂಡು ಸಂಯೋಜನಾ ತತ್ವಗಳನ್ನಾಧರಿಸಿದ ಚೌಕೋನಾಕೃತಿ, ವೃತ್ತಗಳನ್ನು ಹಾಗೂ ನೀಲಿ, ಕೆಂಪು ಮತ್ತು ಹಳದಿ ವರ್ಣಗಳನ್ನು ಸೂಕ್ತವಾಗಿ ಪ್ರಯೋಗಿಸಿದ ಒಂದು ಪ್ರಾಯೋಗಿಕ ಚಿತ್ರ, ಆದಾಗ್ಯೂ ಇದೊಂದು ವಿಶೇಷ ಅನುಭವ ನೀಡಬಲ್ಲ ಅಮೂರ್ತ ಚಿತ್ರವೆಂದು ಹೇಳಬಹುದು. ಇಲ್ಲಿ ಸಂಯೋಜನಾ ತಂತ್ರ, ಪರಿಶುದ್ಧ ವರ್ಣಬಳಕೆಯಿಂದ ಹೃದಯದ ಅಂತರಾಳಕ್ಕೆ ಪ್ರವೇಶಿಸುವ ವರ್ಣಗಾರಿಕೆ ಇದೆ. ಎಂದಿನಂತೆ ಹಿರೇಗೌಡರು ಇಲ್ಲಿ ಜ್ಯಾಮಿತಿಕ ಆಕೃತಿಯೊಳಗೆ ರಮಣೀಯವೆನಿಸುವ ವರ್ಣಗಳನ್ನು ವಿವಿಧ ಶ್ರೇಣಿಯಲ್ಲಿ ಲೇಪಿಸಿ, ಅದಕ್ಕೆ ಪೂರಕವಾಗಿ

ವೃತ್ತಾಕಾರದ ವಿನ್ಯಾಸಗಳನ್ನು ದಟ್ಟಗೊಳಿಸುತ್ತಾರೆ. ಓರೆಯಾಕಾರದಲ್ಲಿ ಪ್ರಕಟಗೊಂಡ ದಟ್ಟ ಪಟ್ಟಿಕೆ ಕೃತಿಯನ್ನು ಎರಡು ಭಾಗವಾಗಿಸಿದೆ ಎಂಬ ಭ್ರಮೆ ತಕ್ಷಣಕ್ಕೆ ಗೋಚರಿಸಿದರೂ ಅದರ ಮೇಲೆ ರಚಿತಗೊಂಡ ಇತರೆ ಆಕೃತಿಗಳು ಎರಡೂ ಭಾಗಕ್ಕೆ ಸಂಪರ್ಕ ಸೇತುವೆಯಂತೆ ಕಾರ್ಯನಿರ್ವಹಿಸುವ ಬಗೆ ಇಲ್ಲಿದೆ. ಅವಕಾಶದ ಮೇಲಿನ ಒಳಗಡೆ ಪ್ರವೇಶಿಸುವ ಆಯತಾಕಾರದ ವರ್ಣವಿನ್ಯಾಸಕ್ಕೆ ಬಿಳಿ ವರ್ಣದ ಪ್ರಖರ ಬೆಳಕಿನ ಸ್ಪರ್ಶದಿಂದ ಅದು ಕೃತಿಯ ಕೇಂದ್ರೀಕೃತ ಸ್ಥಾನವೆಂದು ಮೇಲ್ನೋಟಕ್ಕೆ ಗೋಚರವಾಗುತ್ತದೆ. ಹಾಗೆಯೇ ವೃತ್ತಗಳ ವಿನ್ಯಾಸಗಳಿಗೂ ಬೆಳಕಿನ ಸ್ಪರ್ಶ ನೀಡಿದ್ದರೂ ಅವು ಮಸುಕಾಗಿರುವುದರಿಂದ ನೋಡುಗರನ್ನು ತಮ್ಮತ್ತ ನೇರವಾಗಿ ಸೆಳೆಯುವುದಿಲ್ಲ. ಇಂತಹ ವೈಶಿಷ್ಟ್ಯಗಳ ಹಿನ್ನೆಲೆಯಲ್ಲಿ ರಚಿತಗೊಂಡ ಈ ಕೃತಿ ಸಂಯೋಜನಾ ಪದ್ಧತಿಗಳಿಗೆ ಒಂದು ಉತ್ತಮ ಉದಾಹರಣೆಯಾಗುತ್ತದೆ.

**೩೨. ಸ್ವ-ಭಾವ ಚಿತ್ರ ಸಂಯೋಜನೆ** (೨೦೦೦)

ಕಲಾ ಪರಿಸರದಲ್ಲಿ ತಮ್ಮದೇ ಭಾವ ಚಿತ್ರವನ್ನು ರಚಿಸಿಕೊಂಡಿರುವ ಹಿರೇಗೌಡರು ಇಲ್ಲಿನ ಪ್ರತಿಯೊಂದು ಆಕೃತಿಗಳಿಗೆ ವಿವಿಧ ಅರ್ಥಸಾಧ್ಯತೆಗಳನ್ನು ವಿವರಿಸುತ್ತಾರೆ. ಈ ಚಿತ್ರದ ಹಿನ್ನೆಲೆಯಲ್ಲಿ ದಟ್ಟವಾದ ಕಪ್ಪುಛಾಯೆ ಅವರು ಸಾಗಿ ಬಂದ ಕಷ್ಟದ ನೆನಪುಗಳನ್ನು ಹೇಳುತ್ತದೆ. ಅದರ ಮಧ್ಯದಲ್ಲಿ ಆಶಾಕಿರಣಗಳನ್ನು ಹೊರಚೆಲ್ಲುವ ಕಿಟಕಿಯ ದೃಶ್ಯ, ಒಂದು ರೀತಿಯ ಜ್ಞಾನೋದಯದ ಸಂಕೇತವೆಂದು ಹೇಳಬಹುದು. ಅದರಿಂದಾಗಿ ಅವರ ಶ್ರಮಕ್ಕೆ ಪ್ರತಿಫಲವಾಗಿ ಅನೇಕ ಅತ್ಯುತ್ತಮ ಚಿತ್ರಗಳಿಗೆ ರಾಜ್ಯ ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಪ್ರಶಸ್ತಿಗಳು ಲಭಿಸಿದ ರೂಪಾರ್ಥವನ್ನು ಹೊಂದಿವೆ. ಬಹುತೇಕವಾಗಿ ದಟ್ಟ ವರ್ಣದ ಛಾಯೆಯಲ್ಲಿ ಪ್ರಕಟಗೊಂಡ ಈ ಕಲಾಕೃತಿಯಲ್ಲಿ ಹಿರೇಗೌಡರ ಆಕೃತಿಯೊಂದಿಗೆ ತಾವು ರಚಿಸಿದ ಕಲಾಕೃತಿಗಳನ್ನು ನೋಡುಗರಿಗೆ ತೋರಿಸುವಂತಹ ಸನ್ನಿವೇಶವನ್ನು ಚಿತ್ರಿಸಲಾಗಿದೆ. ಅವಕಾಶದಲ್ಲಿ ಪ್ರಕಟಗೊಂಡ ಇತರ ಚಿತ್ರಗಳಲ್ಲಿ ಗರಿಗೆದರಿ ಹಾರುತ್ತಿರುವ ಪಕ್ಷಿಗಳು, ಸ್ಥಿರ ಚಿತ್ರಣದಂತಹ ವಿನ್ಯಾಸಗಳೂ ಇಲ್ಲಿ ಪ್ರಕಟವಾಗಿವೆ. ಒಳಾವರಣದಲ್ಲಿ ಉದ್ದೇಶಿತ ಕಥನವನ್ನು ಸಾರ್ಥಕಗೊಳಿಸುವ ನಿಟ್ಟಿನಲ್ಲಿ ತಮ್ಮನ್ನು ತಾವೇ ವಿಮರ್ಶಿಸಿಕೊಳ್ಳುವಂತೆ, ಜೊತೆಗೆ ಹೆಮ್ಮೆಯನ್ನು, ಬದುಕಿನ ಸಾರ್ಥಕತೆಯನ್ನು ಪ್ರಕಟಿಸುವ ಆಶಯವನ್ನು ಈ ಕೃತಿ ಹೊಂದಿದೆ.

**೩೩. ಭಯೋತ್ಪಾದಕರು** (೨೦೦೧)

ಅಂತರ ರಾಷ್ಟ್ರೀಯ ಮಟ್ಟದಲ್ಲಿ ಇಪ್ಪತ್ತೊಂದನೆಯ ಶತಮಾನದ ಪ್ರಾರಂಭದ ದಿನಗಳಿಂದೀಚೆಗೆ ಭಯೋತ್ಪಾದನಾ ಚಟುವಟಿಕೆಗಳು ಸರಣಿಯ ರೀತಿಯಲ್ಲಿ ನಡೆದಿವೆ. ಅಮೇರಿಕಾದ ವರ್ಲ್ಡ್ ಟ್ರೇಡ್ ಸೆಂಟರ ಮೇಲೆ ಉಗ್ರರಿಂದ ವೈಮಾನಿಕ ದಾಳಿ, ಇರಾನ್-ಇರಾಕ ಯುದ್ಧಗಳ ಹಿನ್ನೆಲೆಯಲ್ಲಿ ನಡೆದ ಅನೇಕ ಭಯೋತ್ಪಾದನಾ ಚಟುವಟಿಕೆಗಳು, ತಾಲಿಬಾನ್‌ನಲ್ಲಿ ವಿಮಾನ ಅಪಹರಣ, ದಿಲ್ಲಿಯ ಸಂಸತ್ ಭವನದ ಮೇಲೆ ಬಾಂಬ್ ದಾಳಿ ಹೀಗೆ ಸರಣಿಯಾಗಿ ದೇಶದೆಲ್ಲೆಡೆ ಉಗ್ರರ ಭಯೋತ್ಪಾದನಾ ಚಟುವಟಿಕೆಗಳು ದೇಶದ ಭದ್ರತೆಯನ್ನು ಹಾಗೂ ಶಾಂತಿಯನ್ನು ಕದಡುವ ವಿಚ್ಛಿದ್ರಕಾರಿ ಚಟುವಟಿಕೆಗಳು



೩೩. ಭಯೋತ್ಪಾದಕರು, ೨೦೦೧



೩೪. ನಕ್ಷತ್ರ ಯುದ್ಧ, ೨೦೦೨

ನಡೆಯುತ್ತಿರುವ ಪರಿಣಾಮಗಳನ್ನು ಆಧರಿಸಿದೆ. ಒಟ್ಟಾರೆ ಈ ಚಿತ್ರ ಸಾಮಾಜಿಕವಾಗಿ ರಾಜಕೀಯವಾಗಿ ಅಸ್ಥಿರತೆಯ ಕಂದರಗಳನ್ನು ಸೃಷ್ಟಿಸಿರುವ ಸಂಕೇತಗಳನ್ನು ಹೊಂದಿದ್ದು, ಕ್ಯೂಬಿಸ್ಟ್ ಶೈಲಿಯಲ್ಲಿ ಎಂದಿನಂತೆ ದುಡಿಸಿಕೊಂಡಿದ್ದಾರೆ. ಇಲ್ಲಿ ಕಿತ್ತಳೆ ವರ್ಣದ ಪಟ್ಟಿಕೆಗಳು ಮೊನಚು ಭಾವವನ್ನು ಪ್ರಕಟಿಸುತ್ತಿದ್ದು, ಅವಕಾಶದಲ್ಲಿ ಮೇಲ್ಭಾಗದಿಂದ ಓರೆಯಾಗಿ ಸಂಯೋಜನೆಗೊಂಡಿವೆ. ಮೇಲಿನ ವಿವರಣೆಯಲ್ಲಿ ಹೇಳಿರುವಂತೆ ಸಂಸತ್ ಭವನದ, ಅಮೇರಿಕೆ ವರ್ಲ್ಡ್‌ಟ್ರೇಡ್ ಸೆಂಟರ್ ಇನ್ನೂ ಮುಂತಾದ ವಿನ್ಯಾಸಗಳು ಇಲ್ಲಿ ರಚಿತವಾಗಿಲ್ಲ. ಆದರೂ ಅವೆಲ್ಲ ಘಟನೆಗಳನ್ನು ಗಮನಿಸಿದ ಹಿರೇಗೌಡರು ದೃಶ್ಯಾತ್ಮಕವಾಗಿ ವಿವಿಧ ಆಕೃತಿಗಳ ಮೂಲಕ ಆ ಘಟನೆಗಳ ಪರಿಣಾಮವನ್ನು ವಿವರಿಸಿದ್ದಾರೆ. ಅಂತಹ ಉದ್ದೇಶವನ್ನು ಹೊಂದಿದ ಈ ಕೃತಿಯಲ್ಲಿ ಮೇಲ್ನೋಟಕ್ಕೇ ವಿಚ್ಛಿದ್ರಕಾರಕ ಅನುಭವ ಇಲ್ಲಿನ ಆಕೃತಿಗಳಿಂದ ಪ್ರಾಪ್ತವಾಗುತ್ತದೆ. ಅತೀ ವೇಗೋತ್ಕರ್ಷದಿಂದ ಕೂಡಿದ, ತೀವ್ರತರದ ಮೊನಚುಳ್ಳಂತೆ ಚಿತ್ರಿಸಿರುವುದರಿಂದ ಮೇಲಿನ ಉದ್ದೇಶಿತ್ವಂಕಥನವನ್ನು ಈ ಕೃತಿ ಅಮೂರ್ತ ಬಗೆಯಲ್ಲಿ ಸಾರ್ಥಕಗೊಳಿಸುತ್ತದೆ.

### ೩೪. ನಕ್ಷತ್ರ ಯುದ್ಧ (೨೦೦೨)

ಭೂಮಿಯ ಮೇಲೆ ದೇಶ, ದೇಶಗಳ ನಡುವೆ ಆಂತರಿಕ ಯುದ್ಧಗಳು ನಡೆಯುವದು ಒಂದು ವಿಧಾನವಾದರೆ, ಇತ್ತೀಚಿನ ವೈಜ್ಞಾನಿಕ ಬೆಳವಣಿಗೆಯ ಹಿನ್ನೆಲೆಯಲ್ಲಿ ಅಮೇರಿಕಾ, ರಶಿಯಾ, ಜರ್ಮನಿ, ಜಪಾನ ಹಾಗೂ ಭಾರತ ಸೇರಿದಂತೆ ಹಲವಾರು ರಾಷ್ಟ್ರಗಳು, ಚಂದ್ರಗ್ರಹ, ಮಂಗಳ ಗ್ರಹ ಮತ್ತು ಅದರಾಚೆಗೆ ಉಪಗ್ರಹಗಳತ್ತ ಕ್ರೀಡೆಯೋಪಾದಿಯಲ್ಲಿ ತಮ್ಮ ತಮ್ಮ ದೇಶದ ಅಭಿವೃದ್ಧಿಯ ಪ್ರತಿಷ್ಠಾಪನೆಯ ನೆಪದಲ್ಲಿ ನಾಮುಂದು ನೀಮುಂದು ಎಂಬ ಪೈಪೋಟಿ ನಡೆಸುತ್ತಿವೆ. ಇದು ಒಂದು ರೀತಿಯಲ್ಲಿ ನಕ್ಷತ್ರ ಯುದ್ದವೇನೋ ಎಂಬಂತೆ ವೈಜ್ಞಾನಿಕ ಸಮರಗಳು ನಡೆಯುತ್ತಿರುವದನ್ನು ಇಲ್ಲಿ ಕಲಾವಿದ ಹಿರೇಗೌಡರು ವಿಶೇಷ ಮಾಧ್ಯಮಗಳನ್ನು ಪ್ರಯೋಗಿಸಿ ವಿಶಿಷ್ಟ ರೀತಿಯ ತಂತ್ರಗಳನ್ನು ಬಳಸಿ ಕಲಾಕೃತಿ ರಚಿಸಿದ್ದಾರೆ. ಈ ಕೃತಿಯಲ್ಲಿ ಮೇಲಿನ ಉದ್ದೇಶಿತ ಕಥನದ ಯಾವ ಆಕೃತಿಗಳು ಇಲ್ಲಿ ಗೋಚರವಾಗದಿದ್ದರೂ, ನಭೋಮಂಡಲದಲ್ಲಿ ನಕ್ಷತ್ರಗಳಂತೆ ಚಿತ್ರಿಸಿ, ಅವುಗಳ ನಡುವೆ ವೇಗದಿಂದ ಹೊಯ್ದಾಡುವ ತೆಳು ರೇಖೆಗಳು ಉದ್ದೇಶಿತ ಕಥನವನ್ನು ಸಾರ್ಥಕಗೊಳಿಸುತ್ತವೆ. ಮೇಲ್ನೋಟಕ್ಕೆ ಇದೊಂದು ಅಮೂರ್ತ ಚಿತ್ರವೆಂದು ಗ್ರಹಿಕೆಗೆ ಒಳಗಾದರೂ ಆಶ್ಚರ್ಯವೇನಲ್ಲ. ಶುಭ್ರ ವರ್ಣಗಳ ಪ್ರಬುದ್ಧ ಸಂಯೋಜನೆ, ಅವುಗಳಿಗೆ ಪೂರಕವಾಗಿ ಹಿರೇಗೌಡರು ಸೃಷ್ಟಿಸಿರುವ ಪಟ್ಟಿಕೆಗಳು, ಅವಕಾಶದ ಎಡಭಾಗದಲ್ಲಿ ಪ್ರಖರ ವರ್ಣದಲ್ಲಿ ರಚಿತಗೊಂಡ ಭಾಗಗಳು ಇಡೀ ಕಲಾಕೃತಿಯನ್ನು ಒಟ್ಟಂದಗೊಳಿಸುತ್ತವೆ. ಸಾಮಾನ್ಯ ನೋಡುಗನಿಗೂ ರಸಾನುಭವ ನೀಡಬಲ್ಲ ಈ ಕಲಾಕೃತಿಯ ಮುಖ್ಯ ಆಶಯ ಮೇಲ್ಭಾಗದಲ್ಲಿ ಗೋಚರವಾಗುತ್ತದೆ. ವರ್ಣಗಾರಿಕೆಯಲ್ಲಿ ಶುದ್ಧತೆಯನ್ನು ಕಾಪಿಟ್ಟುಕೊಂಡ ಹಿರೇಗೌಡರು ಉದ್ದೇಶಿತ ಕಥನಗಳನ್ನು ದೃಶ್ಯಾತ್ಮಕವಾಗಿ ಹೇಗೆ ರೂಪಾಂತರಿಸುತ್ತಾರೆ ಎಂಬುದಕ್ಕೆ ಈ ಕೃತಿ ನಿದರ್ಶನವಾಗುತ್ತದೆ.

## ಉಪಸಂಹಾರ

ಹಿರೇಗೌಡರು ರಚಿಸಿದ ಆಯ್ದ ೩೪ ತೈಲ ಮಾಧ್ಯಮದ ವರ್ಣ ಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ವಿಭಿನ್ನ ನೆಲೆಯ ಅರ್ಥ ಸಾಧ್ಯತೆ, ತಂತ್ರಗಾರಿಕೆ, ಸಂಯೋಜನೆಗಳಿಂದ ಇಲ್ಲಿನ ಕೃತಿಗಳು ಚಿತ್ರಿಸಲ್ಪಟ್ಟಿವೆ. ಒಂದೇ ಬಗೆಯ ರಚನಾ ಶೈಲಿಯನ್ನು ಹೊಂದಿದ ಕಲಾಕೃತಿಗಳನ್ನು ಈ ಕೆಳಗಿನಂತೆ ವಿಂಗಡಿಸಬಹುದು.

ಚಿತ್ರ ೧ ಇಡೀ ತೈಲ ಮಾಧ್ಯಮದಲ್ಲಿಯೇ ಏಕೈಕ ವಿಭಿನ್ನ ಕಲಾಕೃತಿಯಾಗಿದ್ದು ರಚನಾ ನೆಲೆಯಲ್ಲಿ ನೈಜತೆಯನ್ನು ಹೊಂದಿದ್ದು, ವಿವರಕ್ಕೆ ನಿಲುಕುವ ಇಲ್ಲಿನ ರಚನಾ ತಂತ್ರಗಾರಿಕೆ ಈ ಅಧ್ಯಾದ ಯಾವುದೇ ಚಿತ್ರಗಳಲ್ಲಿ ಕಂಡುಬರುವುದಿಲ್ಲ. ಇಲ್ಲಿನ ಚಿತ್ರಗಳಲ್ಲಿ ಹಿರೇಗೌಡರು ಎರಡು ಸ್ವಭಾವಚಿತ್ರಗಳನ್ನು ರಚಿಸಿದ್ದು (೧ ಮತ್ತು ೩೨) ಬಹುತೇಕವಾಗಿ ಒಂದೇ ಬಗೆಯ ರಚನಾ ತಂತ್ರವನ್ನು ಹೊಂದಿವೆ. ಚಿತ್ರ ೪,೮,೨೧,೨೬ ಇವು ಮೂರ್ತರೂಪದ ಒಂದೇ ಶೈಲಿಯಲ್ಲಿ ರಚನೆಗೊಂಡಿವೆ. ಚಿತ್ರ ೬ ಮತ್ತು ೧೭, ೨೬ ಒಂದೇ ಬಗೆಯ ತಂತ್ರಗಾರಿಕೆಯನ್ನು ಹೊಂದಿವೆ. ಚಿತ್ರ ೧೨, ೨೭ ಒಂದೇ ಬಗೆಯ ತಂತ್ರಗಾರಿಕೆಯನ್ನು ಹೊಂದಿದ್ದರೂ ವರ್ಣಗಾರಿಕೆಯಲ್ಲಿ ವ್ಯತ್ಯಸ್ಥಗೊಳ್ಳುತ್ತವೆ. ಚಿತ್ರ ೧೯,೨೦,೩೧,೩೩ ಇವು ಒಂದೇ ಬಗೆಯಲ್ಲಿ ರೂಪುಗೊಂಡಿದ್ದು ಅಮೂರ್ತ ಬಗೆಯ ಅನುಭವ ಕಂಡುಬಂದರೆ, ಚಿತ್ರ ೩೩ರಲ್ಲಿ ಸ್ವಲ್ಪ ಮಟ್ಟದ ಭಿನ್ನತೆಯನ್ನು ಗಮನಿಸಬಹುದು. ಚಿತ್ರ ೧೦,೨೫ ಮತ್ತು ೩೦ ಒಂದೇ ಬಗೆಯ ವಿನ್ಯಾಸ, ತಂತ್ರಗಳಿಂದ ಏಕರೂಪವಾಗಿವೆ. ಚಿತ್ರ ೭ ಮತ್ತು ೧೫ ವರ್ಣಗಾರಿಕೆಯಲ್ಲಿ ಏಕರೂಪತೆ ಕಂಡುಬಂದರೆ ಆಕಾರಗಳಲ್ಲಿ ಅಮೂರ್ತ ಮತ್ತು ಮೂರ್ತ ಭಾವ ಪ್ರಕಟವಾಗುತ್ತದೆ. ಚಿತ್ರ ೧ರಂತೆ ರಚನಾ ತಂತ್ರವನ್ನು ಹೊಂದಿದ ಕಲಾಕೃತಿ ಚಿತ್ರ ೧೪ ಸಹ ಒಂದಾಗಿದ್ದು, ವಿಷಯಗಳಲ್ಲಿ ಭಿನ್ನತೆ ಇದೆ. ಅಂದರೆ ಜಡತ್ವ ಮತ್ತು ಹಗುರದ ಭಾವ ಪ್ರಕಟವಾಗುತ್ತದೆ. ಚಿತ್ರ ೧೮ ಮತ್ತು ೨೩ ವರ್ಣಗಾರಿಕೆಯಲ್ಲಿ ಒಂದೇ ಬಗೆಯಾಗಿದ್ದರೂ ಎರಡರ ವಿಷಯಗಳು ಭಿನ್ನವಾಗಿ ಪ್ರಕಟವಾಗಿವೆ. ಮತ್ಸ್ಯ (ಚಿತ್ರ ೨೨) ಸರಣಿಯಲ್ಲಿ ಕಂಡು ಬರುವ ಆಕಾರಗಳು ಚಿತ್ರ ೨೪ರಲ್ಲಿ ಪುನರಾವರ್ತನೆಯಾಗಿದ್ದರೂ, ಮಸುಕಾಗಿ ಗೋಚರವಾಗುತ್ತವೆ. ಚಿತ್ರ ೩೪ ಇಲ್ಲಿನ ಯಾವುದೇ ಕೃತಿಗಳಿಗೂ ಹೋಲಿಕೆಯಾಗದೇ, ವಿಭಿನ್ನ ನೆಲೆಯ ತಂತ್ರಗಾರಿಕೆ, ವರ್ಣಗಾರಿಕೆಗಳಲ್ಲಿ ವಿಭಿನ್ನತೆಯನ್ನು ಸಾಧಿಸುತ್ತದೆ.

ಹೀಗೆ ಹಿರೇಗೌಡರ ಇಲ್ಲಿನ ವರ್ಣಚಿತ್ರಗಳಲ್ಲಿ ಬಹುತೇಕವಾಗಿ ಪ್ರಖರ ವರ್ಣಗಳನ್ನೇ ದುಡಿಸಿಕೊಂಡಿದ್ದರೂ, ಅವುಗಳನ್ನು ವಿವಿಧ ಶ್ರೇಣಿಗಳನ್ನಾಗಿ ಬಳಸುವ ವಿಧಾನವನ್ನು ಇಲ್ಲಿ ಅನುಸರಿಸಿದ್ದಾರೆ. ಬಹಳಷ್ಟು ಕೃತಿಗಳ ಹಿನ್ನೆಲೆಯಲ್ಲಿ ಲಂಬವಾಗಿ, ಅಡ್ಡಲಾಗಿ ಮತ್ತು ಓರೆ ಕೋರೆಯಾಗಿ ಪಟ್ಟಿಕೆಗಳನ್ನು ಮೋಟೀವ್ಸನಂತೆ ಬಳಸಿಕೊಂಡಿದ್ದು, ಅವುಗಳನ್ನು ಬಹುತೇಕವಾಗಿ ಮಸುಕಾಗಿಸಿ ಇಲ್ಲವೇ ಮುಖ್ಯ ಆಕೃತಿಯ ಭಾಗವಾಗಿ ದುಡಿಸಿಕೊಂಡಿರುವ ಬಗೆಯನ್ನು ಕಾಣಬಹುದು. ವರ್ಣಗಾರಿಕೆಯಲ್ಲಿ ಹಿರೇಗೌಡರು ಕೆಲವು ಕಲಾಕೃತಿಗಳಲ್ಲಿ ಇಂಪ್ಯಾಸ್ಟೋ ತಂತ್ರಗಾರಿಕೆಯನ್ನು

ಬಳಸಿಕೊಂಡರೆ ಇನ್ನು ಕೆಲವು ಕಲಾಕೃತಿಗಳಲ್ಲಿ ಡ್ರೈ ಬ್ರಶ್ ತಂತ್ರದಿಂದ ಪಾರದರ್ಶಕ ವರ್ಣಗಾರಿಕೆಯನ್ನು ಬಳಸಿಕೊಂಡಿದ್ದಾರೆ. ಬೀಸುವಿಕೆಗಳ ಹಿನ್ನೆಲೆಯಲ್ಲಿ ಇಲ್ಲಿನ ಕಲಾಕೃತಿಗಳನ್ನು ಗಮನಿಸಿದರೆ ಕೆಲವು ಕಲಾಕೃತಿಗಲ್ಲಿ ದಟ್ಟತೆಯನ್ನೇ ಪ್ರಧಾನವಾಗಿಸಿಕೊಂಡರೆ, ಇನ್ನು ಕೆಲವು ಕಲಾಕೃತಿಗಳಲ್ಲಿ ಸೂಕ್ಷ್ಮಗೊಳಿಸುತ್ತಾರೆ. ಬಹುತೇಕ ಕಲಾಕೃತಿಗಳಲ್ಲಿ ಕ್ಯಾನ್ವಾಸಿನ ಮೈವಳಿಕೆಯನ್ನು ವರ್ಣಲೇಪನದ ಭಾಗವಾಗಿ ದುಡಿಸಿಕೊಂಡಿರುವುದನ್ನು ಕಾಣಬಹುದಾಗಿದೆ.

ಕಲಾಕೃತಿಗಳ ವಸ್ತು-ವಿಷಯದ ಕುರಿತು ಹೇಳುವುದಾದರೆ, ಹಿರೇಗೌಡರು ಇಲ್ಲಿ ಭೌತಿಕ ಕ್ರಿಯೆಗಳು, ಕೌಟುಂಬಿಕ, ಸಾಮಾಜಿಕ, ಭಯೋತ್ಪಾದನೆ, ಧಾರ್ಮಿಕ, ರಾಜಕೀಯ ಹೀಗೆ ಹಲವಾರು ವಿಷಯಗಳನ್ನು ಆಧರಿಸಿ ಕಲಾಕೃತಿಗಳನ್ನು ರಚಿಸಿದ್ದಾರೆ. ಹೀಗೆ ರಚಿಸಿದ ಚಿತ್ರಗಳಲ್ಲಿ ಆಯಾ ಕಲಾಕೃತಿಯ ವಿಷಯಕ್ಕೆ ಮತ್ತು ರೂಪಗಳಿಗೆ ಪೂರಕವಾಗಿಯೇ ತಂತ್ರಗಾರಿಕೆಯನ್ನು ಮತ್ತು ಬೀಸುವಿಕೆಗಳನ್ನು ದುಡಿಸಿಕೊಂಡಿರುವದನ್ನು ಸಹ ಕಾಣಬಹುದಾಗಿದೆ. ಇಂತಹ ವೈವಿಧ್ಯಮಯ ನೆಲೆಯಲ್ಲಿ ರಚಿಸಿದ ಇಲ್ಲಿನ ಕೃತಿಗಳು ಅವರ ಪ್ರಯೋಗಶೀಲತೆ ಆಸಕ್ತಿಯನ್ನು ಹಾಗೂ ಅನ್ವೇಷಣಾ ಬುದ್ಧಿಯನ್ನೂ ಪ್ರತಿನಿಧಿಸುತ್ತವೆ ಎಂದು ಉಲ್ಲೇಖಿಸುವುದರೊಂದಿಗೆ ಈ ಉಪ ಅಧ್ಯಾಯವನ್ನು ಸಮಾರೋಪಿಸಬಹುದಾಗಿದೆ.

*******

**ಶೈಲೀಕೃತ ಸಂಯೋಜನೆಗಳು** (ತೈಲವರ್ಣ)

ಇಲ್ಲಿನ ಚಿತ್ರಗಳು ಬಹುತೇಕ ವಾಗಿ ಹಿರೇಗೌಡರ ಎಂದಿನ ಶೈಲಿಯಾದ ರಮಣೀಯ ನೆಲೆಯಲ್ಲಿ ರಚನೆಗೊಂಡಿರುವಂಥವು. ಅತ್ಯಂತ ವಿವರವಾದ ಮೂರ್ತ ರಚನೆ, ಅದಕ್ಕೆ ಪೂರಕವಾದ ವಸ್ತುಗಳ, ಹಿನ್ನೆಲೆಯ ಚಿತ್ರಣಗಳೆಲ್ಲವೂ ಸಾಮಾನ್ಯರನ್ನು ಸಂತೋಷಗೊಳಿಸುವ ಕ್ರಿಯೆಯನ್ನು ಹೊಂದಿವೆ. ಹಿರೇಗೌಡರು ರಚಿಸಿದ ಇಂತಹ ಕೆಲವು ಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

**೧. ಚೇತನ** (೧೯೭೬)

ಇದೊಂದು ಅತಿಥಿಗೃಹಕ್ಕಾಗಿ ನಿರ್ಮಾಣಗೊಂಡ ವಿಶೇಷ ಚಿತ್ರ. ಇದರ ಶೈಲಿ ಸಂಪೂರ್ಣ ಪಾಶ್ಚಾತ್ಯ ನೈಜ ಶೈಲಿಯಲ್ಲಿ, ವಿಶೇಷ ಬೆಳಕಿನ ಹಿನ್ನೆಲೆಯಲ್ಲಿ ಚಿತ್ರೀಕರಣಗೊಂಡಿದೆ. ಮುಂಚೂಣಿಯಲ್ಲಿರುವ ಸೇವಾ ನಿರತ ಯುವತಿಯ ಭಂಗಿ ಮತ್ತು ಮುಖಭಾವ, ಧರಿಸಿದ ಬಟ್ಟೆಯ ನವಿರಾದ ವಿನ್ಯಾಸ, ಸೀರೆಯ ಸೆರಗು ಹಾರಾಡುವ ರೀತಿ, ಸೇವಾ ತಟ್ಟೆಯಲ್ಲಿರಿಸಿದ ನೀರಿನಹೂಜಿ, ಕಾಫಿ, ಚಹದ ಕಪ್ಪುಗಳು ಉತ್ತಮ ನೆರಳು ಬೆಳಕಿನ ತಂತ್ರದಿಂದ ಕೂಡಿವೆ. ಮೆಟ್ಟಿಲಿನ ಕೆಳಗೆ ಇರಿಸಿದ ತೆಂಗಿನ ಫುಟ್‌ಮ್ಯಾಟ್, ನೆರಳು ಬೆಳಕಿನ ವಶೇಷತೆಯೊಂದಿಗೆ ಸಂಯೋಜನೆಗೊಂಡು ರಚಿಸಲ್ಪಟ್ಟಿದೆ. ಹಾಗೆಯೇ ಮೆಟ್ಟಿಲಿನ ರಚನೆ, ಕಿಟಕಿಯಲ್ಲಿ ನಿಂತಿರುವ ತಾಯಿ ಮಗು ಮತ್ತು ಹೂವಿನ ಕುಂಡಲ ಹಾಗೂ ಛಾಯಾ ಸಂಯೋಜನೆ ಫೋಟೋ ರಿಯಾಲಿಸ್ಟಿಕ್ ಶೈಲಿಯ ಭಾವವನ್ನು ಸ್ಫುರಿಸುವಲ್ಲಿ ಯಶಸ್ವಿಯಾಗಿದೆ. ಮುಂಜಾನೆಯ ಚೆಂಬೆಳಕಿನ ವಾತಾವರಣ ಈ ಚಿತ್ರದಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತದೆ. ಇಂತಹ ಶುಭ್ರ ಬೆಳಕಿನಲ್ಲಿ ಮನೆಯ ಒಳಾವರಣದಲ್ಲಿ ತಾಯಿ–ಮಗುವಿನ ಚಿತ್ರ ರಚನೆಯಾಗಿದೆ. ಪ್ರಧಾನ ಆಕೃತಿ ಶುಭ್ರ ವಸ್ತ್ರಧಾರಿಯಂತೆ ಚಿತ್ರಿಸಿರುವ ಹಿರೇಗೌಡರು ಹಿನ್ನೆಲೆ-ಮುನ್ನೆಲೆಗಳು ವ್ಯತ್ಯಸ್ಥಗೊಳ್ಳುವ ಬಗೆ ಇಲ್ಲಿದೆ. ಸೇವಾರ್ಥಿ ಕೈಯಲ್ಲಿ ಹಿಡಿದಿರುವ ತಟ್ಟೆಯಲ್ಲಿ ಹೂಜಿಗಳು



೨. ಮಂದಾಕಿನಿ, ೧೯೯೮



೩. ಸ್ಥಿರ ಚಿತ್ರಣ, ೧೯೯೮

ಮತ್ತಿತರ ವಸ್ತುಗಳನ್ನು ಸೂಕ್ಷ್ಮವಾದ ಪಾರದರ್ಶಕ ಹಾಗೂ ಅಪಾರದರ್ಶಕ ತಂತ್ರದಿಂದ ರಚಿಸಿದ್ದಾರೆ. ಈ ಕೃತಿಯಲ್ಲಿ ಹೂವಿನ ಕುಂಡಗಳನ್ನು ಮತ್ತು ಗೋಡೆಗೆ ತೂಗು ಹಾಕಿರುವ ಹೂವಿನ ವಿನ್ಯಾಸವನ್ನು ಮಂದಬೆಳಕಿನ ಹಿನ್ನೆಲೆಯಲ್ಲಿ ರಚಿಸಿದ್ದಾರೆ. ಮುಖ್ಯ ಆಕೃತಿಯನ್ನು ಅವಕಾಶದ ಎಡಭಾಗಕ್ಕೆ ರಚಿಸಿದ್ದರೂ ಅವಳ ದೃಷ್ಟಿ ತಾಯಿ-ಮಗುವಿನತ್ತ ಹರಿದಿರುವುದರಿಂದ ಇಡೀ ಅವಕಾಶವನ್ನು ಹಿರೇಗೌಡರು ನೈಜ ನೆಲೆಯಲ್ಲಿ ದುಡಿಸಿಕೊಂಡ ಕೃತಿಯಾಗಿದೆ.

೨. ಮಂದಾಕಿನಿ (೧೯೯೮)

ಇದು ಶೈಲೀಕೃತ ಆಧುನಿಕ ಸಂಯೋಜನೆಯಾಗಿದ್ದು ಸೌಮ್ಯ ವರ್ಣ, ಛಾಯಾ ರಚನೆ ಎಂದು ಹೇಳಬಹುದಾಗಿದೆ ಇದರಲ್ಲಿ ರಚಿತವಾಗಿರುವ ಯುವತಿಯ ಬಹುತೇಕ ಅಂಗ ಪ್ರಮಾಣಗಳು ನೈಜ ಪ್ರಮಾಣದ ಎರಡರಷ್ಟು ಉದ್ದವಾಗಿವೆ. ಒಂದು ಕೈಯಲ್ಲಿ ಹೂವಿನ ತಟ್ಟೆ ಇನ್ನೊಂದು ಕೈಯಲ್ಲಿ ಹೂವಿನ ಗುಚ್ಛ ಇವೆಲ್ಲವೂ ನೈಜವಾಗಿ ರೂಪಗೊಂಡಿವೆ. ಈ ಚಿತ್ರದ ಸೌಮ್ಯ ಕಂದು ವರ್ಣದ ಸಂಯೋಜನೆ ಆಕರ್ಷಕವೆನಿಸುತ್ತದೆ. ಬಹು ಅಲ್ಪ ವರ್ಣಗಳ ಸಾಂಗತ್ಯದಿಂದ ರಚಿಸಿದ ಕಲಾಕೃತಿ ಇದು. ಚಿತ್ರ ೧ರಂತೆ ವರ್ಣ ನಿರ್ವಹಣೆ ಮತ್ತು ರಚನಾ ತಂತ್ರಗಾರಿಕೆ ಇಲ್ಲಿ ಗೌಣವಾಗಿದ್ದು, ಸೃಜನಾತ್ಮಕ ನೆಲೆಯ ಶೈಲೀಕೃತ ಆಕಾರಗಳೇ ಈ ಕೃತಿಯ ಜೀವಾಳ. ಅವಕಾಶದ ಎಡಭಾಗದಲ್ಲಿ ಆಕೃತಿಯನ್ನು ಪ್ರಧಾನಗೊಳಿಸಿ, ಬೆನ್ನಿನ ಭಾಗವನ್ನು ತೋರಿಸಿ, ದೃಷ್ಟಿಯನ್ನು ಮುಮ್ಮುಖವಾಗಿಸುವ ಆಶಯದಿಂದ ಇಡೀ ಕೃತಿಯ ಸಂಯೋಜನೆ ವಿಂಗಡನೆಯಾಗಿದೆ. ಸ್ತ್ರೀ ಶರೀರದ ಬಳುಕುವಿಕೆ, ಸೌಂದರ್ಯ, ಹಾವಭಾವ ನೋಡುಗನನ್ನು ಉದ್ದೀಪನದ ಆಳಕ್ಕೆ ತೆಗೆದುಕೊಂಡು ಹೋಗಿದೆ. ಕುಂಚದ ಬೀಸುವಿಕೆಗಳಿಂದ ಹಿರೇಗೌಡರ ಎಂದಿನ ಜ್ಯಾಮಿತಿಕ ವಿನ್ಯಾಸಗಳು ಹಿನ್ನೆಲೆಯಲ್ಲಿ ತುಂಬ ಮಸುಕಾಗಿ ಮೂಡಿದ್ದು, ಆಕೃತಿಯ ಭಾವಕ್ಕೆ ಪೂರಕವಾದ ವಾತಾವರಣ ರಾತ್ರಿಯ ಸಂದರ್ಭದ ಶಯನಗೃಹವನ್ನು ನೆನೆಪಿಸುವುದಕ್ಕೆ ಹಿನ್ನೆಲೆಯಲ್ಲಿ ಮಸುಕಾಗಿ ಪುರುಷ ಆಕೃತಿ ಅರೆನಗ್ನ ಸ್ಥಿತಿಯಲ್ಲಿ ರಚಿತಗೊಂಡಿದೆ. ಹೀಗಾಗಿ ಸ್ತ್ರೀ-ಪುರುಷರ ಲೈಂಗಿಕ ಕ್ರಿಯೆಯನ್ನು ಪ್ರತಿನಿಧಿಸುವುದಕ್ಕೆ ಪೂರಕವಾಗಿ, ಕಂದು ವರ್ಣದ ವಿವಿಧ ಶ್ರೇಣಿಯಲ್ಲಿ ರಚನೆಗೊಂಡ ಈ ಕಲಾಕೃತಿಯಲ್ಲಿ ವರ್ಣ ಸಂಯೋಜನೆ ಮಂದಸ್ಮಿತ ಭಾವವನ್ನು ಸೃಷ್ಟಿಸುತ್ತದೆ.

೩. ಸ್ಥಿರ ಚಿತ್ರಣ (೧೯೯೮)

ಪ್ರಸ್ತುತ ಸ್ಥಿರ ಚಿತ್ರಣ ಸಂಪೂರ್ಣ ಶೈಕ್ಷಣಿಕ ಪದ್ಧತಿಯಲ್ಲಿ ರಚಿತಗೊಂಡಿದೆ. ಇದರಲ್ಲಿ ಬಳಸಿಕೊಂಡಿರುವ ಹಿನ್ನೆಲೆಯ ಮತ್ತು ಮುನ್ನೆಲೆಯ ಪರದೆ, ಹೂದಾನಿ, ಅದರ ಪಕ್ಕದಲ್ಲಿರುವ ಪಿಂಗಾಣಿ ತಟ್ಟೆ ಹಾಗೂ ಕಿಟಕಿಯಿಂದ ತೂರಿ ಬಂದ ಮಂದ ಬೆಳಕು ಇವೆಲ್ಲವೂ ನೈಜ ಕಲ್ಪನೆಗೆ ಪೂರಕವಾಗಿ ವಸ್ತು ವಿಷಯದ ಮೇಲೆ ಸೌಮ್ಯ ಭಾವವನ್ನು ಎತ್ತಿ ಹಿಡಿದಿವೆ ಅದಕ್ಕಿಂತ ಹೆಚ್ಚಾಗಿ ಪರದೆಯಲ್ಲಿ ಮೂಡಿ ಬಂದ ನರಿಗೆಗಳು ಮತ್ತು ವಿನ್ಯಾಸಗಳು ಒಟ್ಟು ಚಿತ್ರಕ್ಕೆ ಜೀವಂತಿಕೆ ಹಾಗೂ ಸಂಚಲನೆಯನ್ನು ತಂದು ಕೊಟ್ಟಿದೆ. ಚಿತ್ರ ೨ರ ವರ್ಣವಿನ್ಯಾಸವನ್ನೇ ನೆನಪಿಸುವ ಇಲ್ಲಿನ ವರ್ಣಗಾರಿಕೆ



೪. ಸ್ಥಿರ ಚಿತ್ರಣ. ೧೯೯೮

ಬೆಳಕಿನ ಪರಿಣಾಮಗಳಿಂದ ವಸ್ತುಗಳಲ್ಲಿ ಉಂಟಾಗುವ ಏರಿಳಿತಗಳನ್ನು, ಅವು ರೂಪಾಂತರಗೊಳ್ಳುವುದನ್ನು ಈ ಕೃತಿಯಲ್ಲಿ ಕಾಣಬಹುದು. ನೈಜ ನೆಲೆಯಲ್ಲಿ ಚಿತ್ರಿಸಿರುವ ಹಿರೇಗೌಡರು ಅವಕಾಶದ ಎಡ ಅರ್ಧ ಭಾಗದಲ್ಲಿ ಹೂವಿನ ಕುಂಡವನ್ನೂ, ಅದಕ್ಕೆ ಪೂರಕವಾದ ಬಟ್ಟೆಯನ್ನು ಅವಕಾಶದ ಬಹುಭಾಗದಲ್ಲಿ ಸಂಯೋಜಿಸಿದ್ದಾರೆ. ಹಿನ್ನೆಲೆಯಲ್ಲಿ ಪ್ರಖರ ಬೆಳಕಿನ ಛಾಯೆಯನ್ನು ಸೃಷ್ಟಿಸಿ ಮುನ್ನೆಲೆಯಲ್ಲಿ ಹಳದಿ ವರ್ಣದ ಹೂವಿನ ವಿನ್ಯಾಸಗಳನ್ನು ರಚಿಸಿದ್ದಾರೆ. ಇಡೀ ಚಿತ್ರದ ಸಾಮಾನ್ಯ ನೋಡುಗನನ್ನು ಆಕರ್ಷಿಸುವುದು ಇಲ್ಲಿನ ಬಟ್ಟೆಯ ರಚನೆ. ನೆರಳು ಬೆಳಕಿನ ಛಾಯೆಗಳನ್ನು ಪರಿಪಕ್ವವಾಗಿ ಅಭ್ಯಸಿಸಿ, ಯಥಾವತ್ತಾಗಿ ಚಿತ್ರಿಸಿರುವ ಹಿರೇಗೌಡರು ಈ ಕೃತಿಯನ್ನು ಕಲಿಕಾರ್ಥಿಗಳಿಗೆ ಮಾದರಿ ಎಂಬಂತೆ ರಚಿಸಿದ್ದಾರೆ.

**೪. ಸ್ಥಿರ ಚಿತ್ರಣ (೧೯೯೮)**

ಈ ಸ್ಥಿರ ಚಿತ್ರಣ ಒಂದು ವಿಶಿಷ್ಟವಾದ ಫೋಟೋರಿಯಾಲಿಸ್ಟಿಕ್ ಶೈಲಿಯ ಅನುಭವ ನೀಡಬಲ್ಲ ಒಂದು ಚಿತ್ರ. ಇದರ ಸಂಯೋಜನಾ ತಂತ್ರ ಒಂದು ರೀತಿಯಲ್ಲಿ ವಿನೂತನವೆಂದು ಹೇಳುವ ಹಿನ್ನೆಲೆಯಲ್ಲಿ, ಈ ಚಿತ್ರದ ವಸ್ತು ಸಂಯೋಜನೆ ಒಟ್ಟು ಚಿತ್ರದ ಕಾಲು ಭಾಗ ಒಳಾಂಗಣದಿಂದ ಕೂಡಿದೆ ಮತ್ತು ಮುಕ್ಕಾಲು ಭಾಗ ಹೊರಾಂಗಣದಿಂದ ಕೂಡಿದ್ದು ಮಂಜಿನಿಂದ ಆವರಿಸಿಕೊಂಡಿದೆ. ಈ ಕೃತಿಯಲ್ಲಿ ಎರಡು ಪ್ರಮುಖ ವರ್ಣಗಳು ನೈಜನೆಲೆಯ ರೂಪಗಳಿಗೆ ಕಾರಣವಾಗಿವೆ. ಒಂದು ನೀಲಿವರ್ಣ ಹೂಜಿಯ ರೂಪುಗೊಳಿಸಿದ್ದರೆ, ಕೇಸರಿ ವರ್ಣ ಮೇಜಿನ ಮೇಲಿನ ಬಟ್ಟೆಯನ್ನು ರೂಪುಗೊಳಿಸಿದೆ. ಇದಕ್ಕೆ ಪೂರಕವಾಗಿ ಹಿನ್ನೆಲೆಯಲ್ಲಿ ಕಟಾಂಜನ, ಮಸುಕಾಗಿ ಚಿತ್ರಿತಗೊಂಡ ಹೂವಿನ ಕುಂಡ, ಮೇಲಿನಿಂದ ತೂಗು ಹಾಕಿದ ಹೂವಿನ ಕುಂಡ, ಇವುಗಳ ಹಿನ್ನೆಲೆಯಲ್ಲಿ ಮುಂಬೈ ನಗರಬದುಕಿನ ಗಗನಚುಂಬಿ ಕಟ್ಟಡಗಳು ಮಸುಕಾಗಿ ಗೋಚರವಾಗುತ್ತವೆ. ಈ ರಚನೆಗಳನ್ನು ಗಮನಿಸಿದರೆ, ಮನೆಯ ಬಾಲ್ಕನಿಯಲ್ಲಿನ ವಸ್ತುಗಳನ್ನು ಚಿತ್ರಿಸಿದ ಬಗೆ, ಹೊರ ಪರಿಸರವನ್ನು ಹಿನ್ನೆಲೆಯಾಗಿಸಿಕೊಂಡದ್ದು, ನೆರಳು ಬೆಳಕಿನ ಛಾಯೆಗಳನ್ನು ದುಡಿಸಿಕೊಂಡು ವಸ್ತುಗಳನ್ನು ಪ್ರಬುದ್ಧವಾಗಿ ಸಂಯೋಗೊಳಿಸಿದ ನೆಲೆಯಲ್ಲಿ ಈ ಕೃತಿ ರಚನೆಯಾಗಿದೆ.

**ಧಾರ್ಮಿಕ ಚಿತ್ರಗಳು**

೧. ಚೇಳ್ಳಗುರ್ಕಿ ಸಮೀಪವಿರುವ ಬೆಟ್ಟವೊಂದರಲ್ಲಿ ಧ್ಯಾನಾಸಕ್ತರಾಗಿರುವ ಶ್ರೀಎರ್ರಿತಾತನವರು.

೨. ಶ್ರೀ ಎರ್ರಿತಾತನವರನ್ನು ಚೇಳ್ಳಗುರ್ಕಿ ಗ್ರಾಮಕ್ಕೆ ಭಕ್ತಾಧಿಗಳು ಸ್ವಾಗತಿಸುತ್ತಿರುವದು.

೩. ಶ್ರೀ ಎರ್ರಿ ತಾತನವರು ದೇವಸ್ಥಾನದಲ್ಲಿನ ಕಲ್ಲಿನ ನಂದಿಗೆ ಚಲನೆ ನೀಡಿದ ದೃಶ್ಯ.

೪. ಶ್ರೀ ಎರ್ರಿ ತಾತನವರು ಸತ್ತ ಎಮ್ಮೆ ಕರುವಿಗೆ ಪುನರ್ ಜನ್ಮನೀಡಿದ ದೃಶ್ಯ.

೫. ಶ್ರೀ ಎರ್ರಿ ತಾತನವರು ಕುರಿ ಗಾಹಿಗೆ ಚಿನ್ನದ ಹಾವನ್ನು ನೀಡಿದ ದೃಶ್ಯ.

೬. ಧ್ಯಾನಸ್ಥ ಶ್ರೀ ಎರ್ರಿ ತಾತನವರ ಮೇಲೆ ಕಿಡಿಗೇಡಿಗಳು ದಾಳಿಮಾಡುತ್ತಿರುವ ದೃಶ್ಯ.

ಈ ಮೇಲೆ ಹೇಳಿರುವ ಆರು ಚಿತ್ರಗಳು ಚೇಳ್ಳಗುರ್ಕಿ ಎರಿತಾತನವರ ಕುರಿತಾದ ಧಾರ್ಮಿಕ ಚಿತ್ರಗಳು. ಈಗ ಇವರು ಜೀವ ಸಮಾಧಿಯಲ್ಲಿದ್ದಾರೆ. ಇವರ ಜೀವಿತ ಕಾಲದಲ್ಲಿ ಭಕ್ತಾದಿಗಳ



೧. ಚೆಳ್ಳಗುರ್ಕಿ ಸಮೀಪವಿರುವ ಬೆಟ್ಟವೊಂದರಲ್ಲಿ ಧ್ಯಾನಸ್ಥರಾಗಿರುವ ಶ್ರೀ ಎರ್ರಿತಾತನವರು.



೨. ಶ್ರೀ ಎರ್ರಿತಾತನವರನ್ನು ಚೆಳ್ಳಗುರ್ಕಿ ಗ್ರಾಮಕ್ಕೆ ಭಕ್ತಾದಿಗಳು ಸ್ವಾಗತಿಸುತ್ತಿರುವುದು.



೩. ಶ್ರೀ ಎರ್ರಿತಾತನವರು ದೇವಸ್ಥಾನದಲ್ಲಿನ ಕಲ್ಲಿನ ನಂದಿಗೆ ಚಲನೆ ನೀಡಿದ ದೃಶ್ಯ.



೪. ಶ್ರೀ ಎರ್ರಿತಾತನವರು ಸತ್ತ ಎಮ್ಮೆಕರುವಿಗೆ ಪುನರ್‌ಜನ್ಮ ನೀಡಿದ ದೃಶ್ಯ.



೫. ಶ್ರೀ ಎರ್ರಿತಾತನವರು ಕುರಿಗಾಹಿಗೆ ಚಿನ್ನದ ಹಾವನ್ನು ನೀಡುತ್ತಿರುವುದು.



೬. ಧ್ಯಾನಸ್ಥ ಶ್ರೀ ಎರ್ರಿತಾತನವರ ಮೇಲೆ ಕಿಡಿಗೇಡಿಗಳು ದಾಳಿ ಮಾಡುತ್ತಿರುವ ದೃಶ್ಯ.

ಹಿತಕ್ಕಾಗಿ ಅವರು ಮಾಡಿದ ಪವಾಡಗಳೆಂದು ಹೇಳಬಹುದಾದ ಘಟನಾವಳಿಗಳಾಗಿವೆ. ಈ ಎಲ್ಲ ಚಿತ್ರಗಳ ನಿರ್ವಹಣೆ ವಸ್ತು-ಸ್ಥಿತಿಗನುಸಾರವಾಗಿ ನೈಜ ಶೈಲಿಯದವುಗಳಾಗಿವೆ. ಚಿತ್ರಗಳು ನೈಜ ಸ್ವರೂಪದವುಗಳಾದರೂ ಚಿತ್ರದ ಸಂಯೋಜನೆ ಮಾತ್ರ ಕಾಲ್ಪನಿಕ ಹಾಗೂ ಸೃಜನಾತ್ಮಕವಾದವುಗಳಾಗಿವೆ. ಸೃಜನಶೀಲತೆ, ರಚನಾ ಕೌಶಲ್ಯ, ವಿಷಯಾಧಾರಿತ ವಸ್ತು ವಿಷಯಕ್ಕೆ ನೀಡಿದ ವರ್ಣ ಹಾಗೂ ಛಾಯಾ ಸಂಯೋಜನೆ ಕಲ್ಪನೆ ಪ್ರಮುಖವಾಗಿವೆ. ನೈಜತೆಯ ಭ್ರಮೆಗೆ ಪೂರ್ಣ ಮಟ್ಟದಲ್ಲಿ ನ್ಯಾಯ ಒದಗಿಸಿದೆ.

ಚಿತ್ರ ೧, ೨, ೪ ಮತ್ತು ೫ ಹೊರಾಂಗಣ ವಾತಾವರಣದಲ್ಲಿ ರಚಿಸಿದ ಚಿತ್ರಗಳಾಗಿದ್ದು, ಅದಕ್ಕೆ ಪೂರಕವಾಗಿ ಮರಗಿಡಗಳನ್ನು, ವಾಸ್ತುಗಳನ್ನು ಇಲ್ಲಿ ದುಡಿಸಿಕೊಳ್ಳಲಾಗಿದೆ. ಯರ್ರಿತಾತನವರನ್ನು ನಾಲ್ಕೂ ಕಲಾಕೃತಿಗಳಲ್ಲಿ ಒಂದೇ ಹೋಲಿಕೆ ಬರುವಂತೆ ಚಿತ್ರಿಸಿದ್ದು, ಕಾಲ್ಪನಿಕತೆಯನ್ನು ದೃಶ್ಯಾತ್ಮಕವಾಗಿ ಬಿಂಬಿಸುವಲ್ಲಿ ಈ ಬಗೆಯ ಪ್ರೌಢಿಮೆ ಅಗತ್ಯವೆನಿಸುತ್ತದೆ. ಇಲ್ಲಿ ಭಕ್ತಾದಿಗಳು ವಿವಿಧ ಭಂಗಿಗಳಲ್ಲಿ ರಚನೆಗೊಂಡಿದ್ದು ಅವರಲ್ಲಿ ಭಕ್ತಿ ಕಳೆಯನ್ನು ಪ್ರಬುದ್ಧವಾಗಿ ತೋರ್ಪಡಿಸಿರುವ ಹಿರೇಗೌಡರು, ಎಂದಿನ ಸಾಂಪ್ರದಾಯಿಕ ಸಂಯೋಜನಾ ಕ್ರಮವನ್ನೇ ಇಲ್ಲಿ ದುಡಿಸಿಕೊಂಡಿದ್ದಾರೆ. ಪ್ರಖರ ವರ್ಣದಲ್ಲಿ ಯರ್ರಿತಾತನವರು ಮಾತ್ರ ಗೋಚರವಾದರೆ ಇತರೆ ಆಕೃತಿಗಳಲ್ಲಿ ದ್ವಿತೀಯ, ತೃತೀಯ, ಚುತುರ್ಥ ವರ್ಣಗಳ ಸಾಂಗತ್ಯ ಇಲ್ಲಿದೆ. ಅಷ್ಟೇ ಅಲ್ಲದೇ ಅಂದಿನ ಪರಿಸರಕ್ಕೆ, ಘಟನೆಗಳಿಗೆ ಪೂರಕವಾಗಿ ಪ್ರಾಣಿಗಳ, ಸರೀಸೃಪಗಳ ವಿನ್ಯಾಸಗಳನ್ನು ಸಹ ಕಲಾಕೃತಿಯ ಭಾಗವಾಗಿ ಸಂಯೋಜಿಸಿದ್ದಾರೆ.

ಚಿತ್ರ ೩ ಮತ್ತು ೬ ರಲ್ಲಿ ಒಳಾಂಗಣದ ಸನ್ನಿವೇಶಗಳನ್ನು ಯರ್ರಿತಾತನವರ ಆಕೃತಿಯನ್ನು ಪ್ರಧಾನವಾಗಿಸಿಕೊಂಡು ರಚಿಸಿದ್ದಾರೆ. ಒಳಾಂಗಣಕ್ಕೆ ಪೂರಕವಾದ ವಾತಾವರಣವನ್ನು ಪ್ರತಿನಿಧಿಸುವ ವರ್ಣಗಾರಿಕೆ, ಘಟನೆಗೆ ಸಂಬಂಧಿಸಿದಂತೆ ಮಾನವಾಕೃತಿಗಳ, ವಸ್ತುಗಳ ಸಂಯೋಜನೆಯನ್ನು ಎಂದಿನ ಸಾಂಪ್ರದಾಯಿಕ ಸಂಯೋಜನಾ ಪದ್ಧತಿಯುಲ್ಲೇ ರಚಿಸಿರುವ ಹಿರೇಗೌಡರು ಒಳಾಂಗಣದಲ್ಲಿ ಅಂದಿನ ಸಂದರ್ಭವನ್ನು ಬಿಂಬಿಸುವ ಹಾಗೆ ದಟ್ಟ ಛಾಯೆಯನ್ನು ಬಳಸಿಕೊಂಡಿದ್ದಾರೆ.

ಇಲ್ಲಿನ ಆರೂ ಚಿತ್ರಗಳು ಪ್ರತ್ಯೇಕವಾಗಿ ರಚನೆಯಾಗಿದ್ದರೂ ಸಹ ಆ ಕೃತಿಗಳಲ್ಲಿ ಯರ್ರಿತಾತನವರ ಮುಖದ ಗುಣಲಕ್ಷಣಗಳನ್ನು ಏಕರೂಪವಾಗಿಸಿಕೊಂಡ ಬಗೆ ಇದೆ. ಪ್ರತೀ ಆಕೃತಿಗಳಲ್ಲಿನ ವರ್ಣಗಾರಿಕೆ ಎಲ್ಲ ಕಲಾಕೃತಿಗಳಲ್ಲಿ ಅಲ್ಪಸ್ವಲ್ಪ ಪುನರಾವರ್ತನೆಗೊಂಡಿದೆ. ತುಂಬ ವಿವರಣಾತ್ಮಕ ನೆಲೆಯಲ್ಲಿ ಚಿತ್ರಿಸಿರುವ ಇಲ್ಲಿನ ನೈಜ ನೆಲೆಯ ಆಕೃತಿಗಳಲ್ಲಿ ಆಧುನಿಕ ಎನಿಸುವ ಪ್ರಖರ ಬೆಳಕಿನ ಬೀಸುಗಳ ಶರೀರದ ಉಬ್ಬು ಭಾಗಗಳಿಗೆ ಸ್ಪರ್ಶಾನುಭವ ನೀಡಿವೆ. ಹೀಗೆ ಸಾಮಾನ್ಯ ನೋಡುಗರನ್ನು ಗಮನದಲ್ಲಿರಿಸಿಕೊಂಡು ರಚಿಸಿದ ಇಲ್ಲಿನ ಕಲಾಕೃತಿಗಳಲ್ಲಿ ಭಾವ ಪರವಶತೆಯನ್ನು ಜತನದಿಂದ ಕಾಪಿಟ್ಟುಕೊಳ್ಳುವಲ್ಲಿ ಹಿರೇಗೌಡರು ಯಶಸ್ವಿಯಾಗಿದ್ದಾರೆ.

**ಉಪಸಂಹಾರ**

ಮೂರ್ತ ರೂಪದ ಕಲಾಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಚಿತ್ರ ೧ ಮತ್ತು ೪ ಒಂದೇ ಬಗೆಯ ರಚನಾ ತಂತ್ರದಿಂದ ಸೃಷ್ಟಿಯಾಗಿವೆ. ಚಿತ್ರ ೩ ಫೋಟೋಗ್ರಫಿಯ ಪರಿಣಾಮವನ್ನು ಬಿಂಬಿಸಿದರೆ, ಯರ್ರಿತಾತನವರ ಕೃತಿಗಳು ಸಾಮಾನ್ಯ ನೋಡುಗನನ್ನು ಗಮನದಲ್ಲಿರಿಸಿಕೊಂಡು ರಚಿತಗೊಂಡಿವೆ. ಆದರೆ ಇವೆಲ್ಲಕ್ಕಿಂತ ವಿಭಿನ್ನ ಕಲಾಕೃತಿ ಎಂದರೆ ಚಿತ್ರ ೨. ನೈಜತೆಯನ್ನು ಆಧುನಿಕ ಎಂಬಂತೆ ರೂಪಾಂತರಿಸಿರುವುದರಿಂದ ರಚನಾ ಶೈಲಿ ಮತ್ತು ವಿಷಯದ ಕಾರಣವಾಗಿ ಅನನ್ಯ ಎನಿಸುತ್ತವೆ.

********

೫:೪. ಡ್ರೈ ಪೇಸ್ಟಲ್

೧. ಖುರ್ಚಿ (೧೯೮೨)

ಇದೊಂದು ಜ್ಯಾಮಿತಿಕ ಆಕಾರಗಳನ್ನು ಉಪಯೋಗಿಸಿ ಖುರ್ಚಿ ಭಾವವನ್ನು ರಚಿಸಿದ ಸಾಮಾನ್ಯ ಪ್ರಯೋಗವಾಗಿದೆ ಹಾಗೂ ಇದರ ವರ್ಣ ಸಂಯೋಜನೆಯು ಸಹ ಕ್ಲಿಷ್ಟಕರವಾದ ದ್ವಿಯಾಮ ಸ್ವರೂಪದ್ದಾಗಿದೆ. ಈ ಕೃತಿ ಕೇವಲ ಮೇಲ್ನೋಟದ ಖುರ್ಚಿ ಎಂಬ ವಾಸ್ತವಾಂಶವನ್ನು ತಿಳಿಸುವುದಲ್ಲ ಎಂಬುದನ್ನು ಅರಿಯಬೇಕು. ಇಲ್ಲಿ ಖುರ್ಚಿ ಎಂಬುದು ಕೇವಲ ಕುಳಿತುಕೊಳ್ಳಲು ಉಪಯೋಗಿಸುವ ಆಸನವಲ್ಲ. ಇದಕ್ಕೊಂದು ವಿಶೇಷ ಅರ್ಥವಿದೆ ಎಂಬ ಕಾರಣದಿಂದಲೇ ಖುರ್ಚಿಯ ಆಸನಕ್ಕೆ ಕೆಂಪು ವರ್ಣದ ಸಂಕೇತ ನೀಡಲಾಗಿದೆ. ಅಂದರೆ ಈ ಆಸನ ಶಕ್ತಿ ಕೇಂದ್ರ, ಅಧಿಕಾರ ಮಾನ್ಯತೆಯನ್ನು ಪಡೆದ ಸ್ಥಳವೆಂದು ಭಾವಿಸಬೇಕಾಗಿದ್ದು ಪ್ರಮುಖ ಅಂಶವಾಗಿದೆ. ಅಂತೆಯೇ ಇದಕ್ಕೆ ಸಿಂಹಾಸನವೆಂದೂ ಕರೆಯಲಾಗಿದೆ. ಅಂದರೆ ಅರಸೊತ್ತಿಗೆ ನಡೆಸಿಕೊಂಡು ಜನೋಪಯೋಗಿ ಕಾರ್ಯ ನಿರ್ವಹಿಸುವ ಕೇಂದ್ರ ಸ್ಥಳವೆಂದೂ, ಹಾಗೂ ಬಹು ಮುಖ್ಯವಾಗಿ ಪ್ರಾಬಲ್ಯದ ಸಂಕೇತವಾಗಿದೆ. ಇಲ್ಲಿ ಸಿಂಹಾಸನಾಧೀಶ್ವರ ಎಂದರೆ ಅರಸ ಅಥವಾ ದೇವರು. ಅಂದರೆ ರಾಜ್ಯಭಾರ ಮಾಡುವವ ಎಂದರ್ಥ ಇನ್ನೊಂದು ರಾಜಕೀಯವೆಂದು ಹೇಳಿದರೆ, ಒಳ್ಳೆಯದನ್ನು ಮಾಡು ಎಂದರ್ಥ. ಈ ಎಲ್ಲ ಅರ್ಥದ ಹಿನ್ನೆಲೆಯಲ್ಲಿ ಸಿಂಹಾಸನ ಇಲ್ಲವೆ ಖುರ್ಚಿ ಎಂದರೆ ಹೂವಿನ ಹಾಸಿಗೆಯಲ್ಲ, ಅದೊಂದು ಮುಳ್ಳಿನ ಹಾಸಿಗೆ ಅಂದರೆ ಕಾರ್ಯಭಾರ ಅತೀ ಎಚ್ಚರಿಕೆಯಿಂದ ನಿರ್ವಹಿಸುವದು, ಎಂಬುದನ್ನು ಅರಿತರೆ ಖುರ್ಚಿ ಶೋಭಾಯಮಾನವಾಗಿರಲು ಮತ್ತು ಶಾಂತ ಸಾಗರವಾಗಿರಲು ಸಾಧ್ಯ ಎಂಬುದೇ ಖುರ್ಚಿಯ ಮರ್ಮವಾಗಿದೆ.



೧. ಕುರ್ಚಿ, ೧೯೮೨



೨. ಉದ್ಯಾನವನ. ೨೦೦೭



೩. ಮುಂಗಾರು ಮಳೆ, ೨೦೦೭



೪. ಪರ್ವತ, ೨೦೦೭



೫. ಕೆಂಪುಮೋಡಗಳು. ೨೦೦೭



೬. ಗಾಳಿಪಟ, ೨೦೦೭



೭. ಉದ್ಯಾನವನ, ೨೦೦೭

ಈ ಕೃತಿಯನ್ನು ಡ್ರೈ ಪೇಸ್ಟಲ್‌ನಲ್ಲಿ ರಚಿಸಿದ್ದು, ಆ ಮಾಧ್ಯಮದ ಬಳಕೆಯಿಂದ ಕಾಗದದ ಮೇಲೆ ಅಡ್ಡ ರೇಖೆಗಳು ಸಹಜವಾಗಿಯೇ ಮೈವಳಿಕೆ ರೂಪದಲ್ಲಿ ಸೃಷ್ಟಿಯಾಗಿವೆ. ಹಿನ್ನೆಲೆಯ ಅವಕಾಶವನ್ನು ಎಂದಿನಂತೆ ಆಯತಾಕಾರದ ವಿನ್ಯಾಸಗಳಿಂದ ವಿಭಜಿಸಿಕೊಂಡ ಹಿರೇಗೌಡರು ಕೃತಿಯ ಪ್ರಧಾನ ಆಶಯವಾದ ಕುರ್ಚಿಯನ್ನು ಗಾಳಿಯಲ್ಲಿ ತೇಲಾಡುತ್ತಿರುವಂತೆ ತಲೆ ಕೆಳಗಾಗಿ ಕಡು ಕೆಂಪುವರ್ಣದಿಂದ ಚಿತ್ರಿಸಿದ್ದಾರೆ. ಅದಕ್ಕೆ ಸ್ಪಷ್ಟತೆಯನ್ನು ನೀಡಲು ಸಹಜವಾಗಿಯೇ ಕಡು ಕಪ್ಪುವರ್ಣವನ್ನು ಹಿನ್ನೆಲೆಯಲ್ಲಿ ದುಡಿಸಿಕೊಂಡಿದ್ದಾರೆ. ಅವಕಾಶದ ಒಂದು ಮೂಲೆಯಲ್ಲಿ ಈ ಕುರ್ಚಿ ಸಂಯೋಜನೆಯನ್ನು ಮಾಡಿದ್ದರೂ ಅಭಾಸಕ್ಕೆ ಎಡೆಮಾಡಿಕೊಡದ ಹಾಗೆ ಹಿನ್ನೆಲೆಯ ಇತರ ಭಾಗದಲ್ಲಿ ಬಗೆ ಬಗೆಯ ವರ್ಣಗಳಿಂದ ಆವೃತಗೊಂಡ ಜ್ಯಾಮಿತಿಕ ವಿನ್ಯಾಸಗಳು ರಚನೆಗೊಂಡದ್ದರಿಂದ ಒಟ್ಟು ಸಂಯೋಜನೆ ಸಮತೋಲನವನ್ನು ಕಾಪಿಟ್ಟುಕೊಳ್ಳುತ್ತದೆ.

**೨. ಉದ್ಯಾನವನ, ೩. ಮುಂಗಾರು ಮಳೆ, ೪. ಪರ್ವತ, ೫. ಕೆಂಪು ಮೋಡಗಳು, ೬. ಗಾಳಿಪಟ ಮತ್ತು ೭. ಉದ್ಯಾನವನ**

೨೦೦೭ರಲ್ಲಿ ರಚಿತಗೊಂಡ ಈ ಚಿತ್ರಗಳು ಡ್ರೈ ಪೇಸ್ಟಲ್ ವರ್ಣದ ಚಿತ್ರಗಳಾಗಿವೆ. ಆಯಾ ವಿಷಯಕ್ಕನುಗುಣವಾಗಿ ವಸ್ತುವಿನ ಅನುಭವ ಮತ್ತು ಆಕಾರ ಸೃಷ್ಟಿಸಲು ಪೇಸ್ಟಲ್ ಮೈಯನ್ನು ಬಳಸಿ ಅದರ ಸಾಧ್ಯತೆಗಳನ್ನು ಪ್ರಯೋಗಿಸಲು ಕಲಾವಿದ ಮಾಡಿದ ಪ್ರಯತ್ನ ವಿಭಿನ್ನ ರೀತಿಯದಾಗಿದೆ. ವಸ್ತುವಿನ ಆಕಾರದ ನಿರೂಪಣೆ ಮನಮೋಹಕತೆಯನ್ನು ಸೃಷ್ಟಿಸಿದೆ. ಇವುಗಳಲ್ಲಿ ಮುಂಗಾರು ಮಳೆ ಹಾಗೂ ಪರ್ವತ ಈ ಎರಡು ಚಿತ್ರಗಳ ನಿರ್ಮಾಣ ಶೈಲಿ ಸಂತೋಷದ ಅನುಭವ ನೀಡುತ್ತವೆ. ಇಲ್ಲಿ ಶೀತಲ ವರ್ಣ ಹಾಗೂ ಉಷ್ಣವರ್ಣಗಳ ಪ್ರಯೋಗ ಸಮತೋಲನಾತ್ಮಕವಾಗಿದ್ದು, ಆಯ್ದ ಆಕಾರಗಳು ಮನಸ್ಸಿಗೆ ಸಮಾಧಾನ ಹಾಗೂ ಖುಷಿಯನ್ನು ನೀಡುವಲ್ಲಿ ವಿಶೇಷ ಪರಿಣಾಮ ಬೀರುತ್ತವೆ. ಈ ರೀತಿಯ ಪೇಸ್ಟಲ್ ಮಾಧ್ಯಮದಲ್ಲಿ ಪ್ರಯೋಗ ಮಾಡಿದವರಲ್ಲಿ ಕಲಾವಿದ ಹಿರೇಗೌಡರು ವಿಶೇಷತೆಯನ್ನು ಮೆರೆದಿದ್ದಾರೆ. ಇಂಥ ಪ್ರಯೋಗದ ಬಗ್ಗೆ ಹೇಳುವದಾದರೆ, ಮಾತಿಗಿಂತ ದೃಶ್ಯಾನುಭವ ಅಂತರಂಗಕ್ಕೆ ಹೆಚ್ಚು ಮಾಧುರ್ಯ ನೀಡುವ ಹಿನ್ನೆಲೆಯಲ್ಲಿ, ಡ್ರೈ ಪೇಸ್ಟಲ್‌ಗಳನ್ನು ಕಾಗದದ ಮೈವಳಿಕೆಗೆ ಪೂರಕವಾಗಿ ವರ್ಣಗಳನ್ನು ದುಡಿಸಿಕೊಳ್ಳುವುದರ ಮೂಲಕ ಪ್ರತಿ ಕೃತಿಗೆ ಬಗೆ ಬಗೆಯ ಅರ್ಥ ಸಾಧ್ಯತೆಗಳನ್ನು ನೀಡಿದ್ದಾರೆ.

ಚಿತ್ರ ೨ಕ್ಕೆ ಉದ್ಯಾನವನ ಎಂದು ಶೀರ್ಷಿಕೆ ನೀಡಿದ ಹಿರೇಗೌಡರು, ಅದನ್ನು ಸಮರ್ಥಿಸಿಕೊಳ್ಳುವುದಕ್ಕೆ ಪೂರಕವಾಗಿ ಉದ್ಯಾನವದಲ್ಲಿ ಕಂಡು ಬರುವ ಗಿಡ–ಮರಗಳನ್ನು ಅಮೂರ್ತ ಬಗೆಯಲ್ಲಿ ರೂಪಾಂತರಿಸಿದ್ದಾರೆ. ವಕ್ರವಾದ ಪೇಸ್ಟಲ್‌ನ ಬೀಸುಗಳು ಲಯಬದ್ಧವಾಗಿ ಮೂಡಿ ರೂಪಾರ್ಥಗಳನ್ನು ಸಾರ್ಥಕಗೊಳಿಸುತ್ತಾರೆ. ಹಾಗೆಯೇ ಚಿತ್ರ ೩ ಸಹ ರೂಪಾಂತರಗೊಂಡ ಅನುಭವಕ್ಕೆ ಒಳಗಾಗುತ್ತದೆ. ಹನಿಗಳನ್ನು, ಮೋಡಗಳನ್ನು ಸೂಚ್ಯವಾಗಿಸುವ ಮೂಲಕ ಅರ್ಥ ಸಾಧ್ಯತೆಗೆ ಪ್ರಖರ ವರ್ಣಗಳ ಮೂಲಕ ಯತ್ನಿಸಿದ್ದಾರೆ. ಚಿತ್ರ ೪ ಪರ್ವತವೊಂದನ್ನು ಸೃಜನಾತ್ಮಕವಾಗಿ, ಆಧುನಿಕವಾಗಿ

ಗ್ರಹಿಸಿಕೊಂಡಿರುವುದಕ್ಕೆ ಈ ಕೃತಿ ನಿದರ್ಶನ. ಪ್ರಖರ ವರ್ಣಗಳಿಂದ ಹಿನ್ನೆಲೆಯಲ್ಲಿ ಮೋಡಗಳನ್ನು ತೆಳುವರ್ಣಗಳಿಂದ ಮುನ್ನೆಲೆಯಲ್ಲಿ ಪರ್ವತವನ್ನೂ ಚಿತ್ರಿಸಿದ್ದಾರೆ. ಚಿತ್ರ ೫ ವಾಸ್ತವತೆಯನ್ನು ಆಧುನಿಕ ನೆಲೆಯಲ್ಲಿ ರೂಪಾಂತರಿಸಿಕೊಂಡದ್ದಾಗಿದೆ. ಮೋಡಗಳ ರಚನಾಕೃತಿಯಲ್ಲೂ ಹಾಗೂ ಅವುಗಳಿಗೆ ದುಡಿಸಿಕೊಂಡ ವರ್ಣಗಾರಿಕೆಯಲ್ಲೂ ವಿಭಿನ್ನ ದೃಷ್ಟಿಯಲ್ಲಿ ಲಯಬದ್ಧವಾಗಿ ಬೀಸುಗಳು ವರ್ತಿಸಿವೆ. ಚಿತ್ರ ೬ ಶೀರ್ಷಿಕೆಯ ಆಶಯವನ್ನು ಕೆಲಭಾಗದಲ್ಲಿ ಚಿತ್ರಿಸಿದ್ದು, ಸುತ್ತಲೂ ಪ್ರಖರ ವರ್ಣಗಳನ್ನು ಚೌಕಟ್ಟಿನಂತೆ ಬಗೆ ಬಗೆಯ ಬೀಸುಗಳ ಮುಖಾಂತರ ಚಿತ್ರಿಸಿದ್ದಾರೆ. ಆಯತಾಕಾರದ ಪಟ್ಟಿಕೆಗಳಿಗೆ ತೆಡೆಯೊಡ್ಡುವಂತೆ ಅರ್ಧ ವರ್ತುಳಗಳನ್ನು ರೇಖಾತ್ಮಕವಾಗಿ ಪ್ರಯೋಗಿಸಿದ್ದಾರೆ. ಚಿತ್ರ ೭ ಮಂದಸ್ಮಿತ ವರ್ಣಗಾರಿಕೆಯಿಂದ ಲಯವಾದ ಬಗೆಯಲ್ಲಿ ಬೀಸುಗಳ ಮುಖಾಂತರ ಅರಳಿದ ಎಲೆಯಾಕಾರದ ವಿನ್ಯಾಸಗಳು ಕೃತಿಯ ಶೀರ್ಷಿಕೆಯನ್ನು ಸಾರ್ಥಕಗೊಳಿಸುತ್ತವೆ. ಇವೆಲ್ಲ ಚಿತ್ರಗಳು ದಟ್ಟ ಕತ್ತಲೆಯಲ್ಲಿ ಯಾವುದೋ ಭಾಗದಿಂದ ಬೆಳಕಿನಲ್ಲಿ ಕಂಡು ಬರುವ ಆಕೃತಿಗಳಂತೆ ಗೋಚರವಾಗುವ ಅನುಭವವನ್ನು ನೀಡುತ್ತವೆ.

**ಉಪಸಂಹಾರ**

ಹಿರೇಗೌಡರು ರಚಿಸಿದ ಡ್ರೈ ಪೇಸ್ಟಲ್ ಮಾಧ್ಯಮದ ೭ ಚಿತ್ರಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಚಿತ್ರ ೧ ಮೂರ್ತ ಪ್ರಯೋಗವಾದರೆ, ಇನ್ನುಳಿದ ಕೃತಿಗಳು ಮೂರ್ತತೆಯನ್ನು ರೂಪಾಂತರಗೊಳಿಸಿಕೊಂಡ ಅಮೂರ್ತ ವಿನ್ಯಾಸಗಳ ಮುಖೇನವಾಗಿ ಕೃತಿಯ ಶೀರ್ಷಿಕೆಗಳನ್ನು ಸಾರ್ಥಕಗೊಳಿಸುತ್ತವೆ. ಚಿತ್ರ ೬ ಇತರ ಚಿತ್ರಗಳಿಗಿಂತ ಭಿನ್ನವಾಗಿದ್ದು, ಇತರ ಚಿತ್ರಗಳಲ್ಲಿ ಕಂಡುಬರುವ ಲಯಗಾರಿಕೆ ಇಲ್ಲಿ ಗೌಣವಾಗಿ ಕ್ಯೂಬಿಸ್ಟ ಆಕೃತಿಗಳೇ ಪ್ರಧಾನವಾಗಿವೆ. ಚಿತ್ರ ೧ನ್ನು ಹೊರತು ಪಡಿಸಿದರೆ, ಇನ್ನುಳಿದ ಎಲ್ಲ ಚಿತ್ರಗಳು ಕಡು ಕಪ್ಪು ವರ್ಣದ ಹಿನ್ನೆಲೆಯಲ್ಲಿ ರಚನೆಗೊಂಡಿರುವುದರಿಂದ ದಟ್ಟ ಕತ್ತಲೆಯಲ್ಲಿ ವಸ್ತುಗಳ ಮೇಲೆ ಪ್ರಖರ ಬೆಳಕು ಬಿದ್ದಾಗ ಕಾಣುವ ಅನುಭವ ಇಲ್ಲಿ ವೇದ್ಯವಾಗುತ್ತದೆ. ಪೇಸ್ಟಲ್ ಉತ್ಪನ್ನದ ಗುಣಕ್ಕೆ ತಕ್ಕಂತೆ ಹಾಗೂ ಕಾಗದದ ಮೈವಳಿಕೆಗೆ ಪೂರಕವಾಗಿ ಇಲ್ಲಿ ಪದರುಗಳಲ್ಲಿ ಒರಟಾದ ಮೈವಳಿಕೆ ಸೃಷ್ಟಿಯಾಗುವುದರ ಮೂಲಕ ಈ ಕೃತಿಗಳಿಗೆ ವಿವಿಧ ದಟ್ಟ ಮತ್ತು ತೆಳುವಾದ ಬೀಸುಗಳಾಗಿ ಅನುಭವ ನೀಡುತ್ತವೆ.

*******

೫:೫. ಮಿಶ್ರ ಮಾಧ್ಯಮ

ಮಿಶ್ರ ಮಾಧ್ಯಮ ಕೃತಿಗಳು

೧. ಕುರ್ಚಿಯ ಇತಿಹಾಸ (೧೯೮೧)

ಆಂಗ್ಲ ಭಾಷೆಯಲ್ಲಿ ಒಂದು ಗಾದೆ ಇದೆ. ಅದೇನೆಂದರೆ "Fools create History But wise people read it" ಎನ್ನುವ ಹಾಗೆ "Fools create the Chair, but wise people enjoy it" ಎಂಬ ಮಾತೂ ಅಷ್ಟೇ ಸತ್ಯ. ಕುರ್ಚಿ ಎಂಬುದು ಐಷಾರಾಮಿ ಗಾದಿಯಲ್ಲ. ಆದರೆ ಅದೊಂದು ಮುಳ್ಳಿನ ಹಾಸಿಗೆ ಎಂದು ಅರಿತರೆ ಅದರ ಮೇಲೆ ಕುಳಿತು ಅಧಿಕಾರ ನಡೆಸುವವನು ಯಾವಾಗಲೂ ಎಚ್ಚರಿಕೆಯಿಂದ ಕಾರ್ಯ ನಿರ್ವಹಿಸಬೇಕೆಂಬುದರ ಸೂಕ್ಷ್ಮತೆ ತಿಳಿದಿರಬೇಕು. ಇದನ್ನು ವ್ಯೆಮರೆತರೆ ಕುರ್ಚಿಯು ಸುಂದರ ರೂಪ ಕುರೂಪವಾಗಿ ಪರಿವರ್ತನೆಗೊಳ್ಳುತ್ತದೆ ಎಂಬ ನಿಗೂಡ ಸತ್ಯವನ್ನು ಹೊರಹಾಕುವುದೇ ಈ ಚಿತ್ರದ ಉದ್ದೇಶವಾಗಿದೆ.[೧] ಅದರಂತೆ ಇಲ್ಲಿ ಕುರ್ಚಿಯನ್ನು ಆಧುನಿಕ ಶೈಲಿಯಲ್ಲಿ ವಿರೂಪಗೊಳಿಸಲಾಗಿದೆ. ರೇಖಾತ್ಮಕ ನಿರ್ವಹಣೆಯೊಂದಿಗೆ ಇಲ್ಲಿ ವರ್ಣಗಳ ಲೇಪನವೂ ಇದೆ. ಹೀಗಾಗಿ ರೇಖೆಗಳ ಪ್ರಾಬಲ್ಯವಿರುವುದರಿಂದ ಈ ಕೃತಿ ಮೇಲ್ನೋಟಕ್ಕೆ ದಟ್ಟ ಛಾಯೆಯಲ್ಲಿ ರಚನೆಗೊಂಡಿದೆ ಎಂದೆನಿಸಿದರೂ, ಕಾಗದದ ಇತರ ಅವಕಾಶ ಹಾಗೆಯೇ ಬಿಟ್ಟಿರುವುದರಿಂದ ದಟ್ಟತೆ ಗೌಣವಾಗಿ ಆಕೃತಿಗಳು ಸ್ಪಷ್ಟ ಅನುಭವ ನೀಡುತ್ತವೆ. ಈ ಕೃತಿಯಲ್ಲಿ ಕುರ್ಚಿಗೆ ಸಂಬಂಧಿಸಿದಂತೆ ಕೆಲವು ಆಂಗ್ಲ ಭಾಷೆಯ ಬರೆಹಗಳು ಕೃತಿಯ ಭಾಗವಾಗಿ ವಿನ್ಯಾಸಗಳಂತೆ ವರ್ತಿಸಿವೆ. ಅವುಗಳಿಗೆ ಹಿನ್ನೆಲೆಯಲ್ಲಿ ದಟ್ಟ ಛಾಯೆ ವಕ್ರವಾಗಿರುವ ಆಕೃತಿಗಳು ಸಹ ನಿರೂಪಿತಗೊಂಡಿವೆ.

೦೧. ಎ.ಬಿ.ಹಿರೇಗೌಡರ ಅಭಿಪ್ರಾಯ




೧. ಕುರ್ಚಿಯ ಇತಿಹಾಸ, ೧೯೮೧



೨. ಐತಿಹಾಸಿಕ ಸ್ಮಾರಕ, ೧೯೮೧



೩. ಭಯೋತ್ಪಾದಕ, ೨೦೦೧

೨. ಐತಿಹಾಸಿಕ ಸ್ಮಾರಕ (೧೯೮೧)

ಈ ಚಿತ್ರದಲ್ಲಿ ಪ್ರಮುಖವಾಗಿ ಅನೇಕ ಶತಮಾನಗಳಿಂದ ನೀರು ಕುಡಿದ ಒಂದು ಹಳೆಯದಾದ ಮರದ ಪೊಟರೆ ಹುಳ ಹಿಡಿದು ಶಿಥಿಲಾವಸ್ಥೆಯ ವಿನ್ಯಾಸವಿದೆ. ಇನ್ನೊಂದೆಡೆ ಚಾಲುಕ್ಯಶೈಲಿಯ ಶಿಲ್ಪ, ದೇವಸ್ಥಾನದ ಒಂದು ಕಂಬದ ಭಾಗ ಶಿಥಿಲತೆಯನ್ನು ಅನುಭವಿಸುತ್ತಿದೆ ಎಂಬ ಅನುಭವ ನೀಡುತ್ತಿದೆ. ಇವೆಲ್ಲ ಸ್ಮಾರಕಗಳಿಗೂ ಹುಳ ಹಿಡಿದು ತಮ್ಮ ಅಸ್ತಿತ್ವವನ್ನು ಕಳೆದುಕೊಳ್ಳುವ ದುಸ್ಥಿತಿಯನ್ನು ತಲುಪಿವೆ ಎಂಬ ಸಾಂಕೇತಿಕ ಅಭಿವ್ಯಕ್ತಿಯನ್ನು ನೀಡುತ್ತವೆ. ರೇಖಾ ಪ್ರಧಾನವಾಗಿರುವ ಈ ಕಲಾಕೃತಿಯಲ್ಲಿ ಹಂಪಿಯ ದೇವಾಲಯದ ದೃಶ್ಯವೊಂದರಲ್ಲಿ ಮರದ ಬೇರುಗಳು ಬೆಳೆದು ಹೊರಬರುತ್ತಿರುವ ವಿನ್ಯಾಸಗಳನ್ನು ಚಿತ್ರಿಸಲಾಗಿದೆ. ಈ ಚಿತ್ರ ಮೇಲ್ನೋಟಕ್ಕೆ ಮರಗಳಿಂದಲೇ ನಮ್ಮ ಚಾರಿತ್ರಿಕ ಸ್ಮಾರಕಗಳು ಅವಸಾನದ ಅಥವಾ ಶಿಥಿಲಗೊಳ್ಳುತ್ತವೆ ಎಂಬ ಸಂದೇಶವನ್ನು ಪ್ರಕಟಿಸುತ್ತಿವೆ. ಕೆಳಭಾಗದಲ್ಲಿ ಶಿಥಿಲಗೊಂಡ ದೇವಸ್ಥಾನ, ಮೇಲ್ಭಾಗದಲ್ಲಿ ಶಿಲ್ಪ, ಬಲಭಾಗದಲ್ಲಿ ಮರದ ವಿನ್ಯಾಸಗಳು ಸಮಾನಾಂತರದಲ್ಲಿ ರಚನೆಗೊಂಡ ಸಂಯೋಜನೆ ಇದೆ. ಅಲ್ಲಲ್ಲಿ ವರ್ಣಗಾರಿಕೆಯೂ ಸಹ ಈ ಕೃತಿಯ ಭಾಗವಾಗಿ ಮೂಡಿದ್ದು, ವಿವರಣಾತ್ಮಕ ನೆಲೆಯಲ್ಲಿ ರಚನೆಗೊಂಡ ಕೃತಿಯಾಗಿದೆ.

೩. ಭಯೋತ್ಪಾದಕ (೨೦೦೧)

ಇಪ್ಪತ್ತೊಂದನೇ ಶತಮಾನದಲ್ಲಿ ಎಂದಿಗಿಂತಲೂ ಇಂದು ನಿರ್ಭೀತವಾಗಿ ಭಯೋತ್ಪಾದನಾ ಚಟುವಟಿಕೆಗಳು ನಡೆಯುತ್ತಿದ್ದು ಹಗಲು ಇರುಳಾಗಿ, ಇರುಳು ಹಗಲಾಗಿ ಪರಿಣಮಿಸಿವೆ. ಹಾಗೂ ಸಾಮಾಜಿಕ ಬದುಕು ಅತಂತ್ರ ಸ್ಥಿತಿಯಲ್ಲಿ ಮುಳುಗಿದೆ. ಇದಕ್ಕೆ ಕಾರಣ ಇಂದಿನ ಸ್ಥಿತಿಯಲ್ಲಿ ಸಮಾಜದ ಯಾವೊಬ್ಬ ವ್ಯಕ್ತಿಯೂ ನೈಜ ಮುಖವನ್ನು ಇಟ್ಟುಕೊಂಡು ಬದುಕಲು ಸಾಧ್ಯವಾಗುತ್ತಿಲ್ಲ. ಹೀಗಾಗಿ ಒಂದಲ್ಲಾ ಒಂದು ರೀತಿಯಲ್ಲಿ ಪ್ರತಿಯೊಬ್ಬ ವ್ಯಕ್ತಿಯೂ ಮುಖವಾಡ ಹಾಕಿಕೊಂಡೇ ಬದುಕುವ ಅನಿವಾರ್ಯತೆ ಉದ್ಭವಿಸಿದೆ. ಇದಕ್ಕೆಲ್ಲ ಕಾರಣ ಇಂದಿನ ಸ್ಥಿತ್ಯಂತರಗೊಂಡ ರಾಜಕೀಯ ಚಟುವಟಿಕೆಗಳು, ರಾಜಕೀಯ ತೀರ್ಮಾನಗಳು, ಇದಕ್ಕೆ ಹಿನ್ನೆಲೆಯಾಗಿ ಹೊಣೆಗಾರಿಕೆಯನ್ನರಿಯದ ಜಾಗತೀಕರಣ, ರಾಷ್ಟ್ರೀಕರಣ ಮುಂತಾದ ನೀತಿಗಳು ಜನಸಾಮಾನ್ಯರ ದಿಕ್ಕನ್ನು ತಪ್ಪಿಸಿ ಸಾಮಾಜಿಕ ವ್ಯವಸ್ಥೆ ಅತಂತ್ರವಾಗಲು ಕಾರಣವಾಗಿದೆ. ಇವುಗಳಿಗೆ ಪೂರಕವಾಗಿ ಅಂತರ್ ರಾಷ್ಟ್ರೀಯ ಭಯೋತ್ಪಾದನಾ ಸಂಸ್ಥೆಗಳು ಬೆಳೆಯುತ್ತಿವೆ. ಇಲ್ಲಿ ಕಾರ್ಯನಿರತರಾದ ಭಯೋತ್ಪಾದನಾ ಸದಸ್ಯರು ಯಾವ ಮುಖವಾಡದಲ್ಲಿ ಕಾರ್ಯಪ್ರವೃತ್ತರಾಗಿದ್ದಾರೆ ಎಂಬುದನ್ನು ತೋರಿಸುವುದೇ ಈ ಚಿತ್ರದ ಉದ್ದೇಶವಾಗಿದ್ದು, ಅದಕ್ಕೆ ಪೂರಕವಾಗಿ ಒರಟು ಮೈವಳಿಕೆಯಲ್ಲಿ ಭಯೋತ್ಪಾದಕನ ಆಕೃತಿ ಅವಕಾಶದ ಮಧ್ಯಭಾಗದಲ್ಲಿ ಸಂಯೋಜನೆಗೊಂಡಿದೆ. ಒಂದು ಬಗೆಯಲ್ಲಿ ಎಕ್ಸಪ್ರೆಷನಿಸ್ಟರ ಹಾಗೆ ರಚಿತವಾದ ಈ ಕಲಾಕೃತಿಯಲ್ಲಿ ಕಪ್ಪು ವರ್ಣ ಪ್ರಮುಖವಾಗಿ, ಇತರ ವರ್ಣಗಳು ದ್ವಿತೀಯವಾಗಿ, ವರ್ಣಾತ್ಮಕ ಸಂಯೋಜನೆಗೆ ಕಾರಣವಾಗಿವೆ. ಬಲವಾದ ಕುಂಚದ ಬೀಸುಗಳು ಆಕೃತಿಯಲ್ಲಿ ಭಯೋತ್ಪಾದಕನ ಗುಣಲಕ್ಷಣಗಳನ್ನು ಸ್ಪಷ್ಟೀಕರಿಸಿವೆ. ಹಿನ್ನೆಲೆಯಲ್ಲಿ ಹಿರೇಗೌಡರ ಎಂದಿನ ಕುಂಚದ ಬೀಸುಗಳು ಮಸುಕಾಗಿ ಜ್ಯಾಮಿತಿಕ ಆಕೃತಿಗಳಾಗಿ ಮೇಳೈಸಿವೆ.




೪. ಮುಸ್ಸಂಜೆ, ೨೦೦೧



೫. ಚಿಗುರೆಲೆ ಹಣ್ಣೆಲೆ, ೨೦೦೬



೬. ನಿಸರ್ಗ, ೨೦೦೬

೪. ಮುಸ್ಸಂಜೆ (೨೦೦೧)

ಇಂದು ಯಾವುದೇ ಬೆಳೆಯುತ್ತಿರುವ ನಗರ ಪ್ರದೇಶಗಳನ್ನು ಗಮನಿಸಿದರೆ ಮಾಲಿನ್ಯಯುಕ್ತವಾಗಿರುವ ಬಹುಮಹಡಿ ಕಟ್ಟಡಗಳ ಅಟ್ಟಹಾಸ, ಇವುಗಳ ಮಧ್ಯ ಓಡಾಡುವ ವಾಹನಗಳಿಂದ ಉಂಟಾದ ಧೂಳು, ಹೊಗೆ ಮಾಲಿನ್ಯ ಇಂಥ ಕಲುಷಿತ ವಾತಾವರಣವನ್ನು ಬಿಂಬಿಸುತ್ತದೆ. ಹೋಲಿ ಹಬ್ಬದಲ್ಲಿ ಓಕಳಿ ಆಟವಾಡಿ ನಿಂತ ವರ್ಣಮಯ ಸನ್ನಿವೇಶದ ಅನುಭವವಾಗುತ್ತದೆ. ಇಲ್ಲಿ ಅಂಥದೊಂದು ನಗರದ ಮುಸ್ಸಂಜೆಯ ನೋಟಕ್ಕೆ ತಾಜಾ ಉದಾಹರಣೆಯಾಗಿದೆ ಈ ಚಿತ್ರ. ಕಟ್ಟಡಗಳ ವಿನ್ಯಾಸಗಳನ್ನು ಸೂಚ್ಯವಾಗಿಸಿಕೊಂಡ ಹಿರೇಗೌಡರು, ಅಲ್ಲಲ್ಲಿ ಮರಗಳಂತಹ ವಿನ್ಯಾಸಗಳನ್ನು ಸೃಷ್ಟಿಸಿದ್ದಾರೆ. ಚಿತ್ರದ ಕೆಲಭಾಗದಲ್ಲಿ ಹಿರೇಗೌಡರ ಎಂದಿನ ತಾಜಾ ವರ್ಣಗಳ ಸಂಯೋಜನೆ ಇದ್ದರೆ, ಕ್ರಮೇಣವಾಗಿ ಮೇಲೆ ಹೋದಂತೆಲ್ಲ ಮಸುಕಾಗಿ, ದಟ್ಟವರ್ಣಗಳನ್ನು ದುಡಿಸಿಕೊಳ್ಳುವುದರ ಮೂಲಕ ಮಾಲಿನ್ಯದ ಛಾಯೆಯನ್ನು ಪ್ರಕಟಿಸಿದ್ದಾರೆ. ಹಿನ್ನಲೆಯಲ್ಲಿ ಹಿರೇಗೌಡರ ಎಂದಿನ ಜ್ಯಾಮಿತಿಕ ವಿನ್ಯಾಸಗಳು ಮಸುಕಾಗಿ ಮೂಡಿದ್ದು, ಪಕ್ಷಿನೋಟದಿಂದ ಒಂದು ನಗರವನ್ನು ನೋಡಿದಾಗ ಅನುಭವ ಹೇಗಿರಬಹುದು ? ಅಂತಹ ಮಾಲಿನ್ಯಯುಕ್ತವಾದ ನಗರದ ಅನುಭವವನ್ನು ಕೊಡುತ್ತದೆ ಈ ಕೃತಿ.

೫. ಚಿಗುರೆಲೆ, ಹಣ್ಣೆಲೆ (೨೦೦೬)

ಇಲ್ಲಿ ಕಾಣುವ, ತಿಳಿ ಹಸಿರು ಹಾಗೂ ಕೆಂಪು ವರ್ಣಯುಕ್ತ ಎಲೆಗಳು, ಚಿಗುರಿನ ಸೌಮ್ಯತೆಯನ್ನು ಕೆಂಪು ಮತ್ತು ಕಂದುಯುಕ್ತ ಎಲೆಗಳು ಚಿಗುರಿನ ಸೌಮ್ಯಭಾವವನ್ನು ಸಾಂಕೇತಿಕವಾಗಿ ಹಾಗೂ ಅಲಂಕಾರಿಕ ಶೈಲಿಯಲ್ಲಿ ಚಿತ್ರಿಸಲಾಗಿದೆ. ಒಟ್ಟಿನಲ್ಲಿ ಹಸಿರೆಲೆಯು ಅಟ್ಟಹಾಸದಿಂದ ಬೀಗುತ್ತಿರುವಂತೆ ಅನುಭವವಾಗುತ್ತದೆ. ಇದಕ್ಕೆ ಪೂರಕವಾಗಿ ಹಿನ್ನೆಲೆಯಲ್ಲಿ ದಟ್ಟವಾದ ಕಪ್ಪು ವರ್ಣ ಇವೆರಡು ಎಲೆಗಳನ್ನು ಸುಸ್ಪಷ್ಟವಾಗಿ ಕಾಣುವಂತೆ ಮಾಡಿರುವುದು ಗಮನಾರ್ಹವಾಗಿಸಿದೆ. ಈ ಕೃತಿಯಲ್ಲಿ ಮೇಲ್ನೋಟಕ್ಕೆ ಗೋಚರವಾಗುವುಧು ಆಕೃತಿಗಳ ಲಯಗಾರಿಕೆ. ಅವು ಒಂದು ಬಗೆಯಲ್ಲಿ ರೇಖಾತ್ಮಕವಾಗಿಯೂ, ಪಟ್ಟಿಕೆಗಳಂತೆಯೂ ರಚನೆಗೊಂಡಿವೆ. ಶುಭ್ರ ವರ್ಣಗಳನ್ನು ಎಲೆಗಳ ಆಕಾರಕ್ಕೆ ದುಡಿಸಿಕೊಂಡಿರುವ ಹಿರೇಗೌಡರು ಹಿನ್ನೆಲೆಯಲ್ಲಿ ದಟ್ಟ ವರ್ಣ ಲೇಪಿಸಿದ್ದಾರೆ. ಎಂದಿನಂತೆ ಅದೇ ಹಿನ್ನೆಲೆಯಲ್ಲಿ ಮಸುಕಾಗಿರುವ ಆಯತಾಕಾರಗಳನ್ನು ರಚಿಸಿದ್ದಾರೆ. ಅವಕಾಶದ ಎಡಭಾಗದಲ್ಲಿರುವುದು ಚಿಗುರೆಲೆಯಾದರೆ, ಬಲಭಾಗದಲ್ಲಿರುವುದು ಹಣ್ಣೆಲೆಗೆ ತಕ್ಕಂತೆ ವರ್ಣಗಳನ್ನು ಬಳಸಿಕೊಳ್ಳುವುದರ ಮೂಲಕ ಹಿರೇಗೌಡರು ಶೀರ್ಷಿಕೆಯನ್ನು ಸಾರ್ಥಕಗೊಳಿಸುತ್ತಾರೆ.

೬. ನಿಸರ್ಗ (೨೦೦೬)

ಇದೊಂದು ನಿಸರ್ಗದ ಸಾಮಾನ್ಯ ಚಿತ್ರವಾದರೂ ವರ್ಣ ಸಂಯೋಜನೆಯಲ್ಲಿ ವಿಶೇಷ ಅಭಿವ್ಯಕ್ತಿ ಪ್ರಕಟವಾಗಿದೆ. ಇದರಲ್ಲಿ ಬಳಕೆಯಾಗಿರುವ ಬಳಕುವ ಬಳ್ಳಿಗಳು ಚಿತ್ರಕ್ಕೆ ವಿಶೇಷ ಮೆರಗು ತಂದಿವೆ. ಹಾಗೂ ಅವುಗಳ ಮಧ್ಯದಲ್ಲಿ ಲೇಪಿಸಿರುವ ತಿಳಿನೀಲಿ, ಹಸಿರು, ಕಂದು, ತಿಳಿನೇರಳೆ



೭. ಪ್ರಕೃತಿ. ೨೦೦೬



೮.ಸುನಾಮಿ ಅಂತ್ಯ. ೨೦೦೬



೯. ಶಾಂತಿಗಾಗಿ ಯುದ್ಧ. ೨೦೦೬

ಒಂದಕ್ಕೊಂದು ಪೂರಕವಾಗಿದ್ದು, ವರ್ಣ ಮೋಹಕತೆಯನ್ನು ಹೆಚ್ಚಿಸಿವೆ. ಒಟ್ಟಿನಲ್ಲಿ ಇದೊಂದು ವಿಭಿನ್ನ ನಿಸರ್ಗ ಚಿತ್ರವೆಂದು ಹೇಳುವುದರ ಹಿಂದೆ ಈ ಕೃತಿ ಮೇಲ್ನೋಟಕ್ಕೆ ಅಮೂರ್ತ ಚಿತ್ರವೆಂದು ಗೋಚರವಾದರೂ ಆಶ್ಚರ್ಯಪಡಬೇಕಿಲ್ಲ. ಸಣ್ಣ ಸಣ್ಣ ಕುಂಚದ ಪ್ಯಾಚ್‌ಗಳು ಶುಭ್ರ ವರ್ಣಗಾರಿಕೆಯಲ್ಲಿ ಮೈದಳೆದು, ಪ್ರಾಕೃತಿಕ ವಿನ್ಯಾಸಗಳನ್ನು ಸೃಷ್ಟಿಸಿವೆ. ಭೂಪಾತಳಿ, ದಟ್ಟ ಕಾನನದ ಅನುಭವವನ್ನು ನಿಡುವ ಈ ಕೃತಿಯಲ್ಲಿ ಮೇಲೆ ಹರಿದಾಡಿದ ರೇಖೆಗಳು ಬಳ್ಳಿಗಳ ರೂಪಾರ್ಥವಾಗಿವೆ. ಅಲ್ಲಲ್ಲಿ ದಟ್ಟತೆಯ ಸ್ಪರ್ಶವಿರುವುದರಿಂದ ಪ್ರಾಕೃತಿಕ ವಸ್ತುಗಳಲ್ಲಿ ಹಿನ್ನೆಲೆ-ಮುನ್ನೆಲೆಯ ಅನುಭವ ದಕ್ಕುತ್ತದೆ.

**೭. ಪ್ರಕೃತಿ (೨೦೦೬)**

ಇದೊಂದು ದಟ್ಟಭಾವದ ಪಾರದರ್ಶಕತೆಯನ್ನು ಸೂಚಿಸುವ ತಿಳಿವರ್ಣ ಶೈಲಿಯ ವಿಭಿನ್ನ ಸಂಯೋಜನೆಯನ್ನೊಳಗೊಂಡ ವರ್ಣಾತೀತ, ಹಾಗೂ ಅಪರೂಪದ ಚಿತ್ರವೆಂದು ಹೇಳಬಹುದು ಈ ಚಿತ್ರ ಹಂಪಿಯ ಕನ್ನಡ ವಿಶ್ವವಿದ್ಯಾಲಯದ ದೃಶ್ಯ ಕಲಾವಿಭಾಗದಲ್ಲಿ ಅಲಂಕೃತಗೊಂಡಿದೆ. ಈ ಕೃತಿಯಲ್ಲಿ ಅಕ್ರಿಲಿಕ್ ವರ್ಣವನ್ನು ಪಾರದರ್ಶಕ ಹಾಗೂ ಅಪಾರದರ್ಶಕ ತಂತ್ರದಿಂದ ರಚಿಸಿಲಾಗಿದೆ. ತೆಳು ವರ್ಣವನ್ನು ಮೇಲಿನಿಂದ ಬಿಟ್ಟಾಗ ಇಳಿದ ರೇಖಾತ್ಮಕ ವರ್ಣಗಳು ಇಲ್ಲಿ ಸೃಷ್ಟಿಯಾಗಿದ್ದರೆ, ಮೇಲಿನ ಭಾಗದಲ್ಲಿ ಕಡುಕಪ್ಪು ವರ್ಣದಿಂದ ದಟ್ಟ ಬೀಸುಗಳನ್ನು ಹಂದರದ ವಿನ್ಯಾಸದಂತೆ ದುಡಿಸಿಕೊಳ್ಳಲಾಗಿದೆ. ಇಲ್ಲಿ ವರ್ಣ ತಂತ್ರಗಾರಿಕೆ ಪದರಗಳು ರೂಪದಲ್ಲಿ ರಚನೆಗೊಂಡದ್ದರಿಂದ ಹಿನ್ನೆಲೆಯಲ್ಲಿ ಹಸಿರುವರ್ಣಗಳು ಇಣುಕಿ ನೋಡುವ ಅನುಭವವನ್ನು ಕೊಡುತ್ತವೆ. ಕೆಳಭಾಗದಲ್ಲಿ ಕ್ಯಾನ್ವಾಸಿನ ಬಿಳಿ ಅವಕಾಶವನ್ನು ಹಾಗೆಯೇ ಬಿಟ್ಟುಕೊಂಡಿರುವುದರಿಂದ ಕೃತಿ ಕೇಂದ್ರೀಕೃತ ಸ್ಥಾನವಾಗಿ ಗೋಚರವಾಗುತ್ತದೆ. ಅಮೂರ್ತ ಅನುಭವವನ್ನು ನೀಡುವ ಈ ಕೃತಿ ಇನ್ನೊಂದು ನೆಲೆಯಲ್ಲಿ ಗುಹಾಂತರದ ಒಳಗಿನ ದಟ್ಟತೆಯ ಅನುಭವವನ್ನು ನೀಡುತ್ತದೆ.

**೮. ಸುನಾಮಿ ಅಂತ್ಯ (೨೦೦೬)**

ಡಿಸೆಂಬರ ೨೦೦೪ರ ಕೊನೆಯಲ್ಲಿ ಮಲೇಶಿಯಾ ಹಾಗೂ ಭಾರತದ ಪೂರ್ವಕಡಲಲ್ಲಿ ಭಯಾನಕ ಸುನಾಮಿ ಅಪ್ಪಳಿಸಿ ಲಕ್ಷೋಪಲಕ್ಷ ಜನರ, ಪ್ರವಾಸಿಗರ, ಪ್ರಾಣಿಗಳ ಆಸ್ತಿಪಾಸ್ತಿ ಹಾನಿಯಾಗಿದ್ದು ಇಡೀ ಜಗತ್ತಿನ ಜನಸ್ತೋಮಕ್ಕೆ ತಲ್ಲಣ ಉಂಟುಮಾಡಿದ ಭಯಾನಕ ಸನ್ನಿವೇಶ. ಈ ಸಂದರ್ಭವನ್ನಾಧರಿಸಿದಂತೆ ಸುನಾಮಿ ಅಂತ್ಯವಾದ ನಂತರ ಕಡಲ ತೀರದ ವಿಶೇಷ ಪಳೆಯುಳಿಕೆಯಾದ ಹಡಗೊಂದು ಸಂಪೂರ್ಣ ಜರ್ಜರಿತಗೊಂಡ ದೃಶ್ಯವನ್ನು ಸೆರೆ ಹಿಡಿಯಲಾಗಿದೆ. ಭಯಾನಕತೆಯನ್ನು ಸೂಚಿಸುವ ಕೆಂಪು ಅಲೆಗಳು ದಿಗಂತದಲ್ಲಿ ಕರಾಳತೆಯನ್ನು ಸೂಚಿಸುವ ಕಪ್ಪು ಛಾಯೆಗಳು ಹಾಗೆಯೇ ಹಡಗಿನ ಕೆಳಭಾಗದಲ್ಲಿ ದುಃಖದ ಅಲೆಗಳು ಹೆಪ್ಪುಗಟ್ಟಿವೆ. ಈ ರೀತಿಯ ದುಃಖದ ಸಂವೇದನೆಯನ್ನು ಅಭಿವ್ಯಕ್ತಿಸುವ ರೀತಿ ಇಲ್ಲಿವೆ. ಇದೊಂದು ಸೃಜನಶೀಲತೆಯ ವಿಶಿಷ್ಠ ಮಜಲು ಎಂದು ಹೇಳಬಹುದು. ಪ್ರಖರ ವರ್ಣಗಳ ಸಾಂಗತ್ಯದಿಂದ ರಚನೆಗೊಂಡ ಈ ಕೃತಿಯಲ್ಲಿ ಅಡ್ಡಲಾಗಿ ಕುಂಚದ ಬೀಸುಗಳು ಹರಿದಾಡಿದ್ದು, ಲಂಬವಾಗಿ ದಟ್ಟ ಬೀಸುಗಳು ರಚನೆಗೊಂಡಿವೆ. ಕುಂಚದ



೧೦. ಕೆಂಪು ಭೂಮಿ, ೨೦೦೬



೧೧. ಯುದ್ಧ, ೨೦೦೬



೧೨. ನಾಗನಿಗೊಂದು ಕಲ್ಲು. ೨೦೦೬

ಹಿಂದಿನಿಂದ ರೇಖೆಗಳನ್ನು ವೃತ್ತಾಕಾರವಾಗಿ ಎಳೆಯಲಾಗಿದೆ. ಕಲಾಕೃತಿಗೊಂದು ಚೌಕಟ್ಟು ಹಾಕುವ ಹಿರೇಗೌಡರು ತಮ್ಮ ರಚನಾ ವಿನ್ಯಾಸವನ್ನು ಪುನರಾವರ್ತಿಸಿದ್ದಾರೆ. ಲಂಬವಾಗಿ ಮೂಡಿದ ಆಕೃತಿಗಳಲ್ಲಿ ಜರ್ಜರಿತಗೊಂಡ ಹಡಗಿನ ಆಕೃತಿಗಳ ರೂಪಾರ್ಥಗಳನ್ನು ಹೊಂದಿದೆ.

**೯. ಶಾಂತಿಗಾಗಿ ಯುದ್ಧ (೨೦೦೬)**

ದುಷ್ಟ ಶಕ್ತಿಯು ನಿಷ್ಟ ಶಕ್ತಿಯನ್ನು ಧ್ವಂಸ ಮಾಡುತ್ತದೆ ಎಂಬುದು ನಿಸರ್ಗ ನಿಯಮ. ಹಾಗೆಯೇ ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ ಎಂಬುದು ಅದನ್ನೇ ಸ್ಫುರಿಸುತ್ತದೆ. ಜಗತ್ತಿನಲ್ಲಿ ಶಕ್ತಿಯುತ ಜನಾಂಗ ನಿಶ್ಯಕ್ತ ಜನಾಂಗದ ಮೇಲೆ ಯುದ್ಧ ಸಾರಿ ಮುಗ್ಧರನ್ನು ಬಲಿ ತೆಗೆದುಕೊಂಡು ಜನಾಂಗವನ್ನು ಪ್ರಕ್ಷುಬ್ಧಗೊಳಿಸುತ್ತದೆ. ಹೀಗೇಕೆ? ಎಂದು ಕೇಳಿದರೆ ಶಾಂತಿಗಾಗಿ ಯುದ್ಧವೆಂದು ಹೇಳುತ್ತಾ ಸಾರ್ವಭೌಮತ್ವವನ್ನು ಸ್ಥಾಪಿಸುತ್ತದೆ. ಇದರ ಗೂಡಾರ್ಥವನ್ನು ಸಾರುವುದು ಈ ಚಿತ್ರದ ಉದ್ದೇಶವಾಗಿದೆ.[೨] ಇದೊಂದು ಅಮೂರ್ತ ಬಗೆಯಲ್ಲಿ ಗೋಚರವಾದರೂ ಯುದ್ಧದ ಅನುಭವವನ್ನು ಇಲ್ಲಿನ ಆಕೃತಿಗಳು ಮತ್ತು ವರ್ಣಗಳು ನೀಡುತ್ತವೆ. ಅವಕಾಶದ ಸುತ್ತಲೂ ದಟ್ಟವರ್ಣಗಾರಿಕೆ ರೂಪುಗೊಂಡಿದ್ದರೆ, ಅವಕಾಶದ ಎಡಭಾಗದಲ್ಲಿ ಕೇಂದ್ರೀಕೃತಗೊಂಡಂತೆ ಹಳದಿ ಮತ್ತು ಕೆಂಪು ವರ್ಣದ ವಿವಿಧ ಶ್ರೇಣಿಯ ವರ್ಣಗಳು ಅಸ್ತವ್ಯಸ್ಥ ರೀತಿಯಲ್ಲಿ ಲೇಪನಗೊಂಡಿವೆ. ಉದ್ದೇಶಿತ ಕಥನಕ್ಕೆ ಪೂರಕವಾಗಿ ಮೇಲ್ಭಾಗದಲ್ಲಿ ಗುಬ್ಬಿಯ ರಚನೆಯೂ ಮಸುಕಾಗಿ ರಚನೆಗೊಂಡಿದೆ.

**೧೦. ಕೆಂಪು ಭೂಮಿ (೨೦೦೬)**

ಈ ಭೂಮಿಯ ಅಂತರಂಗದಲ್ಲಿ ಲಾವಾರಸ ಕುದಿಯುತ್ತಿದೆ. ಭೂಮಿಯ ಮೇಲೆ ವಾಸಿಸುವ ಪಕ್ಷಿ, ಪ್ರಾಣಿ ಸಂಕುಲ ಹಾಗೂ ಮಾನವ ಸಂಕುಲ ಇವೆಲ್ಲವುಗಳಲ್ಲಿಯೂ ರೋಷ, ಅಸೂಯೆ, ಅತೃಪ್ತಿ ಗುಣಗಳು ತಾಂಡವವಾಡುತ್ತಿದೆ. ಹಾಗೆಯೇ ಭೂಮಿಯ ಸುತ್ತಲಿನ ಬಹಿರಂಗ ವಾತಾವರಣವು ಸಹ ಬಿಸಿಯಿಂದ ಕೂಡಿದೆ. ಈ ಎಲ್ಲ ಕುದಿತಗಳು ಅಶಾಂತಿಯ ಸಂಕೇತಗಳಾಗಿ, ಒಂದಕ್ಕೊಂದು ಪೂರಕಾಂಶವಾಗಿರುವುದರಿಂದ ಪ್ರಪಂಚದ ಅಂತಿಮ ಘಟ್ಟವೆಂದರೆ ಭಸ್ಮ, ವಿನಾಶ ಎಂದು ಹೇಳುವುದೇ ಈ ಚಿತ್ರದ ವೈಶಿಷ್ಟ್ಯ. ಆದ್ದರಿಂದ ಕೆಂಪು ವರ್ಣದಾಚೆ ಕಡುದಾದ, ದಟ್ಟವಾದ ಕಪ್ಪು ಛಾಯೆಯಿಂದ ವಿಜೃಂಭಿಸುತ್ತದೆ. ಅದುವೇ ವಿನಾಶದ ಅಂತಿಮ ಘಟ್ಟ. ಈ ಕೃತಿಯಲ್ಲಿ ಪ್ರಮುಖವಾಗಿ ಕಂಡುಬರುವುದು ಜ್ಯಾಮಿತಿಕ ಆಕೃತಿಗಳು. ಅವಕಾಶದ ಕೆಳಭಾಗ ಮತ್ತು ಎಡಪಾರ್ಶ್ವದ ಮೇಲ್ಪದರದಲ್ಲಿ ಕಡು ಕಪ್ಪು ವರ್ಣವನ್ನು ವಿವಿಧ ಆಕೃತಿಗಳಾಗಿ ರಚಿಸಲಾಗಿದೆ. ವೃತ್ತಕ್ಕೆ ಪೂರಕವಾಗಿರುವ ಪ್ರಖರ ವರ್ಣಗಳ ಪಟ್ಟಿಕೆಗಳು, ಲಂಬವಾಗಿ ಮೈದೆಳೆದ ಕಪ್ಪು ವರ್ಣದ ರೇಖೆಗಳು, ಹಾಗೆಯೇ ಬಲಭಾಗದಲ್ಲಿ ದ್ವಿತೀಯ ಪ್ರಾಶಸ್ತ್ಯದಲ್ಲಿ ರಚನೆಗೊಂಡ ಕಪ್ಪು, ನೀಲಿ ವರ್ಣಗಳ ಪಟ್ಟಿಕೆಗಳು ಕೃತಿಯನ್ನು ಲಂಬವಾಗಿಯೇ ಸಂಯೋಜಿಸಿವೆ. ಈ ಬಗೆಯ ರಚನೆಯಿಂದ ಕೆಂಪುಭೂಮಿ ಎಂಬ ಶೀರ್ಷಿಕೆಯನ್ನು ಈ ಕೃತಿ ಸಾರ್ಥಕಗೊಳಿಸುತ್ತದೆ.

---

೦೨. ಎ.ಬಿ.ಹಿರೇಗೌಡರ ಅಭಿಪ್ರಾಯ



೧೩. ಸ್ವ-ಭಾವ. ೨೦೦೬



೧೪. ನಾಗರ. ೨೦೦೬

೧೧. ಯುದ್ಧ (೨೦೦೬)

ಈ ಚಿತ್ರ ಯುದ್ಧವೆಂಬ ತಲೆ ಬರಹ ಹೊತ್ತಿದ್ದರೂ ನೇರವಾಗಿ ಯಾವುದೇ ಮಾನವ ರೂಪಗಳು ಕಂಡು ಬರುವದಿಲ್ಲ. ಆದರೆ ಇದೊಂದು ಅಣುವಿಕಿರಣದ ಸಂಕೇತಾತ್ಮಕ ಚಿತ್ರ. ಇಂಥ ಸೂಕ್ಷ್ಮ ಅಣುವು ಸ್ಫೋಟಗೊಂಡರೆ ಅದರ ಪರಿಣಾಮ ಎಷ್ಟೊಂದು ಗಂಭೀರ ಸ್ವರೂಪದ್ದು ಎಂಬುದು ಅದಕ್ಕೊಳಗಾದ ವಾತಾವರಣವೇ ಸಾಕ್ಷಿ. ಉದಾಹರಣೆಗೆ ಜಪಾನಿನ ಮೇಲೆ ಅಣುಬಾಂಬ್ ಸ್ಫೋಟಿಸಿದಾಗ ನಾಗಾಸಾಕಿ ಪ್ರದೇಶ ಸುಟ್ಟು ಭಸ್ಮವಾಯಿತು. ಮನುಕುಲ ನಿರ್ನಾಮವಾಯಿತು. ಆ ಹಿನ್ನೆಲೆಯಲ್ಲಿ ಈ ಚಿತ್ರದಲ್ಲಿ ಸಂಚಲಿಸುತ್ತಿರುವ ಅಣುವಿಕಿರಣದಿಂದಾಗುವ ಫಲಿತಾಂಶವನ್ನು ಹಾಗೂ ಅದರ ಗಂಭೀರತೆಯನ್ನು ಹೇಳುವಂಥ ಚಿತ್ರ ಇದಾಗಿದೆ. ಅದಕ್ಕೆ ಪೂರಕವಾದ ಬಹು ವರ್ಣಗಳ, ವಿಶೇಷವಾಗಿ ಕೆಂಪು ಮತ್ತು ಕಪ್ಪು ವರ್ಣಗಳನ್ನು ಆಧರಿಸಿಕೊಂಡ ರೇಖಾತ್ಮಕವಾಗಿ ಚಿತ್ರಿಸಲಾದ ಈ ಕಲಾಕೃತಿಯಲ್ಲಿ ವಿಕಿರಣಕ್ಕೆ ಪೂರಕವಾದ ವಿನ್ಯಾಸಗಳು ಅರ್ಧ ವೃತ್ತಾಕಾರದಲ್ಲಿ ರಚನೆಗೊಂಡಿವೆ. ಕಾಗದದ ಅವಕಾಶದಲ್ಲಿ ಯಾವುದೇ ಬಗೆಯ ವರ್ಣ ಲೇಪನವಿಲ್ಲದೇ ಮೇಲ್ಪದರದಲ್ಲಿ ರಚನೆಗೊಂಡ ಆಕೃತಿಗಳಿಗೆ ಸ್ಪಷ್ಟತೆಯನ್ನು ಒದಗಿಸಿಕೊಟ್ಟಿವೆ. ಸಂಚಲನಾತ್ಮಕವಾಗಿ ಅಮೂರ್ತ ಅನುಭವ ಈ ಕೃತಿಯಿಂದ ಲಭಿಸಿದರೂ ಹಿರೇಗೌಡರ ಶೀರ್ಷಿಕೆಯ ಆಶಯ ಇಲ್ಲಿ ವ್ಯಕ್ತವಾಗುತ್ತದೆ.

೧೨. ನಾಗನಿಗೊಂದು ಕಲ್ಲು (೨೦೦೬)

ಮಾನವ ಜನಾಂಗ ಮತ್ತು ಭಾರತೀಯ ಸಂಸ್ಕೃತಿಯ ವೈಚಿತ್ರ್ಯವೆಂದರೆ, ಕಲ್ಲು ನಾಗರವನ್ನು ದೇವರೆಂದು ಪೂಜಿಸುವದು, ಜೀವಂತ ನಾಗರವನ್ನು ಕಂಡರೆ ಅದೇ ಕಲ್ಲಿನಿಂದ ಹೊಡೆದು ಸಾಯಿಸುವುದು. ಇದ್ಯಾವ ಸಂಸ್ಕೃತಿ? ಯಾವ ನ್ಯಾಯ? ಕಲ್ಲುನಾಗರಕ್ಕೆ ಬೆಣ್ಣೆ ಹಚ್ಚಿದರೆ ಜೀವಂತ ನಾಗರಕ್ಕೆ ಸುಣ್ಣ ಹಚ್ಚಿದಂತೆ ಎಂಬ ದ್ವಂದ್ವ ನೀತಿಯನ್ನು ಈ ಚಿತ್ರ ಪ್ರತಿಪಾದಿಸುತ್ತದೆ. ರೇಖಾ ಪ್ರಧಾನವಾದ ಈ ಕೃತಿಯಲ್ಲಿ ವರ್ಣಗಳ ಬಳಕೆ ಅಲ್ಪ. ಇಲ್ಲಿ ಜೀವಂತ ನಾಗರದ ಆಕೃತಿಗಳೊಂದಿಗೆ, ಕಲ್ಲು ನಾಗರದ ವಿನ್ಯಾಸಗಳೂ, ಜೊತೆಗೆ ಮರ, ಸೂರ್ಯನ ವಿನ್ಯಾಸವನ್ನು ಹಿರೇಗೌಡರು ರಚಿಸಿದ್ದಾರೆ. ಹಿನ್ನೆಲೆಯಲ್ಲಿ ಕಾಗದದ ಅವಕಾಶವನ್ನು ಹಾಗೆಯೇ ಉಳಿಸಿಕೊಂಡು ಕೆಲವೇ ಕೆಲವು ವರ್ಣಗಳನ್ನು ಇಲ್ಲಿನ ಆಕೃತಿಗಳಲ್ಲಿ ಲೇಪಿಸಿದ್ದರೂ, ರೇಖಾತ್ಮಕ ನೆಲೆಯಲ್ಲಿರುವುದರಿಂದ ಈ ಕೃತಿಯಲ್ಲಿ ದಟ್ಟ ಛಾಯೆ ಮೂಡುತ್ತದೆ.

೧೩. ಸ್ವ-ಭಾವ ಚಿತ್ರ (೨೦೦೬)

ಹಿರೇಗೌಡರು ತಮ್ಮ ಭಾವ ಚಿತ್ರವನ್ನು ತಮ್ಮದೇ ಆದ ರೇಖಾ ಶೈಲಿಯಲ್ಲಿ ಮಿಶ್ರ ಮಾಧ್ಯಮದೊಂದಿಗೆ ರಚಿಸಿದ್ದಾರೆ. ತಲೆಯಲ್ಲೊಂದು ಪ್ರಶ್ನಾರ್ಥಕ ಚಿನ್ಹೆ ಇದೆ. ಹಿನ್ನೆಲೆಯಲ್ಲಿ ಅನೇಕ ಅಮೂರ್ತವಾದ ಹುಳುಗಳು ಕಾಣಿಸುತ್ತವೆ. ಪಕ್ಕದಲ್ಲಿ ಚೆಂಡಿನ ಅರ್ಧಭಾಗ ಬೆಳಕಿನಲ್ಲಿದೆ ಇನ್ನುಳಿದ ಅರ್ಧಭಾಗ ಕತ್ತಲಿನಲ್ಲಿ ಇರುವುದು ಕಾಣುತ್ತದೆ. ಇವುಗಳ ಸಂಕೇತಗಳೇನು? ಎಂಬುದು ಜಿಜ್ಞಾಸೆಯನ್ನು ಹುಟ್ಟಿಸಿದೆ. ನೈಜ ಜೀವನದಲ್ಲಿ ಮುಖಭಾವದಲ್ಲಿ ಕಾಣುವ ಸೌಮ್ಯತೆ ಹಾಗೂ ಅದರ

ವೈಚಾರಿಕತೆಯಲ್ಲಿರುವ ಪ್ರಖರತೆ ಒಂದಕ್ಕೊಂದು ಪೂರಕಾಂಶಗಳಲ್ಲ. ಏಕೆಂದರೆ ಮುಖದ ಬೆಳಕಿನಲ್ಲಿ ಕಾಣುವುದೂ ಒಂದು ರೀತಿಯ ಸತ್ಯ. ತಲೆಯ ಒಳಗಿನ ಕತ್ತಲಲ್ಲಿ ಸುಳಿಯುವ ವಿಚಾರಗಳೂ ಇನ್ನೊಂದು ಸತ್ಯ ಎಂಬುದನ್ನು ತಿಳಿಸುವುದು ಈ ಚಿತ್ರದ ಉದ್ದೇಶವಾಗಿದೆ. ಇದರ ಇನ್ನೊಂದು ಮಜಲು ಏನೆಂದರೆ ಅಂತರಂಗದಲ್ಲಿ ಯುದ್ಧವಿದೆ ಬಹಿರಂಗದಲ್ಲಿ ಶಾಂತಿ ಸೂಚಕ ಪ್ರಭೆ ಇದೆ ಎಂಬುದಕ್ಕೆ ಇಲ್ಲಿ ರಚಿತಗೊಂಡಿರುವ ರೇಖಾತ್ಮಕ ಕೃತಿಯ ಆಕೃತಿಗಳೇ ಹೇಳುತ್ತವೆ. ಹಿರೇಗೌಡರು ತಮ್ಮ ಸ್ವಭಾವ ಚಿತ್ರವನ್ನು ನೈಜ ನೆಲೆಯಲ್ಲಿ ರಚಿಸಿ ಅವಕಾಶದ ಮೇಲ್ಭಾಗದಲ್ಲಿ ಜ್ಯಾಮಿತಿಕ ಆಕೃತಿಗಳನ್ನು ರೇಖಾತ್ಮಕವಾಗಿ ಚಿತ್ರಿಸಿದ್ದಾರೆ. ಹಣೆಯ ಭಾಗದಲ್ಲಿ ಪ್ರಶ್ನಾರ್ಥಕ ಚಿಹ್ನೆಯನ್ನು ವಿನ್ಯಾಸಯುಕ್ತವಾಗಿ ದುಡಿಸಿಕೊಂಡಿದ್ದಾರೆ. ಭಾವಚಿತ್ರದ ಸಂಯೋಜನಾ ಪದ್ಧತಿಯಂತೆ ರಚನೆಗೊಂಡ ಈ ಕೃತಿಯಲ್ಲಿ ಹಿರೇಗೌಡರ ಶೀರ್ಷಿಕೆಗೆ ತಕ್ಕ ಭಾವವನ್ನು ಸ್ಫುರಿಸುತ್ತವೆ.

**೧೪. ನಾಗರ (೨೦೦೬)**

ಜೀವಂತ ನಾಗರ ಹಾವು ಹಾಲು ಕುಡಿದರೂ, ಕಕ್ಕುವದು ವಿಷವನ್ನೇ ಎಂಬುದನ್ನು ಸಾರುವ ಈ ಚಿತ್ರ ಮೈತುಂಬ ಮುಳ್ಳುಗಳಿಂದ ತುಂಬಿಕೊಂಡಿದೆ. ಹಾಗೆಯೇ ನಾಗರ ಹಾವಿನ ಬಗ್ಗೆ ಮೈತುಂಬ ಕಣ್ಣಾಗಿರಬೇಕು. ಅದನ್ನು ಅದರ ಪಾಡಿಗೆ ಬದುಕಲು ಬಿಡಿ, ಆಗ ನೀವೂ ಸುರಕ್ಷಿತ, ಅದೂ ಸುರಕ್ಷಿತ ಎಂಬ ಸಂದೇಶವನ್ನು ನೀಡುವ ಈ ಕೃತಿ ರೇಖಾತ್ಮಕ ಛಾಯೆಗಳಿಂದ ರಚಿತಗೊಂಡಿದೆ. ಲಯಬದ್ಧವಾಗಿ ರಚನೆಗೊಂಡ ನಾಗರಹಾವಿನ ವಿನ್ಯಾಸ ಬಹು ವರ್ಣಗಳಿಂದ ರಚಿತಗೊಂಡಿದ್ದು ತನ್ನ ಹೆಡೆಯನ್ನು ಅರಳಿಸಿದೆ. ಆ ಹೆಡೆಯಲ್ಲಿ ಹಿರೇಗೌಡರು ಅದರ ಸೌಂದರ್ಯವನ್ನು ಸೃಷ್ಟಿಸುವ ಆಶಯದ ಹಿನ್ನೆಲೆಯಲ್ಲಿ ಅಲಂಕಾರಿಕ ವಿನ್ಯಾಸಗಳನ್ನು ರಚಿಸಿದ್ದಾರೆ. ಎಂದಿನಂತೆ ಹಿನ್ನೆಲೆಯಲ್ಲಿ ರೇಖಾತ್ಮಕ ಛಾಯೆಗಳನ್ನು ಜ್ಯಾಮಿತಿಕ ಆಕೃತಿಗಳನ್ನಾಗಿಸಿದ್ದು, ಅವಕಾಶದ ಇತರ ಭಾಗವನ್ನು ಹಾಗೆಯೇ ಉಳಿಸಿಕೊಳ್ಳುವುದರ ಮೂಲಕ ಆಕೃತಿಗೆ ಸ್ಪಷ್ಟತೆಯನ್ನು ನೀಡುತ್ತಾರೆ.

**ಉಪಸಂಹಾರ**

ಹಿರೇಗೌಡರು ರಚಿಸಿದ ೧೪ ಕಲಾಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇಲ್ಲಿನ ಬಹುಪಾಲು ಕೃತಿಗಳಲ್ಲಿ ರೇಖಾ ಪ್ರಧಾನವಾದ ಕೃತಿಗಳೇ ಇದ್ದು (ಚಿತ್ರ ೧,೨,೧೨,೧೩ ಮತ್ತು ೧೪) ಇವು ಒಂದೇ ಬಗೆಯ ರಚನಾ ತಂತ್ರವನ್ನು ಹೊಂದಿವೆ. ಅಂದರೆ ಈ ಕೃತಿಗಳಲ್ಲಿ ಹಿರೇಗೌಡರ ಎಂದಿನ ರೇಖಾ ತಂತ್ರಗಾರಿಕೆ ಇದ್ದರೂ, ಅಲ್ಲಲ್ಲಿ ವರ್ಣಗಳ ಲೇಪನವನ್ನು ದುಡಿಸಿಕೊಂಡ ಬಗೆಯಿಂದ ಅನನ್ಯ ಕಲಾಕೃತಿಗಳಾಗಿ ಮೈದಳೆದಿವೆ. ಚಿತ್ರ ೧೧ ವರ್ಣಗಳಿಂದ ಕೂಡಿದ ರೇಖಾತ್ಮಕ ಚಿತ್ರ. ಇನ್ನುಳಿದ ಕಲಾಕೃತಿಗಳು ಹಿರೇಗೌಡರು ಎಂದಿನಂತೆ ರಚಿಸಿದ ವರ್ಣ ಚಿತ್ರಗಳಂತೆಯೇ ಕಂಡು ಬರುತ್ತವೆ. ಅವುಗಳಲ್ಲಿ ವಿಷಯಗಳ, ತಂತ್ರಗಳ, ಆಕೃತಿಗಳ ಸಾಮ್ಯತೆಯನ್ನು ಎಂದಿನಂತೆ ಕಾಣಬಹುದಾಗಿದೆ. ಆದರೆ ಇಲ್ಲಿನ ಕಲಾಕೃತಿಗಳು ಬಹು ಮಾಧ್ಯಮಗಳನ್ನು ದುಡಿಸಿಕೊಂಡು ರಚಿಸಿದ ಹಿನ್ನೆಲೆಯಲ್ಲಿ ಬೇರೆ ಬೇರೆ ಬಗೆಯ ಪರಿಣಾಮಗಳನ್ನು ನೀಡಬಹುದಾಗಿದೆ.

********



ಅಧ್ಯಾಯ : ಐದು

# ವಿ.ಬಿ.ಹಿರೇಗೌಡರ : ಭಿತ್ತಿಚಿತ್ರ, ಭಿತ್ತಿಶಿಲ್ಪ ಮತ್ತು ಶಿಲ್ಪ ಕಲಾಕೃತಿಗಳು

ನಾಲ್ಕನೆಯ ಭಾಗದಲ್ಲಿ ಉರಿಬಿಸಿಲಿನ ಬೇಸಿಗೆಯ ಧಗೆಗೆ ಬೆಂದು ನೀರಡಿಕೆಯನ್ನು ಹಿಂಗಿಸಿಕೊಳ್ಳಲು ಪಕ್ಷಿಗಳು ನೀರಿನ ತೊಟ್ಟಿಯಲ್ಲಿ ಮಿಂದು, ನೀರು ಕುಡಿದು ನೀರಡಿಕೆ ಹಿಂಗಿಸಿಕೊಳ್ಳುತ್ತಿರುವ ಚಿತ್ರ ಬೇಸಿಗೆಯ ಪ್ರಖರತೆಯನ್ನು ಸೂಚಿಸುತ್ತದೆ

ಐದನೆಯ ಭಾಗದಲ್ಲಿ ಉರಿಬಿಸಿಲಿನಲ್ಲಿ ಛತ್ರಿ ನೆರಳಿನಲ್ಲಿ ಕಟ್ಟಡ ನಿರ್ಮಾಣಕ್ಕಾಗಿ ಜಲ್ಲಿಕಲ್ಲು ಒಡೆಯುವ ಕಾರ್ಮಿಕ ಹೆಂಗಳೆಯರ ದೃಶ್ಯ ಅಂಥ ಸಂದರ್ಭದಲ್ಲಿಯೇ ನೀರಡಿಕೆ ಇಂಗಿಸಿಕೊಳ್ಳಲು ತತ್ರಾಣಿ (ನೀರಿನ ಪಾತ್ರೆ)ಯನ್ನು ನೇತು ಹಾಕಿರುವ ದೃಶ್ಯ.

ಆರನೆಯ ಭಾಗದಲ್ಲಿ ಎತ್ತಿನ ಗಾಡಿಯಲ್ಲಿ ಕಲ್ಲು ಹೇರಿಕೊಂಡು ಬರುತ್ತಿರುವ ಕಾರ್ಮಿಕನ ದೃಶ್ಯ ರಚಿತವಾಗಿದೆ.

ಈ ಎಲ್ಲ ಸರಣೀ ದೃಶ್ಯಗಳನ್ನು ಒಟ್ಟುಗೂಡಿಸಿ ಒಂದು ಭಿತ್ತಿ ಚಿತ್ರ ಸುಂದರವಾಗಿ ಸಂಯೋಜಿಸಲ್ಪಟ್ಟಿದೆ. ಇದರಲ್ಲಿ ವಿನ್ಯಾಸಗೊಂಡ ಪ್ರತಿಯೊಂದು ವಸ್ತು ಹಾಗೂ ಮಾನವ ಕೃತಿಗಳು ವಿಶಿಷ್ಟ ನವ್ಯರೀತಿಯಲ್ಲಿ ರಚಿತವಾಗಿವೆ. ಅಲ್ಲದೆ ಬೇಸಿಗೆ ಅನುಭವಕ್ಕೆ ಪೂರಕವಾದ ವರ್ಣ ಸಂಯೋಜನೆಯಿಂದ ಕೂಡಿದ್ದು ಹಿರೇಗೌಡರು ತಮ್ಮ ಎಂದಿನ ಜ್ಯಾಮಿತಿಕ ವಿನ್ಯಾಸಗಳನ್ನೇ ಇಲ್ಲಿಯೂ ದುಡಿಸಿಕೊಂಡಿದ್ದಾರೆ. ಆ ವಿನ್ಯಾಸಗಳಿಗೆ ಕಪ್ಪು ವರ್ಣದ ರೇಖೆಗಳನ್ನು ಬಾಹ್ಯವಾಗಿ ಎಳೆದಿದ್ದಾರೆ. ಹಾಗೆಯೇ ಭಿತ್ತಿಚಿತ್ರದಲ್ಲಿನ ಮಾನವಾಕೃತಿಗಳು ಮತ್ತು ಭೌತಿಕ ಆಕೃತಿಗಳನ್ನು ರೇಖಾತ್ಮಕವಾಗಿ ಚಿತ್ರಿಸಿ, ಒಳಾವರಣವನ್ನು ವರ್ಣಗಳಿಂದ ಲೇಪಿಸಿದ್ದಾರೆ. ವರ್ಣಗಳನ್ನು ಪಾರದರ್ಶಕವಾಗಿ ದುಡಿಸಿಕೊಂಡ ಹಿರೇಗೌಡರು ವಿವಿಧ ಹಂತಗಳಲ್ಲಿ ವಿಷಯಕ್ಕೆ ಪೂರಕವಾಗುವ ಆಕೃತಿಗಳನ್ನು ರಚಿಸಿದ್ದು, ಪ್ರತೀ ಆಕೃತಿಗಳು ಅಂತರಿಕವಾಗಿ ಸಂಬಂಧವನ್ನು ಹೊಂದಿರುವ ಈ ಕಲಾಕೃತಿಯ ವಿಶೇಷ.

**೨. ದಾಸೋಹ ದರ್ಶನ (೧೯೯೧)**

ಗುಲ್ಬರ್ಗಾ ಶರಣಬಸವೇಶ್ವರರನ್ನು ಕುರಿತಾದ ಧಾರ್ಮಿಕ ಹಿನ್ನೆಲೆಯಲ್ಲಿ ರಚಿಸಿರುವ ಅಪೂರ್ವ ವಿನ್ಯಾಸ. ಇದರಲ್ಲಿ ಶರಣಬಸವೇಶ್ವರರು ಹಾಗೂ ಅವರ ಆರಾಧ್ಯ ಈಶ್ವರಲಿಂಗ, ಆ ಲಿಂಗದ ಕೆಳಗೆ ಕೈಯಲ್ಲಿ ಜೋಡು ನಂದಿಯನ್ನು ಆರಾಧಿಸುತ್ತ ಧ್ಯಾನಾಸಕ್ತನಾಗಿರುವ ಮಡಿವಾಳಪ್ಪ ಹಾಗೂ ಭಕ್ತ ಮಂಡಳಿ, ಇವೆಲ್ಲ ಪ್ರತಿಮೆಗಳನ್ನು ಕ್ರೋಢಿಕರಿಸಿ, ಭಕ್ತಿ, ಧ್ಯಾನ, ಸೇವೆ, ಹಾಗೂ ದಾಸೋಹದ ಭಾವಗಳನ್ನು ಸ್ಫುರಿಸುವ ಮಧುರವರ್ಣ ಪ್ರಯೋಗದ ಸಂಯೋಜನೆಯು ಭಕ್ತಿ ಪ್ರಧಾನವಾಗಿದ್ದು. ಲಂಬವಾಗಿ ಆಯತಾಕಾರದಲ್ಲಿ ರಚನೆಗೊಂಡಿರುವ ಈ ಭಿತ್ತಿ ಚಿತ್ರದಲ್ಲಿ ನಾಲ್ಕು ಹಂತಗಳನ್ನು ವಿಭಜಿಸಿ, ಪ್ರಧಾನ ಆಕೃತಿಗಳನ್ನು ಬಹುತೇಕವಾಗಿ ಕೇಂದ್ರ ರೇಖಾಂಶದಲ್ಲಿ, ಸಮಪ್ರಮಾಣದಲ್ಲಿ ಚಿತ್ರಿಸಲಾಗಿದೆ. ಮೇಲಿನ ಹಂತದಲ್ಲಿ ಎಲೆಬಳ್ಳಿಗಳ ವಿನ್ಯಾಸಗಳು ಭಿತ್ತಿಚಿತ್ರಕ್ಕೆ ಪ್ರಭಾವಳಿಯಂತೆ ಚಿತ್ರಿಸಲಾಗಿದೆ. ಪ್ರಬಾವಳಿಯ ಅರ್ಧ ವೃತ್ತಾಕಾರದ ವಿನ್ಯಾಸದಲ್ಲಿ ಶರಣಬಸವೇಶ್ವರರ ಪ್ರತಿಮೆ ರಚನೆಗೊಂಡಿವೆ. ಶರಣಬಸವೇಶ್ವರರು ಆರಾಧಿಸುತ್ತಿದ್ದ ಈಶ್ವರನನ್ನು ಶರಣಬಸವೇಶ್ವರರ ಆತ್ಮದಿಂದ ಚಿತ್ರಿತಗೊಂಡಿದೆ.

ಉದ್ಭವಿಸಿದಂತೆ ಚಿತ್ರಿಸಲಾಗಿದೆ. ಅದು ಮುಂದುವರೆದು ಮಡಿವಾಳಪ್ಪನ ರೂಪಾರ್ಥವನ್ನು ಪದ್ಮಪೀಠದಲ್ಲಿ ಪದ್ಮಾಸನದಲ್ಲಿ ಚಿತ್ರಿಸಿದ್ದಾರೆ. ಅಕ್ಕಪಕ್ಕದಲ್ಲಿ ದಂಪತಿಗಳೀರ್ವರು ಕೈಮುಗಿದು ನಮಸ್ಕರಿಸುವಂತೆ ಆಕೃತಿಗಳನ್ನು ರಚಿಸಲಾಗಿದೆ. ಮೇಲ್ನೋಟಕ್ಕೆ ಮೂರು ಆಯತಗಳಲ್ಲಿ ಆಕೃತಿಗಳು ಕಂಡು ಬಂದರೂ ಹಂತಗಳನ್ನು ನಾಲ್ಕು ಭಾಗಗಳನ್ನಾಗಿಸಿಕೊಂಡು ಈ ಮೇಲಿನ ವಿವರಣೆ ನೀಡಲಾಗಿದೆ. ಈ ಕೃತಿಯಲ್ಲಿ ಪ್ರಖರ ವರ್ಣಗಳ ಜೊತೆಗೆ ಪ್ರಶಾಂತವರ್ಣಗಳನ್ನು ಆಕೃತಿಗಳಲ್ಲಿ ಮತ್ತು ಹಿನ್ನೆಲೆಯಲ್ಲಿ ಕಾಣಬಹುದಾಗಿದೆ. ಭಿತ್ತಿ ಚಿತ್ರಗಳ ರಚನಾ ಸಂಪ್ರದಾಯವನ್ನು ಎಂದಿನಂತೆ ದುಡಿಸಿಕೊಂಡ ಹಿರೇಗೌಡರು, ಇಲ್ಲಿನ ಪ್ರತಿ ಆಕೃತಿಗೂ ಬಾಹ್ಯ ಅಂಚು ರೇಖೆಗಳನ್ನು ಎಳೆಯುವುದರ ಮೂಲಕ ಆಕೃತಿಗಳನ್ನು ಸ್ಪಷ್ಟೀಕರಿಸುವುದಕ್ಕೆ ಆದ್ಯತೆ ನೀಡಿದ್ದಾರೆ.

**ಉಪಸಂಹಾರ**

ಇಲ್ಲಿ ಎರಡು ಭಿತ್ತಿಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದ್ದು, ಎರಡೂ ಭಿತ್ತಿಚಿತ್ರಗಳು ವಿಭಿನ್ನ ನೆಲೆಯಲ್ಲಿ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುತ್ತವೆ. ಮೊದಲನೆಯದು ಇಂದಿನ ಬದುಕಿಗೆ ಸಂಬಂಧಪಟ್ಟಿದ್ದರೆ, ಎರಡನೆಯದು ಧಾರ್ಮಿಕ ಹಿನ್ನೆಲೆಯದ್ದು. ಮೊದಲನೆಯ ಚಿತ್ರದ ವರ್ಣಗಾರಿಕೆ ಪಾರದರ್ಶಕವಾಗಿ ರೂಪಿತಗೊಂಡಿದ್ದರೆ, ಎರಡನೆಯದು ಅಪಾರದರ್ಶಕ ವರ್ಣನಿರ್ವಹಣೆಯಿಂದ, ಒಂದು ಬಗೆಯಲ್ಲಿ ನೈಜ ತಂತ್ರಗಾರಿಕೆಯನ್ನು ಹೊಂದಿದೆ. ಅಡ್ಡಲಾದ ಪಟ್ಟಿಕೆಯಲ್ಲಿ ಚಿತ್ರಿತಗೊಂಡ ಭಿತ್ತಿಚಿತ್ರದಲ್ಲಿ ಆಕೃತಿಗಳು ಆಧುನಿಕವಾಗಿ ಸಂಯೋಜನೆಗೊಳ್ಳುವುದರ ಜೊತೆಗೆ ಆಧುನಿಕ ನೆಲೆಯಲ್ಲಿಯೇ ನಿರೂಪಿತಗೊಂಡಿವೆ. ಎರಡನೆಯ ಚಿತ್ರದಲ್ಲಿ ನೈಜ ನೆಲೆಯಲ್ಲಿ ನಿರೂಪಿತಗೊಂಡ ಆಕೃತಿಗಳು ಲಂಬವಾದ ಪಟ್ಟಿಕೆಯ ಮಧ್ಯರೇಖಾಂಶದಲ್ಲಿ ಸಂಯೋಜನೆಗೊಂಡು ಸಾಮಾನ್ಯ ನೋಡುಗರನ್ನು ತನ್ನತ್ತ ಸೆಳೆಯುತ್ತದೆ.

********

**ಭಾಗ ೨. ಭಿತ್ತಿಶಿಲ್ಪಗಳು**

**೧. ದಾವಣಗೆರೆ ಅರುಣ ಚಿತ್ರಮಂದಿರದ ನಾಟ್ಯ ಭಿತ್ತಿ ಶಿಲ್ಪ (೧೯೭೪)**

ಹಿರೇಗೌಡರು ಹೇಳುವಂತೆ ಈ ಸಿಮೆಂಟ್ ಭಿತ್ತಿ ಶಿಲ್ಪ ಅವರ ಕಲಾ ಜೀವನದ ಪ್ರಪ್ರಥಮ ಪ್ರಯೋಗವೆಂದು ಅಭಿಮಾನದಿಂದ ಹೇಳುತ್ತಾರೆ. ಈ ಭಿತ್ತಿ ಶಿಲ್ಪ ಹತ್ತು ಅಡಿ ಎತ್ತರ ಅರವತ್ತೈದು ಅಡಿ ಉದ್ದದ ಅಳತೆಯಲ್ಲಿ ರಚಿಸಲ್ಪಟ್ಟಿದೆ ಇದರಲ್ಲಿ ಸಂಯೋಜಿಸಿರುವ ಹದಿನೈದು ವಿವಿಧ ನೃತ್ಯ ಭಂಗಿಗಳು ನಿರೂಪಿತಗೊಂಡಿವೆ. ಈ ಸರಣಿಯ ಮಾಧ್ಯಮದಲ್ಲಿ ಅಲಂಕಾರಿಕ ಎಲೆಗಳು ನವಿರಾದ ನೃತ್ಯ ಭಂಗಿಯ ಶಿಲ್ಪಗಳು ವೈವಿಧ್ಯಮಯ ಆಭರಣಗಳಿಂದ ಅಲಂಕೃತಗೊಂಡಿವೆ. ಇವೆಲ್ಲ ನೃತ್ಯರೂಪಗಳನ್ನು ಒಂದುಗೂಡಿಸಲು ಲಯಬದ್ಧ ರೇಷೆಯನ್ನು ಹೆಣೆಯಲಾಗಿದ್ದು ವಿನ್ಯಾಸದ ಪ್ರಾರಂಭದಿಂದ ಕೊನೆಯವರೆಗೂ ನೋಡುಗನ ದೃಷ್ಟಿಯನ್ನು ಓದಿಸಿಕೊಂಡು ಸರಾಗವಾಗಿ ವೀಕ್ಷಿಸಿಕೊಂಡು ಹೋಗುತ್ತದೆ. ಇದು ಒಂದು ರೀತಿಯ ಸಂಗೀತದ ಲಯ–ಸ್ವರಗಳನ್ನು ಸಾಂಕೇತಿಕವಾಗಿ ಪ್ರತಿನಿಧಿಸುವ ಆಶಯವನ್ನು ಹೊಂದಿದೆ. ಇಲ್ಲಿ ಪ್ರತೀ ಆಕೃತಿಗಳು ನೃತ್ಯದ ಹಲವು ಭಂಗಿಗಳಲ್ಲಿ ರಚನೆಗೊಂಡಿವೆ. ನೀಳಕಾಯದ ಶರೀರ ರಚನೆಯ ಹಿನ್ನೆಲೆಯಲ್ಲಿ, ಅಲಂಕಾರಿಕ ಆಶಯ ಇಲ್ಲಿ ಪ್ರಧಾನವಾಗಿದೆ. ಯೌವ್ವನದ ಉತ್ತುಂಗದಲ್ಲಿರುವ ಯುವತಿಯರ ದೈಹಿಕ ಸೌಷ್ಠವವನ್ನು ಸಮರ್ಥವಾಗಿ ಸೆರೆ ಹಿಡಿದ ಹಿರೇಗೌಡರು, ನವಿಲುಗರಿಯಂತಹ, ಚಾಮರದಂತಹ ವಿನ್ಯಾಸಗಳನ್ನು ಭಿತ್ತಿಚಿತ್ರದ ಭಾಗವಾಗಿ ರಚಿಸಿದ್ದಾರೆ. ಈ ಭಿತ್ತಿಚಿತ್ರದ ಒಂದು ವಿಶೇಷ ಏನೆಂದರೆ– ಒಂದೇ ಸಾಲಿನಲ್ಲಿ ರಚಿತಗೊಂಡ ಆಕೃತಿಗಳಿಗೆ ಸಂಬಂಧವನ್ನು ಕಲ್ಪಿಸುವ ರೀತಿಯಲ್ಲಿ ಮತ್ತು ಸಂಗೀತ ಲಯ–ಸ್ವರಗಳನ್ನು ಬಿಂಬಿಸುವ ರೀತಿಯಲ್ಲಿ ಭಿತ್ತಿಚಿತ್ರದ ಉದ್ದಕ್ಕೂ (ಆಕೃತಿಗಳ ಹಿಂದೆ) ಲಯವಾದ ಪಟ್ಟಿಕೆ ರಚನೆಗೊಂಡಿದೆ. ಎರಡನೆಯದು ಇಲ್ಲಿನ ಪ್ರತೀ ಆಕೃತಿಯಲ್ಲಿ ಚೈತನ್ಯಯುಕ್ತ ನಿರ್ವಹಣೆ ಮೂಡಿರುವುದು. ಇಂತಹ ವೈಶಿಷ್ಟ್ಯಗಳಿಂದ ಈ ಭಿತ್ತಿಚಿತ್ರ ಅನನ್ಯ ಅನುಭವವನ್ನು ನೀಡುತ್ತದೆ.











೧. ದಾವಣಗೆರೆಯ ಅರುಣ ಚಲನಚಿತ್ರ ಮಂದಿರದ ನಾಟ್ಯ ಭಿತ್ತಿಶಿಲ್ಪ.
(ಸಿಮೆಂಟ್) ೧೯೭೪





೨. ವೈದ್ಯಪಿತಾಮಹ ಹಿಪೋಕ್ರಿಟಿಸ್ ಭಿತ್ತಿ ಶಿಲ್ಪ, (ಸಿಮೆಂಟ್) ೧೯೮೭



೩. ವಸಂತ ನೃತ್ಯ, ೧೯೯೧

೨. ವೈದ್ಯ ಪಿತಾಮಹ "ಹಿಪಾಕ್ರೆಟಿಸ್ - ಭಿತ್ತಿ ಶಿಲ್ಪ (೧೯೮೭)

ಈ ಭಿತ್ತಿ ಶಿಲ್ಪ ೧೦ ಅಡಿ ವ್ಯಾಸದ ವೃತ್ತದಲ್ಲಿ ರಚಿಸಲ್ಪಟ್ಟಿದೆ. ಇದರ ಮೂಲ ವಿನ್ಯಾಸ ಜೇಡಿಮಣ್ಣಿನಲ್ಲಿ ತೆಗೆದುಕೊಂಡು ನಂತರ ಪ್ಲಾಸ್ಟರಿನಿಂದ ತುಕುಡಿ ಅಚ್ಚು ತಯಾರಿಸಿ, ಸಿಮೆಂಟಿನಲ್ಲಿ ತುಂಡು ಎರಕಗಳನ್ನು ಮಾಡಿ ಪೂರ್ಣ ಮಟ್ಟದ ಮರು ಜೋಡಣೆ ಮಾಡಲಾಗಿದೆ. ಈ ವಿನ್ಯಾಸವು ದಾವಣಗೆರೆ ಸರ್ಕಾರಿ ಸಿ.ಜಿ. ಆಸ್ಪತ್ರೆಯ ಪ್ರವೇಶದ್ವಾರದ ಮುಖ್ಯ ಗೋಡೆಗೆ ಅನಾವರಣಗೊಳಿಸಲಾಗಿದೆ. ಇಂಥ ಪ್ರಯೋಗದಿಂದಾಗಿ ದಾವಣಗೆರೆ, ಚಿತ್ರದುರ್ಗ ನಗರದ ಅನೇಕ ಸಂಘ ಸಂಸ್ಥೆಗಳು ಭಿತ್ತಿ ವಿನ್ಯಾಸ ರಚನೆಗೆ ಮುಂದಾಗಿ ಕಲಾ ಸಂಸ್ಕೃತಿ ಬೆಳೆದು ಬರಲು ಸಹಕಾರಿಯಾಯಿತು ಎಂದು ಹಿರೇಗೌಡರು ಹೇಳುತ್ತಾರೆ. ಈ ಕೃತಿಯಲ್ಲಿ ವೈದ್ಯ ಪಿತಾಮಹ ಹಿಪೋಕ್ರೇಟಿಸ್ ಅನುಭವಿ ವ್ಯಕ್ತಿತ್ವವನ್ನು ಪ್ರಬುದ್ಧವಾಗಿ ಚಿತ್ರಿಸಿದ ಹಿರೇಗೌಡರು ಕೃತಿಯಲ್ಲಿ ದಾದಿ ಮತ್ತು ರೋಗಿಯನ್ನು ತುಂಬು ಆಕ್ಕರೆಯಿಂದ ಆರೈಕೆ ಮಾಡುತ್ತಿದ್ದಾರೆ. ತುಂಬ ಭಾವ ಸ್ಪರ್ಶಿಯಾಗಿರುವ ಇಲ್ಲಿನ ಆಕೃತಿಗಳ ಮೇಲಿನ ಉಡುಪಿನ ವಿನ್ಯಾಸ ಮೈಕಲ್ ಎಂಜೆಲೋನ ನಿರ್ವಹಣೆಯನ್ನೇ ನೆನಪಿಸುತ್ತದೆ. ಶರೀರ ರಚನೆಯಲ್ಲಿ, ನರನಾಡಿಗಳೆನ್ನೆಲ್ಲಾ ವಿವರವಾಗಿ ರೂಪಿಸಿದ ಹಿರೇಗೌಡರು ಈ ಶಿಲ್ಪಕ್ಕೆ ಸುಂದರವಾದ ವರ್ಣವಿನ್ಯಾಸವನ್ನು ರೂಪಿಸಿದ್ದಾರೆ.

೩. ವಸಂತ ನೃತ್ಯ (೧೯೯೧) (ಅಲ್ಯುಮಿನಿಯಂ ಉಬ್ಬು ಶಿಲ್ಪಗಳು)

ಇದೊಂದು ಲೋಹ ಫಲಕದ ಮೇಲೆ ಮಾಡಿದ ಉಬ್ಬು ತಂತ್ರವನ್ನು ಬಳಸಿಕೊಂಡು ರಚಿಸಿದ ಭಿತ್ತಿ ಶಿಲ್ಪ. ಫಲಕದಲ್ಲಿ ಭಿತ್ತಿಶಿಲ್ಪಗಳನ್ನು ರಾಜ್ಯದ ಇತರ ಕಲಾವಿದರು ಮಾಡಿದ್ದರೂ, ಪ್ರಸ್ತುತ ಶೈಲಿ ವಿಶಿಷ್ಟವೆನಿಸುತ್ತದೆ. ವಿನ್ಯಾಸ ರಚನೆಯಲ್ಲಿ ಉಬ್ಬು ತಗ್ಗಿನ ಪರಿಕಲ್ಪನೆಯಲ್ಲಿ ಮೂಡಿ ಬಂದ ಕೌಶಲ್ಯ ಒಟ್ಟಾರೆ ಮಯೂರ ನೃತ್ಯ ಭಂಗಿಯಲ್ಲಿ ಅದರ ಸ್ಫೂರ್ತಿದಾಯಕ ಚೈತನ್ಯ ವಿಶೇಷ ಅನುಭವ ನೀಡುತ್ತದೆ. ಹಿರೇಗೌಡರು ಅಲಂಕಾರಿಕ ನೆಲೆಯಲ್ಲಿ ವಿನ್ಯಾಸಗೊಳಿಸಿದ ಈ ಭಿತ್ತಿಶಿಲ್ಪದ ಹಿನ್ನೆಲೆಯಲ್ಲಿ ಆಧುನಿಕ ಎನಿಸುವ ಮತ್ತು ಅವರ ಎಂದಿನ ಹಿನ್ನೆಲೆಯ ವಿನ್ಯಾಸಗಳನ್ನೇ ವರ್ಣದ ಮೂಲಕ ದುಡಿಸಿಕೊಂಡಿದ್ದಾರೆ. ಅವಕಾಶದ ಮಧ್ಯಭಾಗಕ್ಕೆ ಸಮಾನಾಂತರವಾಗಿ, ವಿನ್ಯಾಸಗೊಂಡಿದ್ದು, ಒಳಾಂಗಣವು ಸೂಕ್ತವಾದ ವಿನ್ಯಾಸವನ್ನು ಹೊಂದಿದೆ.

೪.೫. ದಾವಣಗೆರೆ ಶಿವಾಲಿ ಚಿತ್ರ ಚಿತ್ರಮಂದಿರದ ನಾಟ್ಯ ಭಿತ್ತಿ ಶಿಲ್ಪಗಳು

ಇಲ್ಲಿ ಎರಡು ಭಿತ್ತಿ ಶಿಲ್ಪಗಳು ಚಿತ್ರಮಂದಿರದ ಮುಖ್ಯ ಪ್ರವೇಶದ್ವಾರದ ಮೇಲ್ಭಾಗದ ಹೊರಾಂಗಣದ ಗೋಡೆಯ ಮೇಲೆ ನೇರ ಸಿಮೆಂಟ್ ಮೆತ್ತಿಗೆಯ ವಿಧಾನದಲ್ಲಿವೆ. ಒಂದು ವಿನ್ಯಾಸ ೧೦x೨೦ ಅಡಿಯ ಅಳತೆಯಲ್ಲಿದ್ದು ಇನ್ನೊಂದು ೧೦x ೩೦ ಅಡಿ ಅಳತೆಯಲ್ಲಿ ವಿನ್ಯಾಸಗೊಳಿಸಲಾಗಿದೆ. ಇವೆಲ್ಲ ಉಬ್ಬು ಶಿಲ್ಪಗಳು ಭರತನಾಟ್ಯದ ವಿವಿಧ ಭಂಗಿಯಲ್ಲಿ ರಚಿಸಲ್ಪಟ್ಟಿದ್ದು ಕ್ಯೂಬಿಕ್ ಶೈಲಿಯಲ್ಲಿ ನಿರ್ಮಿತವಾಗಿರುವುದು ವಿಶೇಷ. ನೃತ್ಯ ಭಂಗಿಗಳು ನವಿರಾಗಿಯೂ ಚೇತೋಹಾರಿಯಾಗಿಯೂ ರಚಿತವಾಗಿದೆ. ಹಿರೇಗೌಡರು ಅರುಣಾ ಚಿತ್ರಮಂದಿರದ ಭಿತ್ತಿಶಿಲ್ಪವನ್ನು ಪ್ರಥಮ ಬಾರಿಗೆ ರಚಿಸಿದ್ದರೂ





೪,೫. ದಾವಣಗೆರೆ ಶಿವಾಲಿ ಚಲನಚಿತ್ರ ಮಂದಿರದ ನಾಟ್ಯ ಭಿತ್ತಿಶಿಲ್ಪ. (ಸಿಮೆಂಟ್) ೧೯೬೨




೬. ಯೋಗಿ ವೇಮನ ಭಿತ್ತಿಶಿಲ್ಪ, ೧೯೯೯



೭. ವರ್ಣಬಿಂದು ಭಿತ್ತಿಶಿಲ್ಪ, ೨೦೦೬

ಅದು ಒಂದು ಮಹತ್ವದ ಕೃತಿಯಾಗಿ ಈಗಲೂ ತನ್ನ ಅಸ್ತಿತ್ವವನ್ನು ಕಾಪಿಟ್ಟುಕೊಂಡಿದೆ. ಹಲವಾರು ವರ್ಷಗಳ ನಂತರ ರಚಿಸಿದ ಈ ಭಿತ್ತಿಶಿಲ್ಪ ಅದಕ್ಕಿಂತ ವಿಭಿನ್ನವಾಗಿ ರಚನೆಗೊಂಡಿದ್ದು ಅಲ್ಲಿರುವ ಲಯಗಾರಿಕೆ ಇಲ್ಲಿಯೂ ಮುಂದುವರೆದಿದೆ. ಆದರೆ ಕ್ಯೂಬಿಸ್ಟ ಶೈಲಿಯಲ್ಲಿ ರಚನೆಗೊಂಡಿರುವ ಇಲ್ಲಿನ ಆಕೃತಿಗಳು ಸ್ಥೂಲಕಾಯದ ಶರೀರವನ್ನು ಹೊಂದಿದ್ದು, ಸ್ಥಳಾವಕಾಶಕ್ಕೆ ಪೂರಕವಾಗಿ ಇಲ್ಲಿ ನೃತ್ಯಗಾರ್ತಿಯರ ಶಿಲ್ಪಾಕೃತಿಗಳು ರಚನೆಗೊಂಡಿವೆ.

**೬. ಯೋಗಿ ವೇಮನ ಭಿತ್ತಿ ಶಿಲ್ಪ (೧೯೯೯)**

ಈ ಭಿತ್ತಿ ಶಿಲ್ಪವು ಚಿತ್ರದುರ್ಗದ ರೆಡ್ಡಿ ಜನಸಂಘದ ವಿದ್ಯಾರ್ಥಿನಿಲಯದ ಮುಖ್ಯ ಕಟ್ಟಡದ ಮುಖ್ಯ ಪ್ರವೇಶದ್ವಾರದ ಮೇಲ್ಭಾಗದಲ್ಲಿ ಅನಾವರಣಗೊಳಿಸಲಾಗಿದೆ. ಇದರ ಅಳತೆ ೮x ೧೦ ಅಡಿಯಲ್ಲಿ ರಚಿತಗೊಂಡ ಸಿಮೆಂಟ ಉಬ್ಬು ಶಿಲ್ಪವಾಗಿದೆ. ಯೋಗಿ ವೇಮನ ತೆಲಗು ಭಾಷೆಯಲ್ಲಿ ಪ್ರಸಿದ್ಧ ವಚನಕಾರ. ತನ್ನ ಜೀವನದ ಉತ್ತರಾರ್ಧದಲ್ಲಿ ತನ್ನ ಸರ್ವಸ್ವವನ್ನು ತ್ಯಾಗಮಾಡಿ ಸನ್ಯಾಸ ಸ್ವೀಕರಿಸಿದ ಹಿನ್ನೆಲೆಯನ್ನು ಈ ಭಿತ್ತಿ ಶಿಲ್ಪ ವಿವರಿಸುತ್ತದೆ. ಮರದ ವಿನ್ಯಾಸದ ಕೆಳಗೆ ಕುಳಿತಿರುವ ವೇಮನ ತನ್ನ ಎಡಗಾಲನ್ನು ಚಾಚಿ ಬಲಗಾಲನ್ನು ಮಡಚಿಕೊಂಡಿರುವ ಶರೀರದ ವಿನ್ಯಾಸದಲ್ಲಿ ರಚಿಸಲಾಗಿದೆ. ವೇಮನನ ಕೇಶ ವಿನ್ಯಾಸ, ಅವನ ಶರೀರದ ವಿವರಗಳನ್ನು ಬಹು ಸೂಕ್ಷ್ಮವಾಗಿ ರೂಪಿಸಿರುವ ಹಿರೇಗೌಡರು ಹಿನ್ನೆಲೆಯಲ್ಲಿ ಗುಡ್ಡ ಬೆಟ್ಟಗಳನ್ನು ಗಿಡ ಮರಗಳನ್ನು ರೂಪಿಸಿರುವುದು ಕಂಡು ಬರುತ್ತದೆ. ಮೇಲ್ಭಾಗದಲ್ಲಿ ಅರ್ಧ ವರ್ತುಳಾಕಾರದ ವಿನ್ಯಾಸ ಕೆಳಭಾಗದಲ್ಲಿ ಚೌಕಾಕೃತಿ ಶಿಲ್ಪಕ್ಕೆ ಚೌಕಟ್ಟಿನಂತೆ ರಚಿಸಲಾಗಿದೆ.

**೭. ವರ್ಣಬಿಂದು**

ಹಿರೇಗೌಡರ ಮನೆಯ ಮುಂಭಾಗದ ಭಿತ್ತಿಗೆ ಇದನ್ನು ಅಲಂಕರಿಸಲಾಗಿದೆ. ಟೆರ್ರಾಕೋಟಾ ಮಾಧ್ಯಮದಲ್ಲಿ ರಚಿಸಲಾದ ಈ ಕೃತಿಯ ಮಧ್ಯದ ವಿನ್ಯಾಸ ವರ್ಣ ಬಿಂದುವಿನ ರೂಪಾರ್ಥವಾಗಿದೆ. ಆ ವರ್ಣ ಕಲಾಕೃತಿಗಳ ಮುಖೇನ ಸೂರ್ಯನಂತೆ ಬೆಳಗುವ ಸಾಮರ್ಥ್ಯವನ್ನು ಹೊಂದಿದೆ ಎಂಬ ಸಂದೇಶವನ್ನು ಇದು ನೀಡಬಹುದಾಗಿದೆ. ಉಬ್ಬು ವಿನ್ಯಾಸದಲ್ಲಿ ಹೆಚ್ಚಿನ ಅಲಂಕಾರಿಕ ಆಶಯ ಇಲ್ಲಿ ಪ್ರಕಟವಾಗದೇ ಇದ್ದರೂ ದೂರದಿಂದ ಆಕರ್ಷಕವಾಗಿ ಗೋಚರವಾಗುತ್ತದೆ ಈ ಭಿತ್ತಿಶಿಲ್ಪ.

**ಉಪಸಂಹಾರ**

ಹಿರೇಗೌಡರು ರಚಿಸಿದ ೭ ಭಿತ್ತಿಶಿಲ್ಪಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಅರುಣಾ ಚಿತ್ರಮಂದಿರದ ಭಿತ್ತಿಶಿಲ್ಪ ಮತ್ತು ಶಿವಾಲಿ ಚಿತ್ರಮಂದಿರದ ಭಿತ್ತಿಶಿಲ್ಪ ಒಂದೇ ಬಗೆಯ ರಚನಾ ವಿನ್ಯಾಸವನ್ನು ಹೊಂದಿದ್ದರೂ ಶಿವಾಲಿ ಚಿತ್ರಮಂದಿರದ ಭಿತ್ತಿಶಿಲ್ಪ ಕ್ಯೂಬಿಸ್ಟ ನೆಲೆಯಲ್ಲಿ ರಚನೆಗೊಂಡಿದೆ. ಹಿಪೋಕ್ರೇಟಿಸನ ಭಿತ್ತಿಶಿಲ್ಪ ಮತ್ತು ವೇಮನನ ಭಿತ್ತಿಶಿಲ್ಪಗಳು ಒಂದೇ ಬಗೆಯ ರಚನಾ ನೆಲೆಯಲ್ಲಿ

ಗೋಚರವಾಗುತ್ತಿದ್ದು, ವಿಷಯಕ್ಕೆ ಪೂರಕವಾದ ವಿಭಿನ್ನ ಸಂಯೋಜನೆ, ಆಕೃತಿಗಳಿವೆ. ಹಾಗೆಯೇ ಮಾಧ್ಯಮದ ದೃಷ್ಟಿಯಿಂದ ತೀರ ವಿಭಿನ್ನವಾಗಿರುವುದು ಮಯೂರ ಉಬ್ಬಶಿಲ್ಪ. ಲೋಹ ಮಾಧ್ಯಮದಲ್ಲಿ, ಅಲಂಕಾರಿಕ ನೆಲೆಯಲ್ಲಿ ರಚನೆಗೊಂಡಿದೆ. ವರ್ಣಬಿಂದು ಟೆರ್‍ರಾಕೋಟಾ ಮಾಧ್ಯಮದಾಗಿದ್ದು, ಸೂರ್ಯನಂತೆ ವಿನ್ಯಾಸಗೊಂಡಿದ್ದಾಗಿದೆ.

********

ಭಾಗ ೩. ಶಿಲ್ಪಗಳು

ಹಿರೇಗೌಡರು ಕೇವಲ ಚಿತ್ರಕಾರರಾಗಿ, ಆಡಳಿತಗಾರರಾಗಿ, ಕಲಾಶಿಕ್ಷಕರಾಗಿ ಮಾತ್ರ ಗೋಚರವಾಗದೇ ಒಬ್ಬ ಅನುಭವಿ ಶಿಲ್ಪಿಯಾಗಿ ನಮ್ಮ ನಡುವೆ ಗುರುತಿಸಿಕೊಳ್ಳುತ್ತಾರೆ. ಇಲ್ಲಿ ಹಿರೇಗೌಡರು ರಚಿಸಿದ ಎರಡು ಶಿಲ್ಪಕಲಾಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

೧. ಕುಂಚ ಬ್ರಹ್ಮ (೧೯೭೬)

ಇದೊಂದು ಸೃಜನಾತ್ಮಕ ಕಾಲ್ಪನಿಕ ಉದ್ಯಾನ ಶಿಲ್ಪವಾಗಿದ್ದು ೮ ಅಡಿ ಎತ್ತರದಲ್ಲಿ ಕಾಂಕ್ರೀಟ ಎರಕದಲ್ಲಿ ರಚಿಸಿದ ಶಿಲ್ಪವಾಗಿದೆ. ಈ ಶಿಲ್ಪವು ದಾವಣಗೆರೆಯ ಕುವೆಂಪು ವಿಶ್ವವಿದ್ಯಾಲಯ ಲಲಿತಕಲಾ ಮಹಾವಿದ್ಯಾಲಯದ ಪ್ರವೇಶದ್ವಾರದ ಹೊರಾಂಗಣದಲ್ಲಿ ರಚಿತಗೊಂಡಿದೆ. ಕುಂಚ ಬ್ರಹ್ಮವೆಂದು ನಾಮಕರಣಗೊಂಡ ಈ ಶಿಲ್ಪ ಧ್ಯಾನಾಸಕ್ತ ಭಾವವನ್ನು ಸ್ಫುರಿಸುತ್ತದೆ. ಹೃದಯ ಭಾಗದಲ್ಲಿ ಕುಂಚವನ್ನು ಪ್ರತಿಷ್ಠಾಪಿಸಲಾಗಿದೆ. ಶಿರಸ್ಥಾನದ ಮೇಲ್ಭಾಗದಲ್ಲಿ ಅರಳುವ ಕಮಲದ ಸಂಕೇತ ನೀಡಲಾಗಿದೆ. ಒಟ್ಟಾರೆ ಇದೊಂದು ವಿಶಿಷ್ಟ ಅಲಂಕಾರಿಕ ಶೈಲಿಯ ಶಿಲ್ಪವೆಂದು ಹೇಳಬಹುದು. ಈ ಶಿಲ್ಪ ಈ ಹಿಂದೆ ರಚಿತಗೊಂಡ ಯಾವುದೇ ಶಿಲ್ಪದ ಪ್ರಭಾವಕ್ಕೆ ಒಳಗಾಗಿಲ್ಲವೆಂಬುದು ಇದರ ವೈಶಿಷ್ಟ್ಯವಾಗಿದ್ದು, ಲಯಗಾರಿಕೆ ಇದರಲ್ಲಿ ಮುಖ್ಯವಾಗಿದೆ. ಪದ್ಮಾಸನದ ಭಂಗಿಯಲ್ಲಿ ಕಂಡು ಬರುವ ಆಕೃತಿಯ ಮೇಲ್ಮೈಯಲ್ಲಿ ಬಟ್ಟೆಯಂತಹ ವಿನ್ಯಾಸಗಳು ವರ್ಣದ ರೂಪಾರ್ಥತೆಯನ್ನು ಹೊಂದಿವೆ. ತಲೆಯ ಹಿಂದೆ ಕಮಲದಂತಹ ವಿನ್ಯಾಸ ಸೃಜನಶೀಲತೆಯನ್ನು ಪ್ರತಿಬಿಂಬಿಸುವಂತಹ ಪ್ರಭಾವಳಿಯಂತಹ ವಿನ್ಯಾಸವಿದೆ. ಒಂದು ಬಗೆಯಲ್ಲಿ ಬುದ್ಧನ ಆಕೃತಿಯನ್ನು ಹೋಲುವ ಈ ಕೃತಿಯನ್ನು ರಚಿಸುವಾಗ ವಿದ್ಯಾರ್ಥಿಗಳು ನೀಡಿದ ಸಹಕಾರವನ್ನು ಹಿರೇಗೌಡರು ಈಗಲೂ ಸ್ಮರಿಸಿಕೊಳ್ಳುತ್ತಾರೆ.



೧. ಕುಂಚಬ್ರಹ್ಮ, ೧೯೭೯



೨. ಬಿ. ಭೀಮರಾವ್, ೨೦೦೨

೨. ಬಿ. ಭೀಮರಾವ್ (೨೦೦೨)

ಈ ಶಿಲ್ಪವು ದಾವಣಗೆರೆ ನಗರದ ಪ್ರತಿಷ್ಠಿತ ನ್ಯಾಯವಾದಿಗಳು, ದಾನ ಚಿಂತಾಮಣಿಗಳು ಹಾಗೂ ದಾವಣಗೆರೆಯ ಮಾಧ್ವ ಸಂಘದ ಸಮುದಾಯ ಭವನಕ್ಕೆ ಭೂದಾನ ಮಾಡಿದ ಮಹಾದಾನಿಗಳಾದ ಬಿ.ಭೀಮರಾವ್ ಅವರದು. ಪ್ರಸ್ತುತ ಶಿಲ್ಪವು ಎರಡು ಅಡಿ ಎತ್ತರದಲ್ಲಿ ನಿರ್ಮಾಣವಾಗಿದ್ದು ಮಾಧ್ವ ಸಂಘದ ಸಮುದಾಯ ಭವನದಲ್ಲಿ ಪ್ರತಿಷ್ಠಾಪನೆಗೊಂಡಿದೆ. ಇದು ನೈಜ ಶೈಲಿಯ ಶಿಲ್ಪ ಕೃತಿಯಾಗಿ ಹೊರಹೊಮ್ಮಿದೆ ಅಲ್ಲದೆ ಸಜೀವ ಚೈತನ್ಯದ ಅನುಭವ ನೀಡುವಂಥ ಕಲಾತ್ಮಕ ಶಿಲ್ಪವೆಂದು ಪರಿಗಣಿಸಲ್ಪಟ್ಟಿದೆ.

**ಉಪಸಂಹಾರ**

ಹಿರೇಗೌಡರು ರಚಿಸಿದ ಎರಡು ಶಿಲ್ಪಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಎರಡೂ ಶಿಲ್ಪಗಳ ಅಸ್ತಿತ್ವ ವಿಭಿನ್ನವಾದುದು. ಮೊದಲನೆಯದು ಸೃಜನಾತ್ಮಕ ಶಿಲ್ಪವಾಗಿದ್ದರೆ, ಎರಡನೆಯದು ಅನುಕರಣಾತ್ಮಕವಾದುದು. ಮೊದಲನೆಯದರಲ್ಲಿ ಸೃಜನಾತ್ಮಕ ಚಿಂತನಾಕ್ರಮದೊಂದಿಗೆ ಬ್ರಹ್ಮನಿಗೆ ಕಲಾವಿದನನ್ನು ಹೋಲಿಸುವ ತಾತ್ವಿಕ ಕ್ರಮವಿದೆ.

********

**ಭಾಗ ೪. ಸ್ತಬ್ಧಚಿತ್ರಗಳು**

ಸ್ತಬ್ಧಚಿತ್ರಗಳು ಇಂದಿನ ಸಾಂಸ್ಕೃತಿಕ ಉತ್ಸವಗಳಲ್ಲಿ ಆಯಾ ದೇಶದ, ರಾಜ್ಯದ, ಜಿಲ್ಲೆಗಳ ಸಾಂಸ್ಕೃತಿಕ ಹಿರಿಮೆ ಗರಿಮೆಗಳನ್ನು ಸಾಂಕೇತಿಕವಾಗಿ ತೋರ್ಪಡಿಸಿ ಜನರಲ್ಲಿ ಸಾಂಸ್ಕೃತಿಕ ಪ್ರಜ್ಞೆಯನ್ನು ಎಚ್ಚರಿಸುವ ಒಂದು ಕಲಾಪ್ರಕಾರವಾಗಿವೆ. ಉದಾಹರಣೆಗಾಗಿ ಮೈಸೂರು ದಸರಾ ಉತ್ಸವದಲ್ಲಿ ಕರ್ನಾಟಕದ ಎಲ್ಲ ಜಿಲ್ಲೆಗಳ ಸ್ತಬ್ಧ ಚಿತ್ರಗಳು ಜಂಬೂ ಸವಾರಿಯಲ್ಲಿ ಪಾಲ್ಗೊಂಡು ಕರ್ನಾಟಕದ ಪ್ರತಿ ಜಿಲ್ಲೆಯ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಜನರಿಗೆ ತೋರ್ಪಡಿಸುವ ಸಂಪ್ರದಾಯ ರಾಜ ಮಹಾರಾಜರ ಕಾಲದಿಂದಲೂ ನಡೆದು ಬಂದಿದೆ. ಅಂತಹ ಸ್ತಬ್ಧ ಚಿತ್ರಗಳನ್ನು ರಚಿಸುತ್ತಿರುವರಲ್ಲಿ ವಿ.ಬಿ.ಹಿರೇಗೌಡರೂ ಸಹ ಒಬ್ಬರಾಗಿದ್ದು, ಐದಾರು ಸ್ತಬ್ಧ ಚಿತ್ರಗಳನ್ನು ರಚಿಸಿ ಪ್ರಶಸ್ತಿಗಳನ್ನು ಸಹ ಪಡೆದಿದ್ದಾರೆ, ಹೀಗೆ ಹಿರೇಗೌಡರಿಂದ ರಚಿಸಲ್ಪಟ್ಟ ಸ್ತಬ್ಧ ಚಿತ್ರಗಳನ್ನು ಇಲ್ಲಿ ಅಧ್ಯಯನದ ಭಾಗವಾಗಿ ಪರಿಚಯಿಸಲಾಗಿದೆ.

**೧. ಮೈಸೂರು ದಸರಾ ಮೆರವಣಿಗೆಗಾಗಿ ರೂಪಿಸಲಾದ ಚಿತ್ರದುರ್ಗ ಕೋಟೆಯ ಸ್ಥಬ್ಧ ಚಿತ್ರ- ಚಿತ್ರದುರ್ಗ ಜಿಲ್ಲೆ (೧೯೯೦.)**

೧೯೯೦ರ ಮೈಸೂರು ದಸರಾ ಜಂಬೂ ಸವಾರಿಯಲ್ಲಿ ಪಾಲ್ಗೊಂಡಿದ್ದ ಈ ಸ್ತಬ್ಧ ಚಿತ್ರ ಚಿತ್ರದುರ್ಗ ಜಿಲ್ಲೆಯನ್ನು ಪ್ರತಿನಿಧಿಸಿದ್ದು, ಇದರಲ್ಲಿ ಚಿತ್ರದುರ್ಗದ ಕೋಟೆ, ಅಲ್ಲಿನ ಬಂಡೆಗಳು. ಕಲ್ಲಿನ ತೋರಣಗಳನ್ನು ಹಿರೇಗೌಡರು ರಚಿಸಿದ್ದಾರೆ. ಬಂಡೆಗಳಿಗೆ ಕಿತ್ತಳೆ ವರ್ಣದ ಲೇಪನ ಮಾಡಿದ್ದರೆ. ತೋರಣಕ್ಕೆ ಕಪ್ಪು ಕಲ್ಲಿನಂತಹ ವರ್ಣ ಲೇಪನ ಮಾಡಿದ್ದಾರೆ.

**೨. ಮೈಸೂರು ದಸರಾ ಮೆರವಣಿಗೆಗಾಗಿ ರೂಪಿಸಲಾದ ಕುವೆಂಪುರವರ ಪಂಚ ಸೂತ್ರಗಳ ಸ್ಥಬ್ಧ ಚಿತ್ರ- ಶಿವಮೊಗ್ಗ ಜಿಲ್ಲೆ, (೧೯೯೬)**

೧೯೯೬ರ ಮೈಸೂರು ದಸರಾ ಜಂಬೂ ಸವಾರಿಯಲ್ಲಿ ಪಾಲ್ಗೊಂಡಿದ್ದ ಈ ಸ್ತಬ್ಧ ಚಿತ್ರ ಶಿವಮೊಗ್ಗ ಜಿಲ್ಲೆಯನ್ನು ಪ್ರತಿನಿಧಿಸಿದ್ದು. ಜಿಲ್ಲೆಯ ಪ್ರಕೃತಿ ತಾಣವಾದ ಸಹ್ಯಾದ್ರಿ ತಪ್ಪಲು. ಅವುಗಳ



೧. ಮೈಸೂರು ದಸರಾ ಮೆರವಣಿಗೆಗೆ
ರೂಪಿಸಲಾದ ಚಿತ್ರದುರ್ಗ ಕೋಟೆಯ ಸ್ತಬ್ಧಚಿತ್ರ, ೧೯೯೦ (ಚಿತ್ರದುರ್ಗ ಜಿಲ್ಲೆ)




೨. ಮೈಸೂರು ದಸರಾ ಮೆರವಣಿಗೆಗೆ
ರೂಪಿಸಲಾದ ಕುವೆಂಪುರವರ ಪಂಚಸೂತ್ರಗಳ ಸ್ತಬ್ಧಚಿತ್ರ, ೧೯೯೬ (ಶಿವಮೊಗ್ಗ ಜಿಲ್ಲೆ)



೨. ಮೈಸೂರು ದಸರಾ ಮೆರವಣಿಗೆಗೆ
ರೂಪಿಸಲಾದ ಹರಿಹರೇಶ್ವರ ವೈಭವದ ಸ್ತಬ್ಧಚಿತ್ರ, ೨೦೦೦ (ದಾವಣಗೆರೆ ಜಿಲ್ಲೆ)

ನಡುವೆ ಸರ್ವಧರ್ಮ ಸಮನ್ವಯವನ್ನು ಪ್ರತಿಪಾದಿಸುವ ಗುಡಿ, ಮಸೀದಿಗಳು ರಚನೆಗೊಂಡಿರುವ ಹಿನ್ನಲೆಯಲ್ಲಿ ಕುವೆಂಪುರವರ ಮನುಜ ಮತ, ವಿಶ್ವಪಥ, ಸರ್ವೋದಯ, ಸಮನ್ವಯ ಮತ್ತು ಪೂರ್ಣದೃಷ್ಟಿ ಎಂಬ ಪಂಚಸೂತ್ರಗಳನ್ನು ಅಳವಡಿಸಿಕೊಂಡಿದೆ.

**೩. ಮೈಸೂರು ದಸರಾ ಮೆರವಣಿಗೆಗೆ ರೂಪಿಸಲಾದ ಹರಿಹರೇಶ್ವರ ವೈಭವದ ಸ್ಥಭ್ಧ ಚಿತ್ರ ದಾವಣಗೆರೆ ಜಿಲ್ಲೆ.** (೨೦೦೦)

೨೦೦೦ರ ಮೈಸೂರು ದಸರಾ ಜಂಬೂ ಸವಾರಿಯಲ್ಲಿ ಪಾಲ್ಗೊಂಡಿದ್ದ ಈ ಸ್ತಬ್ಧ ಚಿತ್ರ ದಾವಣಗೆರೆ ಜಿಲ್ಲೆಯನ್ನು ಪ್ರತಿನಿಧಿಸಿದ್ದು, ಇದರಲ್ಲಿ ಹರಿಹರೇಶ್ವರ ದೇವಸ್ಥಾನದ ಗೋಡೆಯ ಮೇಲಿನ ಶಿಲ್ಪ ವಿನ್ಯಾಸಗಳು ರಚನೆಗೊಂಡಿವೆ. ಮೇಲ್ಭಾಗದಲ್ಲಿ ಹರಿಹರದಲ್ಲಿ ಹರಿದಿರುವ ತುಂಗಭದ್ರೆಯ ಉದರದಲ್ಲಿರುವ ಕಲ್ಲಿನ ಮಂಟಪದ ಪ್ರತಿಕೃತಿಯನ್ನು ರಚಿಸಲಾಗಿದೆ.

ಈ ಮೇಲಿನ ಸ್ತಬ್ಧ ಚಿತ್ರಗಳಲ್ಲದೇ ೧೯೯೧ರಲ್ಲಿ ಒಣಕೆ ಓಬವ್ವ ಸ್ತಬ್ಧಚಿತ್ರ, ೧೯೮೪ ರಲ್ಲಿ ನಾಯಕನ ಹಟ್ಟಿ ತಿಪ್ಪೇರುದ್ರಸ್ವಾಮಿ ವೈಭವದ ಸ್ತಬ್ಧಚಿತ್ರ, ೧೯೮೭ರಲ್ಲಿ ಮತ್ತಿ ಭರಮಣ್ಣ ನಾಯಕನ ಸ್ಥಬ್ದ ಚಿತ್ರಗಳು ಮೈಸೂರು ದಸರಾ ಮೆರವಣಿಗೆಯಲ್ಲಿ ಚಿತ್ರದುರ್ಗ ಜಿಲ್ಲೆಯನ್ನು ಪ್ರತಿನಿಧಿಸಿ ಸಾವಿರಾರು ಪ್ರವಾಸಿಗರ ಆಕರ್ಷಣೆಗೆ ಒಳಗಾಗಿ, ಮೆಚ್ಚುಗೆಗೆ ಮತ್ತು ಪ್ರಶಸ್ತಿಗೆ ಪಾತ್ರವಾದದ್ದು ಕಲಾವಿದ ಹಿರೇಗೌಡರಿಗೆ ಸಂದ ಗೌರವವಾಗಿದೆ.

********



ಅಧ್ಯಾಯ : ಆರು

# ವಿ.ಬಿ.ಹಿರೇಗೌಡರ
# ಕಲಾಕೃತಿಗಳ ಮೇಲಾದ ಪ್ರಭಾವ, ಪ್ರೇರಣೆ, ರಚನಾ ಶೈಲಿ, ತಂತ್ರಗಾರಿಕೆ

ಚಿತ್ರ, ಶಿಲ್ಪ, ನೃತ್ಯ, ಸಂಗೀತ, ಕಾವ್ಯ ಇತ್ಯಾದಿ ಕಲೆಗಳು ಸಮಾನಾಂತರವಾಗಿ ರೂಪುಗೊಂಡಿವೆ. ಇವೆಲ್ಲವೂ ಮೂಲತಃ ಮನುಷ್ಯನ ಸೃಜನಸಾಮರ್ಥ್ಯದ ಅಭಿವ್ಯಕ್ತಿಯ ಪರಿಣಾಮವಾಗಿದೆ. ಆದರೆ ಇವುಗಳಲ್ಲಿ ಒಂದು ಮತ್ತೊಂದಕ್ಕೆ ವ್ಯತ್ಯಾಸವಿರುವುದು ಆಯಾ ಕಲೆಗಳು ಆಯ್ಕೆ ಮಾಡಿಕೊಂಡಿರುವ ಅಥವಾ ಅಭಿವ್ಯಕ್ತವಾಗುವ ಮಾಧ್ಯಮಗಳಲ್ಲಿ. ಅದು ಹೊರತು, ಸೃಜನ ಪ್ರಕ್ರಿಯೆಯನ್ನು ಕುರಿತಂತೆ, ಮತ್ತು ಅವುಗಳ ಆಸ್ವಾದ ಹಾಗೂ ಆಸ್ವಾದದ ಅನುಭವವನ್ನು ಕುರಿತಂತೆ ಮೂಲಭೂತವಾದ ವ್ಯತ್ಯಾಸಗಳೇನೂ ತೋರುವುದಿಲ್ಲ.[೧] ಏಕೆಂದರೆ ಎಲ್ಲ ಕಲೆಗಳ ಉದ್ದೇಶ ರಸಾನುಭವವನ್ನು ನೀಡುವುದು. ಕಲಾವಿದನ ಸೃಜನಶೀಲ ಮನಸ್ಸಿಗೆ ವ್ಯಕ್ತಿಗತವಾದ ಅಥವಾ ಭೌತಿಕವಾದ 'ಪ್ರಭಾವ', ಪ್ರಾಕೃತಿಕ ಅಥವಾ ಸಾಮಾಜಿಕ ವಿದ್ಯಮಾನಗಳಿಂದ 'ಪ್ರೇರಣೆ', ಇವೆರಡನ್ನೂ ಒಗ್ಗೂಡಿಸಿಕೊಂಡು ದೃಶ್ಯ ಕಾವ್ಯವೊಂದರ ರಚನೆಗೆ ಬೇಕಾಗುವ ಸ್ವ ಸೃಜನವಾದ 'ಶೈಲಿ', ಹಾಗೂ ಇವು ಮೂರನ್ನೂ ಮೇಳೈಸಿಕೊಂಡು ನಿರ್ಮಿಸುವ ದೃಶ್ಯಗಳಿಗೆ ವಿಶಿಷ್ಟ 'ತಂತ್ರ' ನಿರ್ವಹಣೆ ಈ ನಾಲ್ಕು ನೆಲೆಗಳ ಮಧ್ಯೆ ಉತ್ತಮ ಬಾಂಧವ್ಯ ಕಲ್ಪಿಸಿಕೊಂಡಾಗ ಮಾತ್ರವೇ ಒಂದು ಉತ್ತಮ ಕಲಾಕೃತಿ ರಚನೆಯ ಸಾಧ್ಯವಿದೆ. ಈ ನಾಲ್ಕು ನೆಲೆಗಳನ್ನು ತಮ್ಮ ಅನುಭವದ ನೆಲೆಗಟ್ಟಿನಲ್ಲಿ ಗಟ್ಟಿಗೊಳಿಸಿಕೊಂಡ ಹಿರೇಗೌಡರ ಕಲಾಕೃತಿಗಳಲ್ಲಿ ಆ ನಾಲ್ಕು ನೆಲೆಗಳು ಸ್ಪಷ್ಟವಾಗಿ ಗೋಚರವಾಗುತ್ತವೆ.

ವಿಶ್ವದ ಯಾವುದೇ ಕಲಾವಿದರ ಕಲಾಕೃತಿಗಳನ್ನು ಅಧ್ಯಯನಕ್ಕೆ ಒಳಪಡಿಸಿದಾಗ ಮೇಲಿನ ನಾಲ್ಕು ನೆಲೆಗಳು ಬಹು ಪ್ರಮುಖ ಪಾತ್ರವಹಿಸುತ್ತವೆ. ಇದಕ್ಕೆ ಸೂಕ್ತ ಉದಾಹರಣೆ ಎಂದರೆ ಪಾಬ್ಲೋ ರೂಯಿಜ್ ಪಿಕಾಸೋವಿನ ಗೂಳಿ ಸರಣಿಯ ಚಿತ್ರಗಳು. ಈ ಚಿತ್ರಕ್ಕೆ ಪ್ರೇರಣೆ ಒದಗಿಸಿದ್ದು ಸ್ಪೇನಿನ ಗೂಳಿಕಾಳಗ. ಆ ದೇಶದ ಅತ್ಯಂತ ಜನಪ್ರಿಯ ಕ್ರೀಡೆಯಾದ ಗೂಳಿ ಕಾಳಗದ ಅಭಿಮಾನಿಗಳಲ್ಲಿ

೦೧. ಜಿ.ಎಸ್.ಶಿವರುದ್ರಪ್ಪ : ಕಾವ್ಯ ಮತ್ತು ಚಿತ್ರಕಲೆ :ಚಿತ್ರಕಲಾ (ಎಂ.ಎಸ್.ನಂಜುಂಡರಾವ್ ಅವರ ಅಭಿನಂದನಾ ಗ್ರಂಥ) ಪುಟ ೧೨೦-೧೨೧

ಪಿಕಾಸೋ ಕೂಡ ಒಬ್ಬ. ಹೀಗಾಗಿ ಅವನ ಜಗತ್ಪ್ರಸಿದ್ಧ ಕಲಾಕೃತಿ ಗೆರ್ನಿಕಾದಲ್ಲಿ ಹಿಟ್ಲರ್ ವ್ಯಕ್ತಿತ್ವದ ಪ್ರತಿಬಿಂಬವಾಗಿ ಕ್ರೂರ ಗೂಳಿಯನ್ನೇ ಸಾಂಕೇತಿಕಗೊಳಿಸುತ್ತಾನೆ.[೧] ಚಿತ್ರದ ರೂಪಾಂಶಗಳೆನ್ನೆಲ್ಲ ತನ್ನ ಅತ್ಯಂತ ಪ್ರಿಯವಾದ ಕ್ಯೂಬಿಸ್ಟ ಶೈಲಿಯಲ್ಲಿ ನಿರ್ಮಾಣ ಮಾಡುವ ಈತ, ಕ್ಯೂಬಿಸ್ಟ ತಂತ್ರಗಳನ್ನೇ ದುಡಿಸಿಕೊಳ್ಳುವುದರ ಮೂಲಕ ಒಂದು ಪ್ರಬುದ್ಧ ಕಲಾಕೃತಿಯನ್ನು ಲೋಕಾರ್ಪಣ ಮಾಡುತ್ತಾನೆ. ಇಂದು ಕಲಾವಿದನೊಬ್ಬನ ಸೃಜನಶೀಲ ಪ್ರಕ್ರಿಯೆಯಲ್ಲಿ ಕಂಡು ಬರುವ ಪ್ರಭಾವ, ಪ್ರೇರಣೆ, ಶೈಲಿ ಮತ್ತು ತಂತ್ರಗಾರಿಕೆಗೆ ಒಂದು ನಿದರ್ಶನ ಮಾತ್ರ, ಇನ್ನೊಂದು ಉದಾಹರಣೆಯಾಗಿ ಕರ್ನಾಟಕದ ಕಲಾವಿದರಾದ ನಾಡೋಜ ಆರ್.ಎಂ.ಹಡಪದರವರು ಸಹ ಪಿಕಾಸೋವಿನಿಂದ ಪೂರ್ಣವಾಗಿ ಪ್ರಭಾವಿತಗೊಂಡವರು. ಕರ್ನಾಟಕದಲ್ಲಿ ಆಧುನಿಕ ಕಲೆ ಅಸ್ತಿತ್ವದಲ್ಲಿ ಇಲ್ಲದ ಸಂದರ್ಭದಲ್ಲಿ ಅವರು ಅನುಸರಿಸಿದ್ದು ಪಿಕಾಸೋನ ಗ್ರಂಥವನ್ನು. ಆ ಗ್ರಂಥವೇ ಅವರಿಗೆ ಆಧುನಿಕ ಕಲೆಯ ಶಿಕ್ಷಕ. ಅದನ್ನು ಅಧ್ಯಯನ ಮಾಡಿದಾಗ ಎಲ್ಲ ನಾಲ್ಕೂ ನೆಲೆಗಳಿಂದ ಪಿಕಾಸೋನ ಕಲಾಕೃತಿಗಳಿಂದ ಪ್ರಭಾವಿತಗೊಂಡದ್ದೂ ಇದೆ. ಆದರೆ ಮುಂದುವರೆದ ಅವರ ಕಲಾಪ್ರಯೋಗಗಳಲ್ಲಿ ಬಾದಾಮಿ ಪರಿಸರ, ಸಾಮಾಜಿಕ ವಿದ್ಯಮಾನಗಳು ಮುಖ್ಯ ಪ್ರೇರಕಗಳಾಗುತ್ತವೆ. ಪಿಕಾಸೋನಿಂದ ಹಡಪದರವರು ಪ್ರಭಾವಿತಗೊಂಡರೆ, ಹಿರೇಗೌಡರು ಹಡಪದರವರ ಪ್ರಭಾವಕ್ಕೆ ಒಳಗಾಗಿದ್ದನ್ನು ಸ್ವತಃ ಹಿರೇಗೌಡರೇ ಕೃತಾರ್ಥರಾಗಿ ನೆನಪಿಸಿಕೊಳ್ಳುತ್ತಾರೆ. ಈ ಹಿನ್ನೆಲೆಯಲ್ಲಿ ಹಿರೇಗೌಡರ ಸೃಜನಶೀಲ ತುಡಿತಗಳ ಅಂತರಂಗದ ಕ್ರಿಯೆಗಳಾದ ಪ್ರಭಾವ, ಪ್ರೇರಣೆ, ಶೈಲಿ ಮತ್ತು ತಂತ್ರಗಾರಿಕೆಯನ್ನು ಅಧ್ಯಯನದ ಮೂಲಕ ಬಹಿರಂಗಗೊಳಿಸಲಾಗಿದೆ.

**ವಿ.ಬಿ.ಹಿರೇಗೌಡರ ಕಲಾಕೃತಿಗಳಲ್ಲಿ ಪ್ರಭಾವ**

ವಿ.ಬಿ.ಹಿರೇಗೌಡರು ಕಲಿತಿದ್ದು ಧಾರವಾಡದ ಡಿ.ವಿ.ಹಾಲಭಾವಿಯವರ ಕಲಾಶಾಲೆ ಮತ್ತು ಹುಬ್ಬಳ್ಳಿಯ ಕುಂಚಬ್ರಹ್ಮ ಡಾ.ಎಂ.ವಿ.ಮಿಣಜಗಿಯವರ ಕಲಾಶಾಲೆಯಲ್ಲಿ. ಇದನ್ನೂ ಹೊರತುಪಡಿಸಿ ಹೊರ ಪ್ರಪಂಚದ ಕಲಾಪ್ರಯೋಗಗಳ ಪ್ರಭಾವ ಹಿರೇಗೌಡರ ಕಲಾಕೃತಿಗಳಲ್ಲಿ ಕಾಣಬಹುದಾಗಿದೆ. ಹಿರೇಗೌಡರ ಕಲಾಧ್ಯಯನದ ಸಂದರ್ಭದಲ್ಲಿ ಬೆಳಗಾವಿಯ ಖ್ಯಾತ ಕಲಾವಿದರಾದ ಕೆ.ಬಿ.ಕುಲಕರ್ಣಿಯವರ ನೈಜ ರೀತಿಯ ತೈಲವರ್ಣ, ಜಲವರ್ಣ ಹಾಗೂ ಪೇಸ್ಟಲ್‌ನಲ್ಲಿ ರಚಿಸಿದ ನಗ್ನ ಚಿತ್ರಗಳು ಇವರಿಗೆ ಬಹುಪ್ರಭಾವ ಬೀರಿದವು. ಇದರಿಂದಾಗಿ ಹಿರೇಗೌಡರಿಗೆ ನೈಜತೆಯ ಪರಿಕಲ್ಪನೆ ಮೂಡಿತು.

ಇದೇ ಅಧ್ಯಯನದ ಅವಧಿಯಲ್ಲಿ ಡಾ.ಎಂ.ವಿ.ಮಿಣಜಗಿಯವರ ಪಾಶ್ಚಾತ್ಯ ಮಾದರಿಯ ಭಾವಚಿತ್ರಗಳು, ಭಾರತೀಯ ರಾಗಮಾಲ ಶೈಲಿಯ ಸಂಯೋಜನೆಗಳು, ಹಾಗೂ ಪಾಶ್ಚಾತ್ಯ ಮತ್ತು ಭಾರತೀಯ ಶೈಲಿಯ ಕಲಾಕೃತಿಗಳಲ್ಲಿ ಕಂಡುಬರುವ ನೈಜ ರೀತಿಯ ನೆರಳು ಬೆಳಕಿನ ಸೂಕ್ಷ್ಮತೆಗಳಿಂದ ಹಿರೇಗೌಡರು ಪ್ರಭಾವಿತಗೊಂಡಿದ್ದಾರೆ. ಜೊತೆಗೆ ಮಿಣಜಗಿಯವರು ತಮ್ಮ ಪ್ರಕೃತಿಚಿತ್ರಗಳಲ್ಲಿ ಬಳಸಿಕೊಳ್ಳುತ್ತಿದ್ದ ಓಪೆಕ್ ಮಾದರಿಯ ಪೋಸ್ಟರ್ ವರ್ಣಗಳಿಂದ ಪ್ರಭಾವಿತಗೊಂಡ ಹಿರೇಗೌಡರು ತಮ್ಮ ಕೃತಿಗಳಲ್ಲಿ ಅದನ್ನು ಬೇರೆ ಬೇರೆ ಬಗೆಗಳಲ್ಲಿ ದುಡಿಸಿಕೊಂಡಿದ್ದಾರೆ.

---

೧೦. ಪಾಬ್ಲೋ ಪಿಕಾಸೋ, ಪುಟ ೨೫೬

ಹಾಲಭಾವಿಯವರ ಜಲವರ್ಣದ ಭೂದೃಶ್ಯಗಳು ಕರ್ನಾಟಕ ಸಂದರ್ಭದಲ್ಲಿ ಅವಿಸ್ಮರಣೀಯ ಕಲಾಕೃತಿಗಳಾಗಿ ಎಲ್ಲ ಕಾಲಗಳಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡಿವೆ. ಹಾಲಭಾವಿಯವರು ಭೂದೃಶ್ಯಗಳಲ್ಲಿ ಜಲವರ್ಣದ ಪಾರದರ್ಶಕತೆ ತೋರಿಸುವ ತಂತ್ರ ಅನನ್ಯವಾದುದು. ಇಂತಹ ಪಾರದರ್ಶಕ ತಂತ್ರಗಳನ್ನು ಹಿರೇಗೌಡರ ಪ್ರಕೃತಿ ಚಿತ್ರಗಳಲ್ಲಿ ಕಾಣಬಹುದಾಗಿದೆ.

ಹಿರೇಗೌಡರು ಕಲಾಧ್ಯಯನ ಮುಗಿಸಿ ದಾವಣಗೆರೆ ಕಲಾಶಾಲೆಯಲ್ಲಿ ಉಪನ್ಯಾಸಕರಾಗಿ ನೇಮಕವಾದ ಸಂದರ್ಭದಲ್ಲಿ ಕರ್ನಾಟಕದ ಯಾವುದೇ ಭಾಗದಲ್ಲಿ ಆಧುನಿಕ ವಾಸನೆ ಇರಲಿಲ್ಲ. ೬೦ರದಶಕದ ಸಂದರ್ಭದಲ್ಲಿ ಕೆನ್ ಕಲಾಶಾಲೆಯ ಸ್ಥಾಪಕ ಪ್ರಾಚಾರ್ಯರಾಗಿದ್ದ ನಾಡೋಜ ಆರ್.ಎಂ. ಹಡಪದ ಅವರು ಆಧುನಿಕ ರೇಖಾಚಿತ್ರಗಳನ್ನು ರಚಿಸಿ ಬೆಂಗಳೂರಿನಲ್ಲಿ ಒಂದು ಕಲಾಪ್ರದರ್ಶನ ಏರ್ಪಡಿಸಿದ್ದು ಅಲ್ಲಿ ಪ್ರದರ್ಶನಗೊಂಡ ರೇಖಾಚಿತ್ರಗಳಿಂದ ಪ್ರಭಾವಿತಗೊಂಡ, ಆಧುನಿಕತೆಯತ್ತ ವಾಲಿದ ಹಿರೇಗೌಡರು ತಮ್ಮ ಮುಂದಿನ ಪ್ರಯೋಗಗಳನ್ನು ಆಧುನಿಕತೆಗೆ ರೂಪಾಂತರಿಸಿದರು. ತನ್ಮೂಲಕ ಹಿರೇಗೌಡರು ಮುಂದಿನ ದಿನಗಳಲ್ಲಿ ಅಧ್ಯಾಪನದ ಜೊತೆಗೆ ಸೃಜನಶೀಲವಾದ ಆಧುನಿಕ ರೇಖಾಚಿತ್ರಗಳನ್ನು, ವರ್ಣಕಲಾಕೃತಿಗಳನ್ನು ರಚಿಸುವ ಪ್ರಯತ್ನ ಮಾಡಿದರು. ಜೊತೆಗೆ ಹಡಪದರವರ ಕೋಲಾಜ್ ಕೃತಿಗಳಿಂದ ಪ್ರಭಾವಿತರಾದ ಹಿರೇಗೌಡರು ವರ್ಣಗಳಲ್ಲಿ ಕೋಲಾಜ್ ಮಾದರಿಯನ್ನು ಅನುಸರಿಸುತ್ತಾರೆ. ಅಲ್ಲದೇ ಮಿಶ್ರಮಾಧ್ಯಮ, ಇಂಪ್ಯಾಸ್ಟೋ, ಆಯಿಲ್ ಪೇಸ್ಟಲ್ ತಂತ್ರಗಾರಿಕೆಯಿಂದ ಹಿರೇಗೌಡರು ಪ್ರಭಾವಿತಗೊಂಡದ್ದು ಇದೆ. ನೈಜವಸ್ತುವನ್ನು ನವ್ಯತೆಯತ್ತ ಕೊಂಡೊಯ್ಯುವಂತಹ ಗುಣದಿಂದ ಪ್ರಭಾವಿತಗೊಂಡ ಹಿರೇಗೌಡರ ಪೂರ್ಣ ಭಾವಚಿತ್ರಗಳಲ್ಲಿಯೂ ಹಡಪದರವರ ಪ್ರಭಾವವನ್ನು ಕಾಣಬಹುದು.

ಹಡಪದರ ಜೊತೆಗೆ ಬೆಳಗಾವಿಯ ಖ್ಯಾತ ಕಲಾವಿದರಾದ ಕೆ.ಬಿ.ಕುಲಕರ್ಣಿಯವರ ಜಲವರ್ಣದ ಪಾರದರ್ಶಕ ಪರಿಣಾಮ, ಒದ್ದೆ ತಂತ್ರ, ಪೇಸ್ಟಲ್ ತಂತ್ರವನ್ನು ಹಿರೇಗೌಡರು ತಮ್ಮ ಪ್ರಕೃತಿ ಚಿತ್ರಗಳಲ್ಲಿ (ಪ್ರಕೃತಿ ಚಿತ್ರ ೩,೧೨) ಪ್ರಯೋಗಿಸಿದ್ದಾರೆ.

ಬಿ.ಕೆ.ಹುಬ್ಬಿಯವರು ರೇಖಾಚಿತ್ರಗಳಲ್ಲಿ ಸ್ಕೆಚ್ ಪೆನ್ ಬಳಸಿಕೊಳ್ಳುತ್ತಿದ್ದ ತಂತ್ರಗಾರಿಕೆಯಿಂದ ಪ್ರಭಾವಿತಗೊಂಡ ಹಿರೇಗೌಡರು ತಮ್ಮ ರೇಖಾಚಿತ್ರಗಳಲ್ಲೂ ಸ್ಕೆಚ್ ಪೆನ್ ಮಾಧ್ಯಮದಿಂದ ರೇಖಾ ಚಿತ್ರಗಳನ್ನು ರಚಿಸಿದ್ದಾರೆ. (ಮಿಶ್ರಮಾಧ್ಯಮ ಚಿತ್ರ ೨,೩,೪) ಕಲಾಕೃತಿಗಳಿಂದ ಪ್ರಭಾವಿತಗೊಂಡ ಹಿರೇಗೌಡರು, ಅವರ ತಂತ್ರಗಾರಿಕೆಯನ್ನು ನೈಜತೆಯನ್ನು ನವ್ಯತೆಯತ್ತ ರೂಪಾಂತರಿಸುವಲ್ಲಿ ಅವರ ತಂತ್ರಗಳನ್ನು ಬಳಸಿಕೊಂಡಿದ್ದಾರೆ. ಹುಬ್ಬಿ ಇವರ ನೈಜ ಚಿತ್ರಗಳ ರಚನಾ ವಿಧಾನ, ಸಂಯೋಜನಾ ಪದ್ಧತಿಗಳು ಹಿರೇಗೌಡರಿಗೆ ಪ್ರಭಾವ ಬೀರಿ ಅವರಿಗೆ ನೈಜತೆಯ ಸ್ಪಷ್ಟ ಪರಿಕಲ್ಪನೆ ಮೂಡಿಸಿದವು.

ಕೆ.ಕೆ.ಹೆಬ್ಬಾರ್ ಮತ್ತು ಶಿವಾಕ್ಷಿ ಚೌಡ ಅವರ ನೃತ್ಯ ಸರಣಿಯ ರೇಖಾಚಿತ್ರಗಳಿಂದ ಮನಸೋತು ತಮ್ಮ ಕೃತಿಗಳಲ್ಲಿ ಅವರ ಕೆಲವು ಅಂಶಗಳನ್ನು ರೂಪಾಂತರಿಸಿಕೊಂಡರು. ಜೊತೆಗೆ ೧೯೭೪ರ ಸಂದರ್ಭದಿಂದ ಪಾಶ್ಚಾತ್ಯ ಕಲಾವಿದರಲ್ಲಿ ಅಗ್ರಗಣ್ಯನಾಗಿದ್ದ ಸಾಲ್ವಿಡಾರ್ ಡಾಲಿಯ ರೂಪಾಕೃತಿಗಳಿಂದ

ಪ್ರಭಾವಿತಗೊಂಡ ಹಿರೇಗೌಡರು ತಮ್ಮ ಕಲಾಕೃತಿಗಳಲ್ಲಿ ಅಂತಹ (ಭಿತ್ತಿಚಿತ್ರ ೧, ತೈಲವರ್ಣ ೮) ಪ್ರಯೋಗಗಳನ್ನು ದುಡಿಸಿಕೊಂಡಿದ್ದಾರೆ.

ಪಿ.ಟಿ.ರೆಡ್ಡಿಯವರ ಕಲಾಕೃತಿಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ನೇರ ರೇಖೆ, ವಕ್ರ ರೇಖೆ, ತ್ರಿಕೋನ, ಚೌಕ, ಆಯತ ಇನ್ನಿತರ ಜ್ಯಾಮಿತಿಕ ಆಕೃತಿಗಳಿಂದ ಪ್ರಭಾವಿತರಾದ ಹಿರೇಗೌಡರು ತಮ್ಮ ಬಹುತೇಕ ಕಲಾಕೃತಿಗಳಲ್ಲಿ ಜ್ಯಾಮಿತಿಕ ಆಕೃತಿಗಳನ್ನು ಹಿನ್ನೆಲೆಯಾಗಿ ಅಪರೂಪಕ್ಕೆ ಮುನ್ನೆಲೆಯಾಗಿ ದುಡಿಸಿಕೊಂಡಿದ್ದಾರೆ. ಎಸ್.ಎಸ್.ಬೇಂದ್ರೆ ಅವರ ಪಾಯಿಂಟಾಲಿಸಮ್ ಶೈಲಿ ಹಾಗೂ ನೈಫ್ ತಂತ್ರದಿಂದ ಪ್ರಭಾವಿತಗೊಂಡ ಹಿರೇಗೌಡರು ತಮ್ಮ ಕೆಲವು ನೈಜ, ನವ್ಯ ಕಲಾಕೃತಿಗಳಲ್ಲಿ ಅಂತಹ ತಂತ್ರಗಳಿಂದ ರಚಿಸಿದ್ದಾರೆ.

ಹೀಗೆ ಬಹು ಕಲಾವಿದರಿಂದ ಪ್ರಭಾವಕ್ಕೆ ಒಳಗಾಗಿರುವ ಹಿರೇಗೌಡರು ಅವರ ಶೈಲಿಗಳನ್ನು ನೇರವಾಗಿ ಅನುಕರಿಸದೇ ಅವುಗಳನ್ನು ರೂಪಾಂತರಿಸಿ ತಮ್ಮ ಮನೋಧರ್ಮಕ್ಕೆ ತಕ್ಕಂತೆ ಕಲಾಕೃತಿಗಳನ್ನು ರಚಿಸಿದ್ದಾರೆ.

**ವಿ.ಬಿ.ಹಿರೇಗೌಡರ ಕಲಾಕೃತಿಗಳಲ್ಲಿ ಪ್ರೇರಣೆ**

ಕಲಾವಿದನಿಗೆ ಕಲಾಕೃತಿಯೊಂದರ ಹಿಂದೆ ಪ್ರೇರಣೆಯ ಅಗತ್ಯತೆ ಇದ್ದೇ ಇರುತ್ತದೆ. ಅದು ಬಹುತೇಕವಾಗಿ ಸಮಾಜದ ಮತ್ತು ಪ್ರಾಕೃತಿಕ ಪ್ರೇರಣೆಯಾಗಿರುತ್ತದೆ. ಹಿರೇಗೌಡರ ಇಲ್ಲಿನ ಬಹುತೇಕ ಕೃತಿಗಳಲ್ಲಿ ಪ್ರಕೃತಿ ಪ್ರೇರಣೆ, ಸಾಮಾಜಿಕ ಪ್ರೇರಣೆ, ವೈಜ್ಞಾನಿಕ ಪ್ರೇರಣೆ ಹೀಗೆ ಇನ್ನೂ ಮುಂತಾದ ನೆಲೆಗಳ ಪ್ರೇರಣೆಗಳು ಅವರ ಕಲಾಕೃತಿಗಳ ಹಿಂದೆ ಇವೆ. ಅವುಗಳನ್ನು ಹೀಗೆ ಪಟ್ಟಿ ಮಾಡಬಹುದು.

ಭೌತಿಕ ಪ್ರೇರಣೆಗೆ ಸಂಬಂಧಪಟ್ಟಂತೆ **ಅಕ್ರಿಲಿಕ್ ಮಾಧ್ಯಮ**ದ ಚಿತ್ರ ೧೧. ನಕ್ಷತ್ರ ಯುದ್ಧ, ೧೨. ನಕ್ಷತ್ರ ಯುದ್ಧ, ೧೫. ಚಂದ್ರ ಮತ್ತು ಭೂಮಿ, ತೈಲವರ್ಣದ ಚಿತ್ರ ೧೦. ಲಾವಾರಸ, ೩೪. ನಕ್ಷತ್ರ ಯುದ್ಧ ಇವು ನಭೋಮಂಡಲದ ಪ್ರೇರಣೆಯಿಂದ ಒಡಮೂಡಿದ ಕಲಾಕೃತಿಗಳು.

ಹಿರೇಗೌಡರ ಬಹಳಷ್ಟು ಕಲಾಕೃತಿಗಳಲ್ಲಿ ಪ್ರಾಕೃತಿಕ ಪ್ರೇರಣೆಗಳು ಉಂಟು. ಅವುಗಳು ಸಸ್ಯ ಆಧಾರಿತ, ಭೂಕಂಪ ಹೀಗೆ ವಿಭಿನ್ನ ಬಗೆಗಳ ಕುರಿತು ಪ್ರೇರಣೆ ಹೊಂದಿದ ಹಿರೇಗೌಡರು ಅವುಗಳನ್ನು ದೃಶ್ಯಾತ್ಮಕವಾಗಿ ಬಿಂಬಿಸಿದ್ದಾರೆ. ಉದಾಹರಣೆಗೆ **ಅಕ್ರಿಲಿಕ್ ಮಾಧ್ಯಮ**ದ ಚಿತ್ರ ೭. ಪ್ರಕೃತಿ, **ಶಾಯಿ** ಮಾಧ್ಯಮದ ಚಿತ್ರ ೩. ಮಧ್ಯರಾತ್ರಿಯ ಹೂವು, **ತೈಲ ಮಾಧ್ಯಮ**ದ ೭. ಚೆಂಬೆಳಕು, ೧೧. ಸಮುದ್ರ ತಟ, ೧೫. ಮಾಗಿದ ಎಲೆ, ೧೬. ಮಂಜಿನ ಹನಿಗಳು, ೧೮. ದಟ್ಟಕಾಡು ೧೯. ಭೂಕಂಪ, ೨೨. ಮತ್ಸ್ಯ ಸರಣಿಗಳು, ೨೫. ಪ್ರಿಯ ಪುಷ್ಪ ೩೦. ಬೇರುಗಳು ಇನ್ನೂ ಮುಂತಾದ ಚಿತ್ರಗಳು ಸಮುದ್ರ, ಸಸ್ಯ, ಭೂಕಂಪನದಂತಹ ಕಾಲಬದ್ಧ ಘಟನೆಗಳಿಂದ ಪ್ರೇರಣೆ ಪಡೆದಿದ್ದಾರೆ. ಈ ಪ್ರಕೃತಿ ಪ್ರೇರಿತ ಚಿತ್ರಗಳಲ್ಲಿ ಸೌಂದರ್ಯಾನುಭೂತಿಗೆ ಕಾರಣವಾದ ಕಲಾಕೃತಿಗಳ ಜೊತೆಗೆ ಘೋರ ದುರಂತಗಳಿಂದ ಜರ್ಜರಿತಗೊಂಡ ಮನಸ್ಸಿಗೆ ಪ್ರೇರಣೆ ಪಡೆದು ಚಿತ್ರಗಳನ್ನು ರಚಿಸಿದ್ದಾರೆ.

ಮಾನವಿಕ ಸಂಬಂಧಗಳ ಕುರಿತಂತೆ ಪ್ರೇರಣೆ ಪಡೆದ ಹಿರೇಗೌಡರು ಅನೇಕ ಚಿತ್ರಗಳನ್ನು ರಚಿಸಿದ್ದಾರೆ. **ಅಕ್ರಿಲಿಕ್ ಮಾಧ್ಯಮ**ದ ಚಿತ್ರ ೨. ಅವಳು ೩. ಕಾರ್ಮಿಕರು, ೧೬. ಸಂತೃಪ್ತ ಕುಟುಂಬ ೧೭. ಹೋಳಿ, **ತೈಲವರ್ಣ ಮಾಧ್ಯಮ**ದಲ್ಲಿ ಚಿತ್ರ ೮. ತಾಯಿ ಮಗು, ೨೧. ತಾಯಿ ಮಗು, ೨೩, ದುಃಖಿಗಳು ೨೬. ಅಧ್ಯಯನ, ೨೮. ಜೇನುತುಪ್ಪ, ೨೯. ಮಾನವೀಯ ಪಾಪ ಇನ್ನೂ ಮುಂತಾದ ಚಿತ್ರಗಳು ಮಾನವೀಯ ನೆಲೆಯ ಪ್ರೇರಣೆಯಿಂದ ಪಡೆದ ಚಿತ್ರಗಳಾಗಿವೆ.

ಇಂದು ದೇಶವನ್ನು ಅಭದ್ರತೆಯಿಂದ ಕಾಡುತ್ತಿರುವುದು ಭಯೋತ್ಪಾದನೆ ಮತ್ತು ಯುದ್ಧ. ಈ ಭಯೋತ್ಪಾದನೆಯ ಭೂತದ ಪ್ರೇರಣೆಯಿಂದ ಭಯೋತ್ಪಾದಕತೆ ಮತ್ತು ಯುದ್ಧದ ಕುರಿತಂತೆ ಅನೇಕ ಚಿತ್ರಗಳನ್ನು ರಚಿಸಿದ್ದಾರೆ. ಉದಾಹರಣೆಗಾಗಿ **ಅಕ್ರಿಲಿಕ್ ಮಾಧ್ಯಮ**ದ ಚಿತ್ರ ೧. ಯುದ್ಧ ಮತ್ತು ಶಾಂತಿ ೧೪. ಸ್ಫೋಟ, ೧೮. ಸ್ಫೋಟ, **ತೈಲವರ್ಣ ಮಾಧ್ಯಮ**ದಲ್ಲಿ ೧. ರಾಷ್ಟ್ರೀಯ ಭಾವೈಕ್ಯತೆ, ೧೨. ಭಾವಚಿತ್ರ, ೨೭. ಭಯೋತ್ಪಾದಕ, ೩೩. ಭಯೋತ್ಪಾದಕರು ಹೀಗೆ ಭಯೋತ್ಪಾದನೆ ಮತ್ತು ಯುದ್ಧದ ಪ್ರೇರಣೆಯಿಂದ ಮೇಲಿನ ವಿಷಯಗಳನ್ನು ಆಧರಿಸಿ ಚಿತ್ರ ರಚಿಸಿದ್ದಾರೆ.

ಇಷ್ಟೇ ಅಲ್ಲದೇ ಧಾರ್ಮಿಕತೆ, ಗ್ರಹಣ ಸಂಬಂಧಿ, ರಾಷ್ಟ್ರೀಯ ಭಾವೈಕ್ಯತೆ, ರಾಜಕೀಯ, ನಗರ ಬದುಕು, ಸಾಮಾಜಿಕ ಇನ್ನೂ ಮುಂತಾದ ಪ್ರೇರಣೆಗಳು ಹಿರೇಗೌಡರ ಕಲಾಕೃತಿಗಳ ಹಿಂದಿನ ಪ್ರೇರಣೆಯಾಗಿವೆ. ಇಂತಹ ಪ್ರೇರಣೆ, ಅವುಗಳ ವಿವರವನ್ನು ಆಯಾ ಮಾಧ್ಯಮದ ಅಧ್ಯಯನಗಳಲ್ಲಿ ಕಾಣಬಹುದಾಗಿದೆ.

**ವಿ.ಬಿ.ಹಿರೇಗೌಡರ ಕಲಾಕೃತಿಗಳ ರಚನಾ ಶೈಲಿ**

ವಿ.ಬಿ.ಹಿರೇಗೌಡರು ತಮ್ಮ ಬದುಕಿನುದ್ದಕ್ಕೂ ಸಾವಿರಾರು ಕಲಾಕೃತಿಗಳನ್ನು ರಚಿಸಿದ್ದಾರೆ. ಪ್ರತಿ ರಚನೆಯ ಹಿಂದೆ ಅವರು ಸರಣಿ ಕ್ರಮಗಳನ್ನು ಮತ್ತು ಏಕಪ್ರಕಾರವಾದ ಶೈಲಿಗಳನ್ನು ಅನುಸರಿಸಿದ್ದುಂಟು. ಹಾಗೆ ಅನುಸರಿಸಿದ ಶೈಲಿಗಳ ಕುರಿತಾಗಿ· ಇಲ್ಲಿ ಚರ್ಚಿಸಲಾಗಿದೆ.

**೧. ರಮಣೀಯ ಶೈಲಿ**

ಹಿರೇಗೌಡರು ಬಹಳಷ್ಟು ಕೃತಿಗಳಲ್ಲಿ ತಂತ್ರ, ವರ್ಣಗಾರಿಕೆಗಳಲ್ಲಿ ರಮಣೀಯತೆಯನ್ನು ಕಾಣಬಹುದಾಗಿದೆ. ಉದಾಹರಣೆಗೆ : ಭಾವಚಿತ್ರ ೩,೫, **ಅಕ್ರಲಿಕ್ ಮಾಧ್ಯಮ**ದಲ್ಲಿ ೨. ಹಿಮಾಚಲ ಪ್ರದೇಶ ತೈಲವರ್ಣದಲ್ಲಿ ಗುಹಾಂತರ ದೇವಾಲಯ, ಆಧುನಿಕ ಚಿತ್ರಗಳಲ್ಲಿ **ಅಕ್ರಿಲಿಕ್ ಮಾಧ್ಯಮ**ದಲ್ಲಿ ಚಿತ್ರ ೧೧. ನಕ್ಷತ್ರ ಯುದ್ಧ, **ತೈಲ ಮಾಧ್ಯಮ**ದಲ್ಲಿ ಚಿತ್ರ ೧. ರಾಷ್ಟ್ರೀಯ ಭಾವೈಕ್ಯತೆ, ೬. ಮದ್ರಾಸ್ ಕಣ್ಣು ೧೪. ಕರಗುತ್ತಿರುವ ಬಂಡೆಗಳು ೧೭. ಏಕದಂತ, ೨೫. ಪ್ರಿಯ ಪುಷ್ಪ, ೩೦. ಬೇರುಗಳು, ೩೧. ಸಂಯೋಜನೆ, ೩೪. ನಕ್ಷತ್ರ ಯುದ್ಧ ಶೈಲೀಕೃತ ಚಿತ್ರಗಳಲ್ಲಿ ೧. ಚೇತನ, ೩. ಸ್ಥಿರ ಚಿತ್ರಣ, ೪. ಸ್ಥಿರ ಚಿತ್ರಣ ಹೀಗೆ ರಮಣೀಯ ನೆಲೆಗಳಲ್ಲಿ ರಚಿಸಿದ ಚಿತ್ರಗಳೆಂದು ಗುರುತಿಸಬಹುದಾಗಿದೆ.

## ೨. ಫೋಟೋ ರಿಯಲಿಸ್ಟಿಕ್ ಶೈಲಿ

ಹಿರೇಗೌಡರು ಅಕಾಡೆಮಿಕ್, ಸಾಮಾಜಿಕ ಮತ್ತು ಧಾರ್ಮಿಕ ಚಿತ್ರಗಳಲ್ಲಿ ಫೋಟೋರಿಯಲಿಸ್ಟಿಕ್ ಶೈಲಿಯಲ್ಲಿ ಹಲವಾರು ಕಲಾಕೃತಿಗಳನ್ನು ರಚಿಸಿದ್ದಾರೆ. ಉದಾಹರಣೆಗಾಗಿ: ಭಾವಚಿತ್ರಗಳಲ್ಲಿ **ತೈಲವರ್ಣ ಮಾಧ್ಯಮ**ದಲ್ಲಿ ೧೨ರಿಂದ೬, ಪೂರ್ಣಭಾವಚಿತ್ರದಲ್ಲಿ ಚಿತ್ರ ೩, ೧. ಕುವೆಂಪು, ಧಾರ್ಮಿಕ ಪೂರ್ಣಭಾವಚಿತ್ರಗಳಲ್ಲಿ ೧೨ರಿಂದ೧೦. ಇನ್ನೂ ಮುಂತಾದ ತೈಲಮಾಧ್ಯಮದ ಶೈಲೀಕೃತ ಸಂಯೋಜನೆಯಲ್ಲಿ ಫೋಟೋ ರಿಯಲಿಸ್ಟಿಕ್ ತಂತ್ರವನ್ನು ಹಿರೇಗೌಡರು ಬಹಳ ಪ್ರಬುದ್ಧವಾಗಿ ದುಡಿಸಿಕೊಂಡಿರುವುದನ್ನು ಕಾಣಬಹುದಾಗಿದೆ.

## ೩. ಕ್ಯೂಬಿಸ್ಟ ಶೈಲಿ

ಹಿರೇಗೌಡರು ರೇಖಾಚಿತ್ರಗಳಲ್ಲಿ ಮತ್ತು ವರ್ಣಚಿತ್ರಗಳಲ್ಲಿ ಸಾಕಷ್ಟು ಘನಾಕೃತಿಗಳನ್ನು ಹಿನ್ನೆಲೆಯಾಗಿ ಮತ್ತು ಅಲ್ಲಲ್ಲಿ ಮುನ್ನೆಲೆಯ ಆಕೃತಿಗಳಲ್ಲಿ ದುಡಿಸಿಕೊಂಡಿದ್ದಾರೆ. ಉದಾಹರಣೆಗಾಗಿ **ಅಕ್ರಿಲಿಕ್ ಮಾಧ್ಯಮ**ದಲ್ಲಿ ಚಿತ್ರ ೬. ಧಾರ್ಮಿಕ ಸೌಹಾರ್ದತೆ, ೯. ಕೆಂಪು ಕಿಟಕಿ, ೧೫. ಚಂದ್ರ ಮತ್ತು ಭೂಮಿ, ೧೭. ಹೋಳಿ, ತೈಲವರ್ಣ ಮಾಧ್ಯಮದಲ್ಲಿ ಚಿತ್ರ ೪. ಸ್ಥಿರ ಚಿತ್ರಣ, ೫. ಸಂಯೋಜನೆ, ೮ ತಾಯಿ ಮಗು, ೧೭. ಏಕದಂತ, ೨೧. ತಾಯಿ ಮತ್ತು ಮಗು೨೬. ಅಧ್ಯಯನ, ೩೧. ಸಂಯೋಜನೆ ಇನ್ನೂ ಮುಂತಾದ ಕೃತಿಗಳನ್ನು ಅಧ್ಯಯನಕಾರರು ನೋಡಬಹುದು.

## ೪. ಪಾಶ್ಚಾತ್ಯ ಮತ್ತು ಭಾರತೀಯ ಶೈಲಿ ಸಮ್ಮಿಲನ

ಹಿರೇಗೌಡರು ತಮ್ಮ ಕೆಲವು ಕೃತಿಗಳಲ್ಲಿ ಪಾಶ್ಚಾತ್ಯ ಶೈಲಿಯೊಂದಿಗೆ ಭಾರತೀಯ ಶೈಲಿಯನ್ನು ಸಮೀಕರಿಸಿ ಕೆಲವಾರು ಕಲಾಕೃತಿಗಳನ್ನು ರಚಿಸಿದ್ದಾರೆ. ಉದಾಹರಣೆಗಾಗಿ **ಅಕ್ರಿಲಿಕ್** (ಆಧುನಿಕ) **ಮಾಧ್ಯಮ**ದ ಚಿತ್ರ ೧. ಅವಳು, ೪. ಸ್ಥಿರ ಚಿತ್ರಣ, ೧೬. ಸಂತೃಪ್ತ ಕುಟುಂಬ, ೧೭. ಹೋಳಿ, ತೈಲಮಾಧ್ಯಮದಲ್ಲಿ ಚಿತ್ರ ೧. ರಾಷ್ಟ್ರೀಯ ಭಾವೈಕ್ಯತೆ, ೨. ಪ್ರಗತಿ ಮತ್ತು ನೆಹರು, ೫. ಸಂಯೋಜನೆ ೮. ತಾಯಿ ಮತ್ತು ಮಗು, ೧೬. ಮಂಜಿನ ಹನಿಗಳು ೧೭. ಏಕದಂತ ಇನ್ನೂ ಮುಂತಾದ ಕಲಾಕೃತಿಗಳು ಪಾಶ್ಚಾತ್ಯ ಮತ್ತು ಭಾರತೀಯ ಶೈಲಿಯನ್ನು ಸಮೀಕರಿಸಿ ರಚಿಸಿದವುಗಳಾಗಿವೆ.

## ೫. ಪಾಯಿಂಟಾಲಿಸ್ಟ

ಹಿರೇಗೌಡರು ಬೇರೆ ಶೈಲಿಗಳಲ್ಲಿ ರಚಿಸಿದಷ್ಟು ಕಲಾಕೃತಿಗಳನ್ನು ಪಾಯಿಂಟಾಲಿಸ್ಟ ಶೈಲಿಯಲ್ಲಿ ರಚಿಸಿರುವುದು ಕಂಡುಬರುವುದಿಲ್ಲ. ಆದರೂ ಒಂದು ಕಲಾಕೃತಿ ಅಧ್ಯಯನ ಸಂದರ್ಭದಲ್ಲಿ ಲಭ್ಯವಾಗಿದ್ದು ಅದು ಮಿಶ್ರ ಮಾಧ್ಯಮದ ಪ್ರಕೃತಿ ಚಿತ್ರ ೧. ಬೆಂಗಳೂರಿನ ಪರಿಸರ.

## ೬. ಅಮೂರ್ತ ಶೈಲಿ

ಹಿರೇಗೌಡರು ಕೆಲವೇ ಕೆಲವು ಅಮೂರ್ತ ಚಿತ್ರಗಳನ್ನು ರಚಿಸಿದ್ದು ಅಂತಹ ಚಿತ್ರಗಳನ್ನು ಇಲ್ಲಿ ಉದಾಹರಿಸಲಾಗಿದೆ. ಅಕ್ರಿಲಿಕ್ (ಆಧುನಿಕ) ಮಾಧ್ಯಮ ಚಿತ್ರ ೮. ಸಂಯೋಜನೆ.

ಎ.ಬಿ.ಹಿರೇಗೌಡರ ಕಲಾಕೃತಿಗಳಲ್ಲಿ ತಂತ್ರಗಾರಿಕೆ

ಹಿರೇಗೌಡರು ತಮ್ಮ ಬಹುತೇಕ ಕಲಾಕೃತಿಗಳಲ್ಲಿ ಬಹುಬಗೆಯ ತಂತ್ರಗಳನ್ನು ದುಡಿಸಿಕೊಂಡಿದ್ದಾರೆ. ಅಂತಹ ತಂತ್ರಗಾರಿಕೆಯ ಮೂಲಕ ಕಲಾಕೃತಿಗೆ ವಿಶಿಷ್ಟ ಪರಿಣಾಮವನ್ನು ನೀಡುವ ಹಿನ್ನೆಲೆಯಲ್ಲಿ ತಂತ್ರಗಾರಿಕೆ ಬಹು ಮುಖ್ಯವಾದ ಪಾತ್ರವಹಿಸುತ್ತದೆ. ಹಿರೇಗೌಡರು ಇದುವರೆಗೆ ರಚಿಸಿದ ಕಲಾಕೃತಿಗಳಲ್ಲಿ ದುಡಿಸಿಕೊಂಡ ತಂತ್ರಗಾರಿಕೆಗಳನ್ನು ಈ ಕೆಳಗಿನಂತೆ ವರ್ಗೀಕರಿಸಿ ಸೂಚಿಸಲಾಗಿದೆ.

೧. ಜಲವರ್ಣ

ಹಿರೇಗೌಡರು ಜಲವರ್ಣದಲ್ಲಿ ಪ್ರಕೃತಿ ಚಿತ್ರ, ಭಾವಚಿತ್ರ, ಪೂರ್ಣಭಾವಚಿತ್ರಗಳನ್ನು ರಚಿಸಿದ್ದು ವಾಶ್ ಮೆಥಡ್, ಪಾರದರ್ಶಕ ಹಾಗೂ ಅಪಾರದರ್ಶಕ ತಂತ್ರಗಳಲ್ಲಿ ಚಿತ್ರಿಸಿದ್ದಾರೆ. ಉದಾಹರಣೆಗೆ-

**ವಾಶ್ ಮೆಥೆಡ್** : ಪ್ರಕೃತಿ ಚಿತ್ರ ೨. ಮುಂಜಾನೆಯ ಮಂಜು ೩. ಮುಂಜಾನೆಯ ಮಂಜು ೧೨. ಮುಂಜಾನೆಯ ಮಂಜು

**ಪಾರದರ್ಶಕ ತಂತ್ರ** : ಭಾವಚಿತ್ರದಲ್ಲಿ ಚಿತ್ರ ೧ ಮತ್ತು ೨, ಪೂರ್ಣಭಾವಚಿತ್ರದಲ್ಲಿ ಚಿತ್ರ ೧, ಪ್ರಕೃತಿ ಚಿತ್ರಗಳಲ್ಲಿ ಚಿತ್ರ ೧. ಹಂಪಿ ಪರಿಸರ, ೫. ಹಳೇಬೀಡು ಪರಿಸರ ೬. ಮಡಿಕೇರಿ ಪರಿಸರ, ೧೦. ಬನಶಂಕರಿ ಪರಿಸರ ಇನ್ನೂ ಮುಂತಾದವು.

**ಅಪಾರದರ್ಶಕ ತಂತ್ರ** : ಯಾವ ಕೃತಿಗಳೂ ಕಂಡುಬರುವುದಿಲ್ಲ.

೨. ಅಕ್ರಿಲಿಕ್

ಹಿರೇಗೌಡರು ಅಕ್ರಿಲಿಕ್ ಮಾಧ್ಯಮದಲ್ಲಿ ಪಾರದರ್ಶಕ ಮತ್ತು ಅಪಾರದರ್ಶಕ ತಂತ್ರದಿಂದ ಕಲಾಕೃತಿಗಳನ್ನು ರಚಿಸಿದ್ದು ಅವುಗಳನ್ನು ಈ ಕೆಳಗಿನಂತೆ ಉದಾಹರಿಸಬಹುದು.

**ಪಾರದರ್ಶಕ** : ಆಧುನಿಕ ಚಿತ್ರಗಳು : ಚಿತ್ರ ೪. ಸ್ಥಿರ ಚಿತ್ರಣ, ೫. ಅಡ್ಡರಸ್ತೆಗಳು ೧೬. ಸಂತೃಪ್ತ ಕುಟುಂಬ

೩. ಶಾಯಿ

ಹಿರೇಗೌಡರು ಶಾಯಿ ಮಾಧ್ಯಮದಲ್ಲಿ ಪಾರದರ್ಶಕ ಮತ್ತು ಅಪಾರದರ್ಶಕ ತಂತ್ರದಿಂದ ಕಲಾಕೃತಿಗಳನ್ನು ರಚಿಸಿದ್ದು ಅವುಗಳನ್ನು ಈ ಕೆಳಗಿನಂತೆ ಉದಾಹರಿಸಬಹುದು.

**ಪಾರದರ್ಶಕ** : ಆಧುನಿಕ ಚಿತ್ರಗಳು: ೪. ಕೆಂಪು ಮೋಡಗಳು, ೫. ಇಂದಿನ ಸುದ್ದಿ

**ಅಪಾರದರ್ಶಕ** : ಆಧುನಿಕ ಚಿತ್ರಗಳು : ೨. ಪಕ್ಷಿ ಕುಟುಂಬ, ೬. ನನ್ನ ಪ್ರೀತಿ

**೪. ತೈಲವರ್ಣ**

ಹಿರೇಗೌಡರು ತೈಲವರ್ಣ ಮಾಧ್ಯಮದಲ್ಲಿ ಪಾರದರ್ಶಕ ಮತ್ತು ಅಪಾರದರ್ಶಕ ತಂತ್ರದಿಂದ ಕಲಾಕೃತಿಗಳನ್ನು ರಚಿಸಿದ್ದು ಅವುಗಳನ್ನು ಈ ಕೆಳಗಿನಂತೆ ಉದಾಹರಿಸಬಹುದು.

**ಪಾರದರ್ಶಕ** : ಆಧುನಿಕ ಚಿತ್ರಗಳು: ೬. ಮದ್ರಾಸ್ ಕಣ್ಣು, ೧೭. ಏಕದಂತ, ೨೧. ತಾಯಿ ಮತ್ತು ಮಗು ೨೬. ಅಧ್ಯಯನ, ಇನ್ನೂ ಮುಂತಾದವು.

**ಅಪಾರದರ್ಶಕ** : ಆಧುನಿಕ ಚಿತ್ರಗಳು : ೧. ರಾಷ್ಟ್ರೀಯ ಭಾವೈಕ್ಯತೆ, ೨. ಪ್ರಗತಿ ಮತ್ತು ನೆಹರು, ೫. ಸಂಯೋಜನೆ, ೮. ತಾಯಿ ಮತ್ತು ಮಗು, ೯. ಸ್ವರ್ಣದ್ವಾರ, ೧೨. ಭಾವಚಿತ್ರ ಇನ್ನೂ ಮುಂತಾದವು.

**೫. ಡ್ರೈ ಪೇಸ್ಟಲ್**

ಹಿರೇಗೌಡರು ಡ್ರೈ ಪೇಸ್ಟಲ್ ಮಾಧ್ಯಮದಲ್ಲಿ ಪಾರದರ್ಶಕ ಮತ್ತು ಅಪಾರದರ್ಶಕ ತಂತ್ರದಿಂದ ಕಲಾಕೃತಿಗಳನ್ನು ರಚಿಸಿದ್ದು ಅವುಗಳನ್ನು ಈ ಕೆಳಗಿನಂತೆ ಉದಾಹರಿಸಬಹುದು.

**ಪಾರದರ್ಶಕ** : ಆಧುನಿಕ ಚಿತ್ರಗಳು: ೨. ಉದ್ಯಾನವನ, ೫. ಕೆಂಪು ಮೋಡಗಳು, ೭ ಉದ್ಯಾನವನ ಇನ್ನೂ ಮುಂತಾದವು.

**ಅಪಾರದರ್ಶಕ** : ಆಧುನಿಕ ಚಿತ್ರಗಳು : ೧. ಕುರ್ಚಿ, ೩. ಮುಂಗಾರು ಮಳೆ, ೪. ಪರ್ವತ, ೬. ಗಾಳಿಪಟ ಇನ್ನೂ ಮುಂತಾದವು.

**೬. ಮಿಶ್ರ ಮಾಧ್ಯಮ**

ಹಿರೇಗೌಡರು ಮಿಶ್ರಮಾಧ್ಯಮದಲ್ಲಿ ಪಾರದರ್ಶಕ ಅಪಾರದರ್ಶಕ ಮತ್ತು ರೇಖಾತ್ಮಕ ತಂತ್ರದಿಂದ ಕಲಾಕೃತಿಗಳನ್ನು ರಚಿಸಿದ್ದು ಅವುಗಳನ್ನು ಈ ಕೆಳಗಿನಂತೆ ಉದಾಹರಿಸಬಹುದು.

**ಪಾರದರ್ಶಕ** : ಆಧುನಿಕ ಚಿತ್ರಗಳು: ೧. ಕುರ್ಚಿಯ ಇತಿಹಾಸ, ೨. ಐತಿಹಾಸಿಕ ಸ್ಮಾರಕ, ೧೨. ನಾಗನಿಗೊಂದು ಕಲ್ಲು ಇನ್ನೂ ಮುಂತಾದವು.

**ಅಪಾರದರ್ಶಕ** : ಆಧುನಿಕ ಚಿತ್ರಗಳು : ೩. ಭಯೋತ್ಪಾದಕ ೪. ಮುಸ್ಸಂಜೆ ೫. ಚಿಗುರೆಲೆ ಹಣ್ಣೆಲೆ, ೭ ಪ್ರಕೃತಿ, ೮. ಸುನಾಮಿ ೧೦. ಕೆಂಪುಭೂಮಿ, ಇನ್ನೂ ಮುಂತಾದವು.

**ರೇಖಾತ್ಮಕ** : (ಆಧುನಿಕ) ೧೧. ಯುದ್ಧ, ೧೩. ಸ್ವಭಾವಚಿತ್ರ, ೧೪. ನಾಗರ ಇನ್ನೂ ಮುಂತಾದವು.

ಇಷ್ಟೇ ಅಲ್ಲದೇ ಹಿರೇಗೌಡರು ಕಲಾಕೃತಿ ರೂಪ, ವಿನ್ಯಾಸಗಳಿಗೆ ಪೂರಕವಾಗಿ ಡ್ರೈ ಬ್ರಶ್ ತಂತ್ರ, ವರ್ಣಟ್ಯೂಬ್‌ಗಳಿಂದ ನೇರವಾಗಿ ಕ್ಯಾನ್ವಾಸಿನ ಮೇಲೆ ಸವರುವ ತಂತ್ರ, ಕುಂಚದ ಹಿಂದಿನಿಂದ ರೇಖೆಗಳನ್ನು ಸೃಷ್ಟಿಸುವ ತಂತ್ರ, ಡ್ರೈ ಪೇಸ್ಟಲ್‌ಗಳ ಉತ್ಪಾದಿತ ರಚನೆಗಳನ್ನೇ ಚಪ್ಪಟೆಯಾಗಿ ಬಳಸಿಕೊಳ್ಳುವ ತಂತ್ರ, ತೈಲವರ್ಣದಲ್ಲಿ ಸೀಮೆ ಎಣ್ಣೆಯನ್ನು ಸಿಂಪಡಿಸಿ ಮೈವಳಿಕೆಯನ್ನು, ಆಕೃತಿಗಳನ್ನು ಸೃಷ್ಟಿಸುವ

ತಂತ್ರ, ಫೆವಿಕಾಲ್‌ನಿಂದ ಉಬ್ಬುಗಳನ್ನು ನಿರ್ಮಿಸಿ ವರ್ಣ ಲೇಪನ ಮಾಡುವ ತಂತ್ರ, ನೈಫ್ ತಂತ್ರ, ಸ್ಪ್ರೆಡ್ ತಂತ್ರ ಇನ್ನೂ ಮುಂತಾದ ತಂತ್ರಗಳನ್ನು ದುಡಿಸಿಕೊಂಡು ಕರ್ನಾಟಕ ಕಲಾಕ್ಷೇತ್ರಕ್ಕೆ ಸೃಜನಶೀಲ ಕಲಾಕೃತಿಗಳನ್ನು ನೀಡಿದ್ದಾರೆ.

*******

ಕನ್ನಡದ ನೆಲದಲ್ಲಿ ಎಷ್ಟೋ ಜನ ಕಲಾವಿದರು ಆಗಿ ಹೋಗಿದ್ದರೂ ಅವರುಗಳ ಕುರಿತಾದ ಇಂತಹ ಗಂಭಿರ ನೆಲೆಯ ಅಧ್ಯಯನಗಳು ಆಗದೇ ಇರುವ ಹಿನ್ನೆಲೆಯಲ್ಲಿ ಆ ಹಿರಿಯ ಚೇತನಗಳು ಜನಮಾನಸದಿಂದ ಅಳಿದುಹೋಗಿದ್ದಾರೆ. ನಮ್ಮಲ್ಲಿ ಸಂಶೋಧನಾತ್ಮಕ ಅಧ್ಯಯನಗಳು ಪ್ರಾರಂಭವಾಗಿದ್ದೇ ೮೦ರದಶಕದಲ್ಲಿ. ಹೀಗಾಗಿ ಅವುಗಳಿಗೆ ಇನ್ನೂ ಪ್ರಕಟಣೆಯ ಭಾಗ್ಯ ದೊರಕಿಲ್ಲ ಎಂಬುದು ವಿಷಾದದ ಸಂಗತಿ. ಆದರೆ ಪಾಶ್ಚಾತ್ಯರಲ್ಲಿ ೧೭–೧೮ನೆಯ ಶತಮಾನದಿಂದ ಕೃತಿಯ ಕುರಿತಾದ ವಿಮರ್ಶಾತ್ಮಕ ಪ್ರಬಂಧಗಳು, ಬರೆಹಗಳು ಅಲ್ಲಿನ ವಿದ್ವಾಂಸರಿಂದ ಮೂಡಿ ಅವು ಆಂಗ್ಲಬಾಷೆಯಲ್ಲಿ ಪ್ರಕಟವಾಗಿದ್ದರಿಂದ, ಭಾರತದಲ್ಲಿ ಸುಲಭವಾಗಿ ಪಾಶ್ಚಾತ್ಯ ಕಲಾವಿದರ ಕುರಿತಾದ ಗ್ರಂಥಗಳು ಹೇರಳವಾಗಿ ಲಭ್ಯವಾಗುತ್ತಿವೆ. ಇದರಿಂದ ನಮಗೆ ಭಾರತದ ಕಲಾವಿದರಿಗಿಂತ ಅನ್ಯ ದೇಶದ ಕಲಾವಿದರ ಕಲಾಕೃತಿಗಳ ಮತ್ತು ವಿವರಗಳು ಲಭ್ಯವಾಗುತ್ತಿರುವ ಹಿನ್ನೆಲೆಯಲ್ಲಿ ಯಾವುದೇ ಬಗೆಯ ಕಲಾ ವಿಮರ್ಶೆಗೆ ತೊಡಗಿಸಿಕೊಂಡಾಗ ಅನ್ಯ ದೇಶದ ಕಲಾವಿದರನ್ನೇ ನಾವು ಉಲ್ಲೇಖಿಸುವ ಪ್ರಸಂಗವನ್ನು ಎದುರಿಸುತ್ತಿದ್ದೇವೆ. ಇಂತಹ ಪ್ರಸಂಗಗಳನ್ನು ಎದುರಿಸುವುದಕ್ಕಿಂತ ಗಂಭೀರ ನೆಲೆಯ ಸಂಶೋಧನಾತ್ಮಕ ಅಧ್ಯಯನಗಳು ಆಗಿದ್ದೇ ಆದಲ್ಲಿ ನಮ್ಮ ನೆಲದ ವಾಸನೆಯನ್ನೇ ಬರೆಹಗಳ ಸಂದರ್ಭದಲ್ಲಿ ಸವಿಯಬಹುದು. ಇಂತಹ ಮಹತ್ವದ ಉದ್ದೇಶವನ್ನು ಈ ಮಹಾಪ್ರಬಂಧ ಕಿಂಚಿತ್ತಾದರೂ ಈಡೇರಿಸಿದೆ ಎಂಬ ತೃಪ್ತಿ ಇದೆ.

ವಿ.ಬಿ.ಹಿರೇಗೌಡರವರ ಅಧ್ಯಯನ ಬಹುಮುಖಿ ನೆಲೆಯದ್ದು. ಏಕೆಂದರೆ ಕಲಾಶಾಲೆಯ ಆಡಳಿತಗಾರರಾಗಿ, ಕಲಾಶಿಕ್ಷಕರಾಗಿ ಹಾಗೂ ಕಲಾವಿದರಾಗಿ ಈ ಮೂರು ನೆಲೆಯಲ್ಲಿ ಅಧ್ಯಯನ ಮಾಡಿದ್ದರೂ ಸಹ ವಿಶೇಷವಾಗಿ ಅವರ ಸೃಜನಶೀಲ ಮನಸ್ಸಿನಿಂದ ಒಡಮೂಡಿದ ನೂರಾರು ಕಲಾಕೃತಿಗಳನ್ನು ಗಂಭೀರ ನೆಲೆಯಲ್ಲಿ ಸ್ವೀಕರಿಸಿ ಅಧ್ಯಯನಕ್ಕೆ ಒಳಪಡಿಸುವುದರ ಮೂಲಕ ಈ ಮಹಾಪ್ರಬಂಧ ರಚನೆಗೊಂಡಿದೆ.

ಪ್ರಸ್ತುತ ಅಧ್ಯಯನವನ್ನು ಏಳು ಅಧ್ಯಾಯಗಳಲ್ಲಿ ಮಾಡಲಾಗಿದೆ. ಪ್ರತಿ ಅಧ್ಯಾಯದಲ್ಲಿ ಮಾಡಿದ ಅಧ್ಯಯನದ ವಿವರ ಈ ಕೆಳಗಿನಂತಿದೆ.

**ಒಂದನೆಯ ಅಧ್ಯಾಯ**ದಲ್ಲಿ ಪ್ರಸ್ತುತ ಅಧ್ಯಯನದ ಉದ್ದೇಶವನ್ನು ವಿವರಿಸುವುದರೊಂದಿಗೆ, ಅಧ್ಯಯನದ ಸ್ವರೂಪ, ಅಧ್ಯಯನದ ವೈಧಾನಿಕತೆ ಮತ್ತು ವ್ಯಾಪ್ತಿಯ ಕುರಿತು ಹೇಳಲಾಗಿದೆ.

**ಎರಡನೆಯ ಅಧ್ಯಾಯ**ದಲ್ಲಿ ವಿ.ಬಿ.ಹಿರೇಗೌಡರ್‌ರವರ ಅವರ ಜನ್ಮ ಸ್ಥಳದ ಸಾಂಸ್ಕೃತಿಕ ಪರಿಸರ, ಬಾಲ್ಯ ಜೀವನ, ತಂದೆತಾಯಿ, ಕೌಟುಂಬಿಕ ಹಿನ್ನೆಲೆ ಪ್ರಾಥಮಿಕ, ಪ್ರೌಢಶಿಕ್ಷಣ ಹಂತಗಳನ್ನು ಮತ್ತು ಇದೇ ಸಂದರ್ಭದಲ್ಲಿ ಕಲೆಯ ಕಡೆಗೆ ಹರಿದು ಮುಂದುವರೆದ ಅವರ ಮನಸ್ಸು, ಪ್ರೇರಣೆ ನೀಡಿದ ಗುರುಗಳು ಇತ್ಯಾದಿ ವಿಷಯಗಳನ್ನು ಪ್ರಸ್ತಾಪಿಸಲಾಗಿದೆ. ವಿ.ಬಿ.ಹಿರೇಗೌಡರ್ ಅವರು ತಮ್ಮ ಕಲಾಶಿಕ್ಷಣವನ್ನು ಧಾರವಾಡದಲ್ಲಿ ಕಲಾಗುರು ಡಿ.ವಿ.ಹಾಲಭಾವಿಯವರ ಕಲಾಶಾಲೆಯಲ್ಲಿ ಪೂರೈಸಿದರು. ಆ ಸಂದರ್ಭದ ದಿನಗಳನ್ನು ಮೆಲುಕು ಹಾಕುವ ಮತ್ತು ಅಂದಿನ ಶೈಕ್ಷಣಿಕ ದಿನಗಳಲ್ಲಿ ಡಿ.ವಿ.ಹಾಲಭಾವಿಯವರು, ಡಾ.ಎಂ.ವಿ.ಮಿಣಜಿಗಿಯವರು ಹಾಗೂ ಬಸವರಾಜ ಹಳೇಜೋಳದ ಹಿರೇಗೌಡರ ಅವರಿಗೆ ಕಲಾಶಿಕ್ಷಣ ನೀಡಿದ ಕುರಿತು ಇಲ್ಲಿ ಸಮಗ್ರ ಮಾಹಿತಿಯನ್ನು ದಾಖಲಿಸಲಾಗಿದೆ. ಇದೇ ಅಧ್ಯಾಯದ ಇನ್ನೊಂದು ಭಾಗವಾಗಿ ಹಿರೇಗೌಡರ್ ಅವರು ದಾವಣಗೆರೆ ಕಲಾಶಾಲೆಯ ಉಪನ್ಯಾಸಕರಾಗಿ ನೇಮಕಗೊಂಡು ಎಂಟು ವರ್ಷಗಳ ಕಾಲ ವಿದ್ಯಾರ್ಥಿಗಳೊಂದಿಗೆ ಬೆರೆತ ದಿನಗಳನ್ನು ಮತ್ತು ನಂತರದ ದಿನಗಳಲ್ಲಿ ಅದೇ ಕಲಾಶಾಲೆಯ ಪ್ರಾಚಾರ್ಯರಾಗಿ ಆಡಳಿತದ ಚುಕ್ಕಾಣಿ ಹಿಡಿದ ಅವರು ಕೈಗೊಂಡ ಕಾರ್ಯಗಳನ್ನು ಇಲ್ಲಿ ದಾಖಲಿಸಲಾಗಿದೆ. ಇದರೊಂದಿಗೆ ಅವರ ಸಹೋದ್ಯೋಗಿಗಳನ್ನು ಸಂದರ್ಶಿಸಿ ಹಿರೇಗೌಡರ ಅವರ ಬಗ್ಗೆ ಅಭಿಪ್ರಾಯಗಳನ್ನು ಸಂಗ್ರಹಿಸಿ ದಾಖಲಿಸುವ ಕಾರ್ಯವನ್ನು ಇಲ್ಲಿ ಮಾಡಲಾಗಿದೆ. ತಮ್ಮ ವೃತ್ತಿಯೊಂದಿಗೆ ಕಲಾಕೃತಿಗಳನ್ನು ರಚಿಸುವ ಪ್ರವೃತ್ತಿಯನ್ನು ಗಂಭಿರವಾಗಿ ಕೈಗೊಂಡ ಗೌಡರು ಈ ಸಂದರ್ಭದಲ್ಲಿ ಸುಮಾರು ೧೦,೦೦೦ರೇಖಾ ಚಿತ್ರಗಳು, ೨,೦೦೦ ಜಲವರ್ಣ ಚಿತ್ರಗಳು ಹಾಗೂ ೧,೦೦೦ ತೈಲವರ್ಣ ಮತ್ತು ಮಿಶ್ರಮಾಧ್ಯಮದ ಚಿತ್ರಗಳನ್ನು ರಚಿಸಿದ್ದರೂ ಅಧ್ಯಯನದ ವ್ಯಾಪ್ತಿಗೆ ಪೂರಕವಾಗಿ ಆಯ್ದ ಕಲಾಕೃತಿಗಳನ್ನು ಇಲ್ಲಿ ಅಧ್ಯಯಕ್ಕೆ ಒಳಪಡಿಸಲಾಗಿದೆ.

**ಮೂರನೆಯ ಅಧ್ಯಾಯ**ದಲ್ಲಿ ಹಿರೇಗೌಡರವರು ಈವರೆಗೆ ರಚಿಸಿದ ಅಸಂಖ್ಯಾತ ರೇಖಾ ಚಿತ್ರಗಳು ಅವರ ಕಲಾಭಿವ್ಯಕ್ತಿಗೆ ಬೆನ್ನೆಲುಬಾಗಿ ನಿಂತಿವೆ. ನಿತ್ಯ ರಚಿಸುವ ರೇಖಾಚಿತ್ರಗಳು ಅನೇಕ ಸಂಯೋಜನೆ ಕಲಾಕೃತಿಗಳ ಹುಟ್ಟಿಗೆ ಕಾರಣವಾಗಿವೆ. ೭೦ರದಶಕದ ಈಚೆಗೆ ಹಿರೇಗೌಡರು ಅನೇಕ ಮಾಧ್ಯಮಗಳಲ್ಲಿ ರೇಖಾಚಿತ್ರಗಳನ್ನು ರಚಿಸುತ್ತಾ ಬಂದಿದ್ದಾರೆ. ನವ್ಯಶೈಲಿಯಲ್ಲಿ ರಚಿಸಿದ ಕೃತಿಗಳು ಸಾಮಾಜಿಕ ಬದ್ಧತೆಯನ್ನು, ಎಡಪಂಥಿಯ ಧೋರಣೆಗಳನ್ನು ಬಿಂಬಿಸುವ ಹಾಗೂ ಇನ್ನಿತರೆ ವಿಷಯಗಳ ಕುರಿತಂತೆ ಅನೇಕ ರೇಖಾ ಚಿತ್ರಗಳನ್ನು ರಚಿಸಿದ್ದಾರೆ. ಇವುಗಳನ್ನು ಈ ಅಧ್ಯಾಯದಲ್ಲಿ ಮಾಧ್ಯಮವಾರು ಮತ್ತು ವಿಷಯವಾರು ವರ್ಗೀಕರಿಸಿಕೊಂಡು ಸಮಗ್ರವಾಗಿ ವಿಮರ್ಶೆಗೆ ಒಳಪಡಿಸಿ. ಪ್ರತಿ ಉಪ ಅಧ್ಯಾಯಗಳ ಕೊನೆಯಲ್ಲಿ ಒಟ್ಟಾರೆಯಾಗಿ ತೌಲನಿಕ ನೆಲೆಯಿಂದ ಚರ್ಚಿಸಲಾಗಿದೆ.

**ನಾಲ್ಕನೆಯ ಅಧ್ಯಾಯ**ದಲ್ಲಿ ಹಿರೇಗೌಡರು ಭಾವಚಿತ್ರ, ಪ್ರಕೃತಿ ಚಿತ್ರ, ಸಂಯೋಜನಾ ಚಿತ್ರಗಳು ಜಲವರ್ಣ, ತೈಲ ವರ್ಣ, ಪೇಸ್ಟಲ್, ಡ್ರೈ ಪೇಸ್ಟಲ್, ಎಕ್ರಿಲಿಕ್, ಪೋಸ್ಟರ್ ಇನ್ನೂ ಮುಂತಾದ ಮಾಧ್ಯಮಗಳನ್ನು ಪ್ರಾಯೋಗಿಕ ನೆಲೆಯಲ್ಲಿ ರಚಿಸಿರುವುದು ಅಧ್ಯಯನ ಸಂದರ್ಭದಲ್ಲಿ ಕಂಡುಬರುತ್ತದೆ. ಪ್ರಸ್ತುತ ವರ್ಣ ಕಲಾಕೃತಿಗಳಲ್ಲಿ ಎಂದಿನಂತೆ ಅವರು ಪ್ರಾಕೃತಿಕ, ಸಾಮಾಜಿಕ, ಧಾರ್ಮಿಕ ಇನ್ನೂ ಮುಂತಾದ ನೆಲೆಗಳಲ್ಲಿ ಅವರ ಚಿಂತನೆಗಳು ಮೂರ್ತರೂಪ ತಾಳಿವೆ. ಅವರ ಕೃತಿಗಳಲ್ಲಿ ತಂತ್ರಗಾರಿಕೆ, ಸಾಂಕೇತಿಕ ಛಾಯೆಗಳು ಹೇಗೆ ಮೂಡಿವೆ ಎಂಬುದನ್ನು ಪ್ರಸ್ತುತ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ.

**ಐದನೆಯ ಅಧ್ಯಾಯ**ದಲ್ಲಿ ಶಿಲ್ಪ ಮತ್ತು ಭಿತ್ತಿ ಶಿಲ್ಪಗಳನ್ನು ಸಾಂದರ್ಭಿಕವಾಗಿ ಉದ್ಯಮಗಳ ಮತ್ತು ಸಾರ್ವಜನಿಕ ಕಟ್ಟಡಗಳಲ್ಲಿ ರಚಿಸಿರುವುದನ್ನು ಕಾಣಬಹುದಾಗಿದೆ. ಹಾಗೆಯೇ ಧಾರ್ಮಿಕ ವಲಯದಲ್ಲೂ ಕೂಡ ಭಿತ್ತಿ ಶಿಲ್ಪಗಳನ್ನು ರಚಿಸಿರುವುದು ಹಿರೇಗೌಡರ ಪ್ರತಿಭೆಯ ವಿಸ್ತಾರಕ್ಕೆ ಸಾಕ್ಷಿ. ಹಿರೇಗೌಡರ ಅವರು ದಾವಣಗೆರೆಯ ಪ್ರಮುಖ ವೃತ್ತಗಳಲ್ಲಿ ರಾಜಕೀಯ ನಾಯಕರ, ಮಠ ಮಾನ್ಯಗಳಲ್ಲಿ ಧಾರ್ಮಿಕ ವ್ಯಕ್ತಿಗಳ ಭಾವ ಶಿಲ್ಪಗಳನ್ನು ರಚಿಸಿಕೊಟ್ಟಿದ್ದಾರೆ. ಹಾಗೆಯೇ ಚರ್ಚು ಆಸ್ಪತ್ರೆ, ಸ್ಮಶಾನ, ವೈಕುಂಠಧಾಮ, ಚಿತ್ರಮಂದಿರಗಳ ಹೊರಭಿತ್ತಿಯ ಮೇಲೆ ಪೂರಕ ವಿಷಯಗಳ ಭಿತ್ತಿಶಿಲ್ಪಗಳನ್ನು ಪ್ಲಾಸ್ಟರ ಆಫ್ ಪ್ಯಾರೀಸ್‌ನಲ್ಲಿ, ಸಿಮೆಂಟಿನಲ್ಲಿ ರಚಿಸಿರುವುದನ್ನು ಕಾಣಬಹುದಾಗಿದೆ. ಅವುಗಳ ರಚನಾ ವಿನ್ಯಾಸ, ತಂತ್ರಗಾರಿಕೆ, ಭಾವಾಭಿವ್ಯಕ್ತಿಗಳ ಕುರಿತಾಗಿ ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಆರನೆಯ ಅಧ್ಯಾಯ**ದಲ್ಲಿ ಹಿರೇಗೌಡರ ಕಲಾಕೃತಿಗಳಲ್ಲಿ ಅಡಗಿರುವ ಪ್ರಭಾವ, ಪ್ರೇರಣೆ, ಶೈಲಿ ಮತ್ತು ತಂತ್ರಗಾರಿಕೆಯ ಕುರಿತು ಅಧ್ಯಯನ ಮಾಡಲಾಗಿದೆ. ಹಿರೇಗೌಡರ ಬಹುತೇಕ ಕಲಾಕೃತಿಗಳಲ್ಲಿ ಪ್ರಭಾವಗಳು ಮೂಡಿವೆ. ಹಿರೇಗೌಡರ ಅವರು ಒಂದೇ ಶೈಲಿಯಲ್ಲಿ ಕೃತಿ ರಚಿಸಿದವರಲ್ಲ. ಶೈಲಿ ಎಂಬ ಮನೋಭಾವದಿಂದ ದೂರವಾಗಿದ್ದು ಕಾಲಕಾಲಕ್ಕೆ ಅವರ ಕೃತಿಗಳಲ್ಲಿ ಶೈಲಿಯು ಬದಲಾಗುತ್ತಾ ಹೋಗಿದೆ. ಆದರೂ "ಇವರದೇ ಕೃತಿ' ಇದು" ಎಂದು ಗುರುತಿಸುವ ಅಂಶ ಇವರ ಎಲ್ಲಾ ಕೃತಿಗಳಲ್ಲಿ ಪರೋಕ್ಷವಾಗಿ ಎದ್ದು ಕಾಣುತ್ತದೆ. ಪ್ರಾಪಂಚಿಕ ಘಟನೆಗಳು ನೈಸರ್ಗಿಕ ಘಟನೆಗಳು ಹಾಗೂ ಸಾಮಾಜಿಕ ಘಟನೆಗಳು ಇವರಿಗೆ ಕೃತಿರಚಿಸಲು ಹೇಗೆ ಪ್ರೇರಣೆ ನೀಡಿವೆ ಎಂಬುದನ್ನು ಕುರಿತು ಈ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

**ಏಳನೆಯ ಅಧ್ಯಾಯ**ದಲ್ಲಿ ಮಹಾಪ್ರಬಂಧದ ಆರು ಅಧ್ಯಾಯಗಳನ್ನು ಚರ್ಚಿಸಿ ಸಮಾರೋಪಿಸಲಾಗಿದೆ.

**ಅಧ್ಯಯನದ ಫಲಿತಗಳು**

ವಿ.ಬಿ.ಹಿರೇಗೌಡರ ಅವರ ಕುರಿತಾದ ಅಧ್ಯಯನವನ್ನು ಮೂರು ನೆಲೆಯಲ್ಲಿ ಮಾಡಲಾಗಿದೆ. ಒಂದನೆಯದು ಕಲಾಶಾಲೆಯ ಆಡಳಿತಗಾರರಾಗಿ, ಎರಡನೆಯದು ಕಲಾಶಿಕ್ಷಕರಾಗಿ ಹಾಗೂ

ಮೂರನೆಯದು ಸೃಜನಶೀಲ ಕಲಾವಿದರಾಗಿ ಅವರ ಬದುಕಿನ ವಿವರಗಳನ್ನು ಮತ್ತು ಕಲಾಕೃತಿಗಳ ಕುರಿತಾದ ಅಧ್ಯಯನ ಮಾಡಿದಾಗ ಈ ಕೆಳಗಿನ ಹೊಸ ಫಲಿತಗಳು ಬೆಳಕಿಗೆ ಬಂದಿವೆ.

ಭಾಗ : ಒಂದು **ಆಡಳಿತದ ನೆಲೆಯಲ್ಲಿ**

೧. ನಿಯಮಗಳ ಕಾನೂನಿನ ಇತಿಮಿತಿಯೊಳಗೆ ಸರಕಾರದ ಆರ್ಥಿಕ ಸೌಲಭ್ಯಗಳನ್ನು ಶಿಸ್ತುಬದ್ಧವಾಗಿ ಜಾರಿಗೆ ತರುವುದು.

೨. ದಾಖಲೆಗಳ ಮುಖಾಂತರವೇ ಆಡಳಿತ ನಿರ್ವಹಣೆ.

೩. ಸಹೋದ್ಯೋಗಿಗಳ ನೆರವಿನಿಂದ ಕಲಾಶಾಲೆಯ ಆಡಳಿತದಲ್ಲಿ ಪಾರದರ್ಶಕತೆ.

೪. ಸಹೋದ್ಯೋಗಿಗಳಿಗೆ ಆಡಳಿತಾತ್ಮಕ ನೆಲೆಯಲ್ಲಿ ಹೆಚ್ಚಿನ ವಿದ್ಯಾಭ್ಯಾಸಕ್ಕೆ ನೆರವು.

೫. ಸಹೋದ್ಯೋಗಿಗಳು ಬೇರೆಡೆಯಲ್ಲಿ ನಡೆಯುವ ವಿಚಾರ ಸಂಕಿರಣದಲ್ಲಿ ಉಪನ್ಯಾಸ ನೀಡಲು ಅವಕಾಶ ನೀಡಿದ್ದು.

ಇನ್ನೂ ಮುಂತಾದ ಆಡಳಿತಾತ್ಮಕ ಸುಧಾರಣೆಗಳನ್ನು ತಂದಿರುವುದು.

ಭಾಗ : ಎರಡು **ಕಲಾಶಿಕ್ಷಣದ ನೆಲೆಯಲ್ಲಿ**

೧. ವಿದ್ಯಾರ್ಥಿಗಳಿಗೆ ಹೊರ ರಾಜ್ಯದಲ್ಲಿ, ರಾಜ್ಯದಲ್ಲಿ ನಡೆಯುವ ಕಲಾಪ್ರದರ್ಶನಗಳಲ್ಲಿ ಭಾಗವಹಿಸಲು ಕಳುಹಿಸುವುದು.

೨. ಅಧ್ಯಯನಾಸಕ್ತ ವಿದ್ಯಾರ್ಥಿಗಳಿಗೆ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಅನುಕೂಲ ಕಲ್ಪಿಸಿ ಮಾರ್ಗದರ್ಶನ ನೀಡುವುದು.

೩. ವಿದ್ಯಾರ್ಥಿಗಳಿಗೆ ಹಿರಿಯ ಕಲಾವಿದರಿಂದ ಬೋಧನೆ, ಪ್ರಾತ್ಯಕ್ಷಿಕೆ ಕೊಡಿಸಿರುವುದು.

೪. ವಿದ್ಯಾರ್ಥಿಗಳಲ್ಲಿ ನಾಯಕತ್ವ ಗುಣಗಳನ್ನು ಗುರುತಿಸುವುದು, ಅವರನ್ನು ಆ ಮಾರ್ಗದಲ್ಲಿ ಪ್ರೋತ್ಸಾಹಿಸುವುದು ಹಾಗೂ ವಿದ್ಯಾರ್ಥಿವೇತನ ಕೊಡಿಸಿರುವುದು.

ಭಾಗ : ಮೂರು **ಸೃಜನಶೀಲ ಕಲಾವಿದರ ನೆಲೆಯಲ್ಲಿ**

೧. ಹಿರೇಗೌಡರ ಕಲಾಕೃತಿಯಲ್ಲಿ ಪ್ರಾಕೃತಿಕ ಘಟನೆಗಳಿಗೆ ಸ್ಪಂದಿಸುವ ಗುಣ ಇದೆ.

೨. ರಾಷ್ಟ್ರೀಯ ದುರಂತಗಳಿಗೆ ಸೃಜನಾತ್ಮಕ ದೃಶ್ಯ ಕಾವ್ಯಗಳನ್ನು ರಚಿಸಿ ಜನರನ್ನು ಎಚ್ಚರಿಸುವ ಪ್ರಜ್ಞೆ.

೩. ಇವರ ಕಲಾಕೃತಿಗಳಲ್ಲಿ ಪಟ್ಟಿಕೆಗಳು ಹಿನ್ನೆಲೆಯಲ್ಲಿ ಸಾಮಾನ್ಯವಾಗಿ ಗೋಚರವಾಗುತ್ತವೆ.

೪. ವರ್ಣಗಳನ್ನು ಶುದ್ಧತೆಯ ನಿರ್ವಹಣೆಯೊಂದಿಗೆ ದುಡಿಸಿಕೊಳ್ಳುವ ತಂತ್ರಗಾರಿಕೆಯನ್ನು ಕರಗತ ಮಾಡಿಕೊಂಡಿದ್ದಾರೆ.

೫. ಮಾನವೀಯ ಸಂಬಂಧಗಳನ್ನು ಅನುಕಂಪದ ನೆಲೆಯಲ್ಲಿ ನೋಡುವ ಪ್ರವೃತ್ತಿ.

೬. ಕ್ಯಾನ್ವಾಸಿನ ಮೂಲ ಮೈವಳಿಕೆಯನ್ನು ಉಳಿಸಿಕೊಂಡು ವರ್ಣ ಲೇಪನ ಮಾಡುವುದು.

೭. ಹೆಚ್ಚು ಪಾಲು ಕೃತಿಗಳಲ್ಲಿ ಬೆಳಕನ್ನು ವಿಶೇಷವಾಗಿ ಹಿನ್ನೆಲೆಯಿಂದ ತೆಗೆದುಕೊಂಡು ಮೂಲ ವಿಷಯಗಳಿಗೆ ಸ್ಪಷ್ಟತೆ ನೀಡುವುದು.

೮. ಪೂರಕ ವರ್ಣಮೇಳ, ರೇಖಾ ಲಾಲಿತ್ಯ, ವರ್ಣ ಲೇಪನ ವಿಧಾನ, ವಿಷಯ ವಸ್ತುಗಳಿಗೆ ಪೂರಕವಾಗಿ ವಿಭಿನ್ನ ರೀತಿ ವಿಂಗಡನಾ ಕ್ರಮ.

೯. ಪ್ರಮಾಣಬದ್ಧ ಅಂಗರಚನೆಗಳು, ಹಿತಮಿತವಾದ ವಸ್ತುಗಳ ಆಯ್ಕೆಯಲ್ಲಿ ಅವರ ಶ್ರಮ.

೧೦. ಜಲವರ್ಣ, ತೈಲವರ್ಣ, ಅಕ್ರಿಲಿಕ್ ವರ್ಣಗಳನ್ನು ದುಡಿಸಿಕೊಳ್ಳುವುದರ ಹಿಂದೆ ಅವರಿಗಿರುವ ಆಳವಾದ ಅಧ್ಯಯನ.

೧೧. ರೇಖಾಚಿತ್ರಗಳಲ್ಲಿನ ನಯಗಾರಿಕೆ, ನೇರ, ವಕ್ರ ರೇಖೆಗಳಲ್ಲಿ ದಿಟ್ಟತನ.

೧೨. ಪಾಶ್ಚಾತ್ಯ ಮತ್ತು ಭಾರತೀಯ ಶೈಲಿಗಳನ್ನು ಸಮೀಕರಿಸಿ ಚಿತ್ರಿಸಿರುವುದು.

ಹೀಗೆ ಹಿರೇಗೌಡರ ಅವರ ಅಧ್ಯಯನದಿಂದ ಹಲವಾರು ಹೊಸ ಫಲಿತಗಳನ್ನು ಕಂಡುಕೊಳ್ಳಲಾಗಿದೆ. ಅಧ್ಯಯನದ ವ್ಯಾಪ್ತಿಗೆ ಪೂರಕವಾಗಿ ವಿ.ಬಿ.ಹಿರೇಗೌಡರ ಅವರು ರಚಿಸಿದ ಎಲ್ಲ ಕಲಾಕೃತಿಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಿಲ್ಲ. ಅವರು ರಚಿಸಿದ ಸಾವಿರಾರು ರೇಖಾಚಿತ್ರಗಳು, ವರ್ಣಚಿತ್ರಗಳು ಮುಂದಿನ ಪೀಳಿಗೆಯ ಉತ್ಸಾಹಿ ಸಂಶೋಧಕರಿಗೆ ಪ್ರಮುಖ ಆಕರಗಳಾಗಿ ಲಭ್ಯವಾಗುವುದರಲ್ಲಿ ಎರಡು ಮಾತಿಲ್ಲ. ಹಿರೇಗೌಡರ ಅವರ ಅಧ್ಯಯನ **ಕನ್ನೆ ನೆಲ**ವೆಂದು ವಿನಮ್ರವಾಗಿ ತಿಳಿಯಪಡಿಸುತ್ತ ಈ ಮಹಾಪ್ರಬಂಧವನ್ನು ಸಮಾರೋಪಿಸಲಾಗಿದೆ.

********



# ಅನುಬಂಧಗಳು

ಪ್ರಾತ್ಯಕ್ಷಿಕೆ/ಕಲಾಕೃತಿಗಳ ಸಂಗ್ರಹದ ನೆಲೆಗಳು

ಕಲಾಶಿಬಿರಗಳು

ಪಡೆದ ಪ್ರಶಸ್ತಿಗಳು/ಏಕವ್ಯಕ್ತಿ ಪ್ರದರ್ಶನಗಳು

ವಿಚಾರ ಸಂಕಿರಣ/ಕಲಾಬರವಣಿಗೆ

ಗ್ರಂಥಋಣ

## ಎ.ಬಿ.ಹಿರೇಗೌಡರ ಕಲಾ ಪ್ರಾತ್ಯಕ್ಷಿಕೆಯನ್ನು ಪಡೆದುಕೊಂಡ ಸಂಸ್ಥೆಗಳು

೦೧. ವಿ.ವಿ.ಲಲಿತಕಲಾ ಮಹಾವಿದ್ಯಾಲಯ, ದಾವಣಗೆರೆ
೦೨. ಕರ್ನಾಟಕ ಚಿತ್ರಕಲಾ ಪರಿಷತ್, ಬೆಂಗಳೂರು
೦೩. ವಿಜಯಮಹಾಂತೇಶ ಲಲಿತಕಲಾ ಮಹಾವಿದ್ಯಾಲಯ, ಹುಬ್ಬಳ್ಳಿ
೦೪. ಐಡಿಯಲ್ ಫೈನ್ ಆರ್ಟ್ ಸೊಸಾಯಿಟಿ, ಗುಲಬರ್ಗಾ
೦೫. ವಿಜಯ ಕಲಾಮಂದಿರ, ಗದಗ
೦೬. ಸ್ಕೂಲ್ ಆಫ್ ಆರ್ಟ್ ಧಾರವಾಡ
೦೭. ದೃಶ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೦೮. ಸಿದ್ದೇಶ್ವರ ಕಲಾಮಂದಿರ, ವಿಜಾಪುರ
೦೯. ಉಮಾ ಚಿತ್ರಕಲಾ ಮಂದಿರ, ಬೆಳಗಾವಿ
೧೦. ಭಾರತೀಯ ಕಲಾಕೇಂದ್ರ, ಧಾರವಾಡ
೧೧. ಸರ್ಕಾರಿ ಕಲಾಶಾಲೆ, ಧಾರವಾಡ
೧೨. ಯೋಗೀಶ ಕಲಾಮಂದಿರ, ಬೀದರ
೧೩. ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗ, ಕನ್ನಡ ವಿ.ವಿ.ಹಂಪಿ. ಬಾದಾಮಿ ಕೇಂದ್ರ

ಇಷ್ಟೇ ಅಲ್ಲದೇ ಕನ್ನಡ ವಿ.ವಿ.ಯ ಸ್ನಾತಕೋತ್ತರ ವಿದ್ಯಾರ್ಥಿಗಳಿಗಾಗಿ ನಡೆಸಿದ ಸಂಪರ್ಕ ತರಗತಿಯಲ್ಲಿ ವಿಶೇಷ ಉಪನ್ಯಾಸ, ಸಂಯೋಜನಾ ಪ್ರಾತ್ಯಕ್ಷಿಕೆ ನೀಡಿದ್ದಾರೆ. ಅಲ್ಲಿನ ಬಿ.ವಿ.ಈಡಿ ವಿದ್ಯಾರ್ಥಿಗಳಿಗೆ ಪಠ್ಯಕ್ಕೆ ಸಂಬಂಧಿಸಿದಂತೆ, ಉಪನ್ಯಾಸ ಪ್ರಾತ್ಯಕ್ಷಿಕೆ ನೀಡಿದ್ದಾರೆ. ಅಲ್ಲದೇ ಹರಿಹರದ ಶ್ರೀಶೈಲ ಶಿಕ್ಷಣ ಮಹಾವಿದ್ಯಾಲಯ, ತುಮಕೂರಿನ ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯ, ದಾವಣಗೆರೆಯ ಎ.ಆರ್.ಜಿ.ಕಾಲೇಜು ಹಾಗೂ ಧ.ರಾ.ಮ.ಕಾಲೇಜು ಇನ್ನೂ ಮುಂತಾದ ಕಡೆಗಳಲ್ಲಿ ಉಪನ್ಯಾಸ, ಪ್ರಾತ್ಯಕ್ಷಿಕೆಗಳನ್ನು ಹಿರೇಗೌಡರು ನೀಡಿದ್ದಾರೆ.

********







ವಿವಿಧ ಸಂದರ್ಭಗಳಲ್ಲಿ ಕಲಾ ಪ್ರಾತ್ಯಕ್ಷಿಕೆ ನೀಡುತ್ತಿರುವ ಹಿರೇಗೌಡರು

# ಕಲಾಕೃತಿಗಳ ಸಂಗ್ರಹದ ನೆಲೆಗಳು

**ಭಾವಚಿತ್ರಗಳು**

೦೧. ಜೆ.ಡಿ.ಬಿರ್ಲಾ, ಹರಿಹರ ಪಾಲಿಫೈಬರ್ಸ್, ಹರಿಹರ

೦೨. ಶ್ರೀ ಶಿವಯೋಗಪ್ಪ, ವಕೀಲರು, ಅರುಣ ಚಿತ್ರ ಮಂದಿರ, ದಾವಣಗೆರೆ

೦೩. ಸಾವಂತ, ದೇವೇಂದ್ರಪ್ಪ ಸಾವಂತ್, ಡಿಸೈನರ್ಸ್, ದಾವಣಗೆರೆ

೦೪. ಗುರುದೇವ ರವೀಂದ್ರನಾಥ ಟಾಗೋರ್, ಸರಕಾರಿ ಪ್ರೌಢ ಶಾಲೆ, ಗುಡಗೇರಿ

೦೫. ಶ್ರೀ ಮೃತ್ಯುಂಜಯ ಅಪ್ಪಗಳು, ಎಂ.ಎಸ್. ಕಲಾ ಮತ್ತು ವಿಜ್ಞಾನ ಕಾಲೇಜು, ಹಂಸಭಾವಿ

೦೬. ಶ್ರೀ ಅಥಣಿ ಶಿವಯೋಗಿಗಳು, ಎಂ.ಎಸ್. ಕಲಾ ಮತ್ತು ವಿಜ್ಞಾನ ಕಾಲೇಜು, ಹಂಸಭಾವಿ

೦೭. ಶ್ರೀ ಮಹಾಂತ ಅಪ್ಪಗಳು, ಎಂ.ಎಸ್. ಕಲಾ ಮತ್ತು ವಿಜ್ಞಾನ ಕಾಲೇಜು, ಹಂಸಭಾವಿ

೦೮. ಐನ್ ಸ್ಟೈನ್, ಧ.ರಾಮ. ವಿಜ್ಞಾನ ಕಾಲೇಜು, ದಾವಣಗೆರೆ

೦೯. ಶ್ರೀ ಮೃತ್ಯುಂಜಯ ಅಪ್ಪಗಳು, ಮುಳುಗುಂದ ಇಂಡಸ್ಟ್ರೀಸ್, ಸಿರ್ಸಿ

೧೦. ಶ್ರೀ ಅಥಣಿ ಶಿವಯೋಗಿಗಳು, ಮುಳುಗುಂದ ಇಂಡಸ್ಟ್ರೀಸ್, ಸಿರ್ಸಿ

೧೧. ಶ್ರೀ ಮಹಾಂತ ಅಪ್ಪಗಳು, ಮುಳುಗುಂದ ಇಂಡಸ್ಟ್ರೀಸ್, ಸಿರ್ಸಿ

೧೨. ಶ್ರೀಮತಿ ಇಂದಿರಾಗಾಂಧಿ, ಯು.ಬಿ.ಡಿ.ಟಿ.ಇಂಜಿನಿಯರಿಂಗ್ ಕಾಲೇಜು, ದಾವಣಗೆರೆ

೧೩. ಕಲಾವಿದ ಸೋಮಶೇಖರ ಸಾಲಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು

೧೪. ಜಸಿಂದರ್ ಸಿಂಗ್, ಲೆಫ್ಟಿನಂಟ್ ಕರ್ನಲ್ (ರಿ), ಮೋಹಾಲಿ, ಉ.ಪ್ರ.

೧೫. ಶಾಮನೂರು ಶಿವಶಂಕರಪ್ಪ, ರಾಜಕಾರಣಿಗಳು, ಬಾಪೂಜಿ ಅಸೋಸಿಯೇಶನ್, ದಾವಣಗೆರೆ

೧೬. ಪಂಚಾಕ್ಷರಿ ಹಿರೇಮಠ, ವಿಜಯಮಹಾಂತೇಶ ಲಲಿತಕಲಾ ಮಹಾವಿದ್ಯಾಲಯ, ಹುಬ್ಬಳ್ಳಿ

**ಪೂರ್ಣಭಾವಚಿತ್ರಗಳು**

೦೧. ಶ್ರೀ ಮುರಘರಾಜೇಂದ್ರ ಜಗದ್ಗುರುಗಳು, ಬೃಹನ್‌ಮಠ, ಚಿತ್ರದುರ್ಗ

೦೨.ಶ್ರೀ ಶಿವಕುಮಾರ ಸ್ವಾಮಿಗಳು, ಸಿದ್ಧಗಂಗಾ, ಶ್ರೀ ಸಿದ್ಧಗಂಗಾ ಶಿಕ್ಷಣ ಮಹಾವಿದ್ಯಾಲಯ, ತುಮಕೂರು

೦೩. ಶ್ರೀಗುರು ತಿಪ್ಪೇರುದ್ರಸ್ವಾಮಿ, ನಾಯಕನಹಟ್ಟಿ

೦೪. ಬಸವಣ್ಣ, ಹೆಚ್.ಎಂ.ಸ್ವಾಮಿ, ಕೈಗಾರಿಕೋದ್ಯಮಿಗಳು, ದಾವಣಗೆರೆ

೦೫. ಶಿವಶರಣೆ ನೀಲಾಂಬಿಕೆ, ಬಸವಕೇಂದ್ರ ದಾವಣಗೆರೆ

೦೬. ಅರಿಹಂತ,

೦೭. ಶ್ರೀರಾಮಕೃಷ್ಣ ಪರಮಹಂಸ, ರಾಮಕೃಷ್ಣ ಆಶ್ರಮ, ದಾವಣಗೆರೆ

೦೮. ಶ್ರೀ ಮರುಳಸಿದ್ಧರು, ಅನುಭವ ಮಂಟಪ, ದಾವಣಗೆರೆ

೦೯. ಬಸವಣ್ಣ, ಬಸವ ಭವನ, ಬಳ್ಳಾರಿ

೧೦. ಐರಣಿ ಸ್ವಾಮಿಗಳು, ಹೊಳೆಮಠ, ಐರಣಿ, ರಾಣೀಬೆನ್ನೂರು ತಾಲೂಕು

೧೧. ಶಿವಶರನೆ ಅಕ್ಕಮಹಾದೇವಿ, ಅಕ್ಕಮಹಾದೇವಿ ಕಲ್ಯಾಣ ಮಂಟಪ, ದಾವಣಗೆರೆ

೧೨. ರಾಜಾ ವೀರ ಮದಕರಿ ನಾಯಕ, ಮದರಿಕರಿನಾಯಕ ವಸ್ತು ಸಂಗ್ರಹಾಲಯ, ಚಿತ್ರದುರ್ಗ

೧೩. ಶ್ರೀ ಚಂದ್ರಶೇಖರ ಸ್ವಾಮಿಜಿ, ಕುಪ್ಪೂರು ಗದ್ದಿಗೆ ಮಠ, ತುಮಕೂರು

೧೪. ರಾಷ್ಟ್ರಕವಿ ಕುವೆಂಪು, ಕುವೆಂಪು ವಿಶ್ವವಿದ್ಯಾನಿಲಯ, ಸ್ನಾತಕೋತ್ತರ ಕೇಂದ್ರ, ತೋಳಹುಣಸೆ, ದಾವಣಗೆರೆ

೧೫. ನಾಲ್ವಡಿ ಕೃಷ್ಣರಾಜ ಒಡೆಯರ್, ಎಸ್.ಕೆ.ಎಸ್.ಜೆ.ಟಿ.ಸಂಸ್ಥೆ, ಬೆಂಗಳೂರು
೧೬. ಚಿಗಟೇರಿ ಜಯಣ್ಣ, ಸ್ಕೌಟ್ಸ್ ಆಂಡ್ ಗೈಡ್ಸ್, ದಾವಣಗೆರೆ
೧೭. ಶ್ರೀ ಮೂಡಿ ಸ್ವಾಮಿಜಿ, ಮೂಡಿ ಮಠ, ಮೂಡಿ

**ಸಂಯೋಜನಾ ಚಿತ್ರಗಳು**

೦೧. ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು (೪ ಕೃತಿಗಳು)
೦೨. ಕೃತ್ತಿಕಾ ಆರ್ಟ್ ಗ್ಯಾಲರಿ, ಬೆಂಗಳೂರು
೦೩. ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು
೦೪. ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು
೦೫. ಬಯಲು ಚಿತ್ರಾಲಯ, ಸೋಣಂಗೇರಿ ಗ್ರಾಮ, ದ.ಕ. (೨ ಕೃತಿಗಳು)
೦೬. ರಾಷ್ಟ್ರೀಯ ಲಲಿತಕಲಾ ಅಕಾಡೆಮಿ ಪ್ರಾದೇಶಿಕ ಕೇಂದ್ರದ ಚಿತ್ರಕಲಾ ವಸ್ತು ಸಂಗ್ರಹಾಲಯ, ಚೆನ್ನೈ
೦೭. ದಕ್ಷಿಣ ಮಧ್ಯ ವಲಯ ಸಾಂಸ್ಕೃತಿಕ ಕೇಂದ್ರ, ನಾಗಪುರ
೦೮. ಸರಕಾರಿ ಪ್ರಾಚ್ಯ ವಸ್ತು ಸಂಗ್ರಹಾಲಯ, ವೆಂಕಟಪ್ಪ ಕಲಾಶಾಲೆ, ಬೆಂಗಳೂರು (೮ ಕಲಾಕೃತಿಗಳು)
೦೯. ಚಿತ್ರಕಲಾ ಪರಿಷತ್, ಬೆಂಗಳೂರು
೧೦. ಪಿ.ಎನ್. ಹೆರಿಟೇಜ್, ಸೋಮವಾರಪೇಟೆ, ಮಡಿಕೇರಿ (೪ ಕಲಾಕೃತಿಗಳು)
೧೧. ಎಲ್ ಶ್ರೀನಿವಾಸ, ನಿವೃತ್ತ ಹೈಕೋರ್ಟ್ ನ್ಯಾಯಾಧೀಶರು, ಬೆಂಗಳೂರು
೧೨. ಕ್ವಿಂಟನ್ ರಿಸಾರ್ಟ್, ದಾಸರಹಳ್ಳಿ, ಬೆಂಗಳೂರು
೧೩. ಡಿ.ಎಮ್.ಎಸ್. ಲಲಿತಕಲಾ ಮಹಾಸಂಸ್ಥಾನ, ಮೈಸೂರು
೧೪. ಡಾ.ಮಂಜುಳಾ, ವೈದ್ಯರು, ಮೈಸೂರು (೫ ಕಲಾಕೃತಿಗಳು)
೧೫. ಐಡಿಯಲ್ ಫೈನ್ ಆರ್ಟ್ ಸೊಸಾಯಿಟಿ, ಗುಲಬರ್ಗಾ (೩ ಕಲಾಕೃತಿಗಳು)
೧೬. ಎಸ್.ಬಿ.ಕಾಲೇಜ, ಗುಲಬರ್ಗಾ (೨ ಕಲಾಕೃತಿಗಳು)
೧೭. ಚಳ್ಳಗುರ್ಕಿ ಶ್ರೀ ಯರ್ರಿತಾತನವರ ಮಹಿಮಾ ಚಿತ್ರಗಳು, ಯರ್ರಿಸ್ವಾಮಿ ಕ್ಷೇತ್ರ, ಚೆಳ್ಳಗುರ್ಕಿ (೧೦ ಕಲಾಕೃತಿಗಳು)
೧೮. ನಾಯಕನಹಟ್ಟಿ ತಿಪ್ಪೇರುದ್ರಸ್ವಾಮಿ ಮಹಿಮಾ ಚಿತ್ರಗಳು, ನಾಯಕನಹಟ್ಟಿ (೨೫ ಕಲಾಕೃತಿಗಳು)
೧೯. ಹಾಲಬಾವಿ ಸ್ಕೂಲ್ ಆಫ್ ಆರ್ಟ್, ಧಾರವಾಡ, (೨ಕಲಾಕೃತಿಗಳು)

**ಪ್ರಕೃತಿ ಚಿತ್ರಗಳು**

೦೧. ಕೃತ್ತಿಕಾ ಆರ್ಟ್ ಗ್ಯಾಲರಿ, ಬೆಂಗಳೂರು
೦೨. ಪ್ರವಾಸಿ ಮಂದಿರ, ದಾವಣಗೆರೆ (೧೦ ಕಲಾಕೃತಿಗಳು)
೦೩. ಶ್ರೀಶೈಲ ಶಿಕ್ಷಣ ಮಹಾವಿದ್ಯಾಲಯ, ಹರಿಹರ (೫ ಕಲಾಕೃತಿಗಳು)
೦೪. ಜಿಲ್ಲಾಧಿಕಾರಿಗಳ ಕಛೇರಿ, ಚಿತ್ರದುರ್ಗ
೦೫. ಸರಕಾರಿ ಪಾಲಿಟೆಕ್ನಿಕ್, ಬಳ್ಳಾರಿ
೦೬. ಕನ್ನಡ ವಿಶ್ವವಿದ್ಯಾಲಯ, ಹಂಪಿ
೦೭. ಶಿಲ್ಪ ಮತ್ತು ವರ್ಣಚಿತ್ರಕಲಾ ವಿಭಾಗ, ಕನ್ನಡ ವಿ.ವಿ.ಹಂಪಿ, ಬಾದಾಮಿ ಕೇಂದ್ರ
೦೮. ಕನ್ನಡ ಸಂಘ, ಶಿವಮೊಗ್ಗ (೨ ಚಿತ್ರಗಳು)
೦೯. ಆರ್ಟಿಸ್ಟ್ ಕಂಬೈನ್ಸ್, ಮಂಗಳೂರು (೩ ಕಲಾಕೃತಿಗಳು)
೧೦. ಸಿದ್ದೇಶ್ವರ ಕಲಾಶಾಲೆ, ವಿಜಾಪುರ (೨ ಕಲಾಕೃತಿಗಳು)

**ಭಿತ್ತಿ ಚಿತ್ರಗಳು**

೦೧. ಸೋಣಂಗೇರಿ ಬಯಲು ಚಿತ್ರಾಲಯ, ಸೋಣಂಗೇರಿ, ದ.ಕ.

೦೨. ವೈಕುಂಠ ಧಾಮ, ದಾವಣಗೆರೆ.

೦೩. ವಿಶ್ರಾಂತಿ, ಡಿ.ಎಮ್.ಎಸ್. ಲಲಿತಕಲಾ ಮಹಾಸಂಸ್ಥಾನ, ಮೈಸೂರು.

೦೪. ದಾಸೋಹ ದರ್ಶನ, ಎಸ್.ಬಿ.ಕಾಲೇಜ, ಗುಲಬರ್ಗಾ.

**ಶಿಲ್ಪಗಳು**

೦೧. ಕುಂಚಬ್ರಹ್ಮ, ಕು.ವಿ.ವಿ.ಲಲಿತಕಲಾ ಮಹಾವಿದ್ಯಾಲಯ, ದಾವಣಗೆರೆ.

೦೨. ದಿ.ಬಿ.ಭೀಮರಾವ್, ನ್ಯಾಯವಾದಿಗಳು, ದಾವಣಗೆರೆ, ಮಾಧ್ವ ಸಂಘ ಸಮುದಾಯ ಭವನ, ದಾವಣಗೆರೆ.

೦೩. ಆರೋಗ್ಯ ಮಾತೆಯ ಶಿಲ್ಪ, ಕ್ರೈಸ್ತ ದೇವಾಲಯ, ಹರಿಹರ.

**ಭಿತ್ತಿಶಿಲ್ಪಗಳು**

೦೧. ಭರತನಾಟ್ಯ ಭಂಗಿಗಳ ಉಬ್ಬು ಶಿಲ್ಪ, ಅರುಣ ಚಿತ್ರಮಂದಿರ, ದಾವಣಗೆರೆ.

೦೨. ಹಿಪೋಕ್ರೆಟಿಸ್, ಉಬ್ಬು ಶಿಲ್ಪ, ಚಿಗಟೇರಿ ಸಾರ್ವಜನಿಕ ಆಸ್ಪತ್ರೆ, ದಾವಣಗೆರೆ.

೦೩. ನೃತ್ಯ ಸರಣಿ ರೂಪದ ಎರಡು ಭಿತ್ತಿ ಶಿಲ್ಪಗಳು ಶಿವಾಲಿ ಚಿತ್ರಮಂದಿರ, ದಾವಣಗೆರೆ.

೦೪. ಯೋಗಿ ವೇಮನ ಉಬ್ಬು ಶಿಲ್ಪ, ರೆಡ್ಡಿ ಜನಸಂಘ ವಾಣಿಜ್ಯ ಸಂಕೀರ್ಣ, ಚಿತ್ರದುರ್ಗ.

೦೫. ವರ್ಣ ಬಿಂದು, ಹಿರೇಗೌಡರ ವೈಯಕ್ತಿಕ ಸಂಗ್ರಹದಲ್ಲಿದೆ.

೦೬. ವಸಂತ ನೃತ್ಯ, ಹಿರೇಗೌಡರ ವೈಯಕ್ತಿಕ ಸಂಗ್ರಹದಲ್ಲಿದೆ.

## ಭಾಗವಹಿಸಿದ ಕಲಾಶಿಬಿರಗಳು

೧. ೧೯೮೦ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯು ಬೆಂಗಳೂರಿನಲ್ಲಿ ಡಾ.ಕೆ.ಕೆ.ಹೆಬ್ಬಾರ ಅವರ ನೇತೃತ್ವದಲ್ಲಿ ಏರ್ಪಡಿಸಿದ ಕಲಾಶಿಬಿರದಲ್ಲಿ ಭಾಗವಹಿಸಿದ್ದಾರೆ.

೨. ೧೯೮೨ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯು ಹಂಪಿಯಲ್ಲಿ ನಡೆಸಿದ ಕಲಾ ವಿದ್ಯಾರ್ಥಿ ಶಿಬಿರದಲ್ಲಿ ಗೌರವ ಕಲಾವಿದರಾಗಿ ಭಾಗವಹಿಸಿದ್ದಾರೆ.

೩. ೧೯೮೭ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯು ಗುಲಬರ್ಗಾದಲ್ಲಿ ನಡೆಸಿದ ಕಲಾಶಿಬಿರದಲ್ಲಿ ಗೌರವ ಕಲಾವಿದರಾಗಿ ಭಾಗವಹಿಸಿದ್ದಾರೆ.

೪. ೧೯೮೮ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ವ್ಯವಸ್ಥೆ ಮಾಡಿದ ರಾಜ್ಯಮಟ್ಟದ ಕಲಾಶಿಕ್ಷಕ ಮತ್ತು ಕಲಾವಿದರ ಶಿಬಿರ, ವಿದ್ಯಾನಗರ, ಬೆಂಗಳೂರು ಇದರ ನಿರ್ದೇಶಕರಾಗಿ ಕಾರ್ಯನಿರ್ವಹಿಸಿದ್ದಾರೆ.

೫. ೧೯೮೯ರಲ್ಲಿ ನೆಹರು ಶತಮಾನೋತ್ಸವದ ಅಂಗವಾಗಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಇವರು ಸಂಘಟಿಸಿದ "ನೆಹರು ಮತ್ತು ಪ್ರಕೃತಿ" ವಿಷಯದ ಕಲಾಶಿಬಿರದಲ್ಲಿ ಭಾಗವಹಿಸಿದ್ದಾರೆ.

೬. ೧೯೮೯ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿಯು ತನ್ನ ಸದಸ್ಯರಿಗಾಗಿ ನಂದಿಬೆಟ್ಟದಲ್ಲಿ ವ್ಯವಸ್ಥೆಗೊಳಿಸಿದ ಕಲಾಶಿಬಿರದಲ್ಲಿ ಭಾಗವಹಿಸಿದ್ದಾರೆ.

೭. ೧೯೯೦ರಲ್ಲಿ ವೈ.ಎಂ.ಸಿ.ಎ. ಮಂಗಳೂರು ಹಾಗೂ ಆಫೀಸರ್ ಕ್ಲಬ್, ಮಂಗಳೂರು ಇವರ ಸಂಯುಕ್ತ ಆಶ್ರಯದಲ್ಲಿ 'ಸಮರ್ ಸ್ಯಾಂಡ್'ನಲ್ಲಿ ವ್ಯವಸ್ಥೆಗೊಳಿಸಿದ ಅಡ್ವೆಂಚರ್ ಶಿಬಿರದಲ್ಲಿ ಕಲಾತಜ್ಞರಾಗಿ ಭಾಗವಹಿಸಿದ್ದಾರೆ.

೮. ೧೯೯೨ರಲ್ಲಿ ಡಾ. ರೋರಿಚ್ ಇಂಟರ್ ನ್ಯಾಷನಲ್ ಟ್ರಸ್ಟ್, ಇಂಡಿಯಾ ಸಂಸ್ಥೆಯವರು ಬೆಂಗಳೂರಿನ ತಾತಗುಣಿ ಎಸ್ಟೇಟ್‌ನಲ್ಲಿ ವ್ಯವಸ್ಥೆಗೊಳಿಸಿದ ಜಲವರ್ಣ ಕಲಾಶಿಬಿರದಲ್ಲಿ ಭಾಗವಹಿಸಿದ್ದಾರೆ.

೯. ೧೯೯೩ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ಇವರು ಮಡಿಕೇರಿಯಲ್ಲಿ ನಡೆಸಿದ ನಿಸರ್ಗ ಚಿತ್ರ ಹಾಗೂ ಭಾವಚಿತ್ರ ಕಲಾಶಿಬಿರದಲ್ಲಿ ಭಾಗವಹಿಸಿದ್ದಾರೆ.

೧೦. ೧೯೯೩ರಲ್ಲಿ "ನಿರತನಿರಂತ" ಸಾಂಸ್ಕೃತಿಕ ಸಂಸ್ಥೆ, ಸುಳ್ಯ ಇವರು ವ್ಯವಸ್ಥೆ ಮಾಡಿದ್ದ ಸೋಣಂಗೇರಿಯ ಬಯಲು ಚಿತ್ರಾಲಯ ಕಲಾಶಿಬಿರದಲ್ಲಿ ಭಾಗವಹಿಸಿದ್ದಾರೆ.

೧೧. ೧೯೯೩ರಲ್ಲಿ ಗುಲಬರ್ಗಾದ ಐಡಿಯಲ್ ಫೈನ್ ಆರ್ಟ್ ಸಂಸ್ಥೆಯವರು ವ್ಯವಸ್ಥೆಗೊಳಿಸಿದ ಅಂತರಾಷ್ಟ್ರೀಯ ಚಿತ್ರಕಲೆ ಮತ್ತು ಶಿಲ್ಪಕಲಾ ಶಿಬಿರದಲ್ಲಿ ಭಾಗವಹಿಸಿದ್ದಾರೆ.

೧೨. ೨೦೦೦ರಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ನಡೆಸಿದ ಲಲಿತಕಲಾ ಮೇಳದಲ್ಲಿ ಆಹ್ವಾನಿತ ಕಲಾವಿದರಾಗಿ ಭಾಗವಹಿಸಿದ್ದಾರೆ.

೧೩. ಐಫ್ಯಾಕ್ಸ ನವದೆಹಲಿ ಇವರು ಆಯೋಜಿಸಿದ ಅಖಿಲ ಭಾರತ ಮಟ್ಟದ ಮಿಲೇನಿಯಮ್ ಕಲಾಶಿಬಿರದಲ್ಲಿ ಪಾಲ್ಗೊಂಡು ಕರ್ನಾಟಕವನ್ನು ಪ್ರತಿನಿಧಿಸಿದ್ದಾರೆ.

೧೪. ೨೦೦೩ರಲ್ಲಿ ಸಂಸ್ಕಾರ ಭಾರತಿ, ಬೆಂಗಳೂರು ಇವರು ಕನ್ನಡ ವಿಶ್ವವಿದ್ಯಾಲಯ, ಹಂಪಿಯಲ್ಲಿ ಆಯೋಜಿಸಿದ ಅಖಿಲ ಭಾರತ ಮಟ್ಟದ ಕಲಾಶಿಬಿರದಲ್ಲಿ ಭಾಗವಹಿಸಿದ್ದಾರೆ.

೧೫. ಹಂಪಿ ಉತ್ಸವ ೨೦೦೩ರ ಅಂಗವಾಗಿ ಸರಕಾರಿ ವಸ್ತು ಸಂಗ್ರಹಾಲಯ ಏರ್ಪಡಿಸಿದ ಕರ್ನಾಟಕ ಕಲಾವಿದರ ಶಿಬಿರದಲ್ಲಿ ಭಾಗವಹಿಸಿದ್ದಾರೆ.

೧೬. ೨೦೦೩ರಲ್ಲಿ ಕರ್ನಾಟಕ ಸರಕಾರದ ವಸ್ತು ಸಂಗ್ರಹಾಲಯ ಹಾಗೂ ಇಂಟ್ಯಾಕ್ ಇವರ ಸಂಯುಕ್ತ ಆಶ್ರಯದಲ್ಲಿ ಶ್ರೀರಂಗ ಪಟ್ಟಣದಲ್ಲಿ ಆಯೋಜಿಸಿದ್ದ ಅಖಿಲ ಕರ್ನಾಟಕ ಮಟ್ಟದ ಕಲಾಶಿಬಿರದಲ್ಲಿ ಭಾಗವಹಿಸಿದ್ದಾರೆ.



ಜೋಧಪುರದಲ್ಲಿ ನಡೆದ ಕಲಾಶಿಕ್ಷಕರ ಬೇಸಿಗೆ ಶಿಬಿರದಲ್ಲಿ ಹಿರೇಗೌಡರ (೧೯೭೧)




ನಾಗಪುರದ ಎಸ್.ಸಿ.ಝಡ್.ಸಿ.ಸಿ.ಯ ಅಖಿಲ ಭಾರತ ಕಲಾಸ್ಪರ್ಧೆಯ ಪ್ರಶಸ್ತಿ ವಿಜೇತರೊಂದಿಗೆ ಹಿರೇಗೌಡರ ಮತ್ತು ಪತ್ನಿ (ಅಕ್ಟೋಬರ್ ೧೯೯೫)



ಗುಲಬರ್ಗಾದ ಶರಣ ಬಸವೇಶ್ವರ ಸಂಸ್ಥಾನದಲ್ಲಿ ನಡೆದ
ಅಖಿಲ ಭಾರತ ಕಲಾಶಿಬಿರದ ಶಿಬಿರಾರ್ಥಿಗಳೊಂದಿಗೆ ಹಿರೇಗೌಡರ (೨೦ ಅಕ್ಟೋಬರ್ ೧೯೯೫)



ಧಾರವಾಡ ಸ್ಕೂಲ್ ಆಫ್ ಆರ್ಟ್ಸನ ವಜ್ರಮಹೋತ್ಸವದ ಅಂಗವಾಗಿ ನಡೆದ ಕಲಾಶಿಬಿರದ ಶಿಬಿರಾರ್ಥಿಗಳೊಂದಿಗೆ ಹಿರೇಗೌಡರ. (೨೫ ಡಿಸೆಂಬರ್ ೧೯೯೫)




ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆದ ಸಂಸ್ಕಾರ ಭಾರತಿಯ ಕಲಾಶಿಬಿರದ ಶಿಬಿರಾರ್ಥಿಗಳೊಂದಿಗೆ ಹಿರೇಗೌಡರ. (೫ ಜನೇವರಿ ೨೦೦೩)



ಕಲಾ ಪ್ರಾತ್ಯಕ್ಷಿಕೆ ನೀಡುತ್ತಿರುವ ಪಿ.ಬಿ.ಹಿರೇಗೌಡರ

## ಪಡೆದ ಪ್ರಶಸ್ತಿಗಳು

೧. ೧೯೬೬ರಲ್ಲಿ ಲಲಿತಕಲಾ ಡಿಪ್ಲೋಮಾ ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್ ಪಡೆದ ಪ್ರಯುಕ್ತ ೫೦೦ ರೂಪಾಯಿ ನಗದು ಬಹುಮಾನ ಪಡೆದಿರುವರು.

೨. ಕರ್ನಾಟಕ ವಿಶ್ವವಿದ್ಯಾಲಯ ಆಯೋಜಿಸಿದ ಅಖಿಲ ಕರ್ನಾಟಕ ಮಟ್ಟದ ಕಲಾ ಪ್ರದರ್ಶನದಲ್ಲಿ ಕ್ರಮವಾಗಿ ೧೯೭೩, ೧೯೭೪ ಪ್ರಕೃತಿ ಚಿತ್ರ ಮತ್ತು ಸಂಯೋಜನಾ ಚಿತ್ರಕ್ಕೆ ಪ್ರಥಮ ಪ್ರಶಸ್ತಿ.

೩. ೧೯೭೫ ಮತ್ತು ೧೯೭೬ರಲ್ಲಿ ಮೈಸೂರು ದಸರಾ ಕಲಾ ಪ್ರದರ್ಶನದಲ್ಲಿ ಕ್ರಮವಾಗಿ ಪ್ರಥಮ ಮತ್ತು ದ್ವಿತೀಯ ಬಹುಮಾನ ಮತ್ತು ೧೯೮೯ರ ಪ್ರದರ್ಶನದಲ್ಲಿ ಅತ್ಯುತ್ತಮ ಚಿತ್ರವೆಂದು ಆಯ್ಕೆಯಾಗಿ ೧೦೦೦ ರೂಪಾಯಿ ನಗದು ಬಹುಮಾನ ಪಡೆದಿದ್ದಾರೆ.

೪. ೧೯೭೭ರಲ್ಲಿ ಧಾರವಾಡ ಲಯನ್ಸ್ ಕ್ಲಬ್‌ನ ಕಲಾಪ್ರದರ್ಶನದಲ್ಲಿ ಸಂಯೋಜನಾ ಚಿತ್ರಕ್ಕೆ ಪ್ರಥಮ ಬಹುಮಾನ ಪಡೆದಿದ್ದಾರೆ.

೫. ೧೯೮೨ರಲ್ಲಿ ಗದುಗಿನ ವಿಜಯ ಕಲಾ ಸಂಸ್ಥೆಯ ಪ್ರಾದೇಶಿಕ ಮಟ್ಟದ ಕಲಾ ಪ್ರದರ್ಶನದಲ್ಲಿ ಮೆರಿಟ್ ಸರ್ಟಿಫಿಕೇಟ್ ಪಡೆದುಕೊಂಡಿದ್ದಾರೆ.

೬. ೧೯೯೧ನೆಯ ಸಾಲಿನ ಕರ್ನಾಟಕ ಲಲಿತಕಲಾ ಅಕಾಡೆಮಿಯವರು ಕಲೆ ಹಾಗೂ ಕಲಾಶಿಕ್ಷಣದಲ್ಲಿ ಉನ್ನತ ಸೇವೆ ಸಲ್ಲಿಸಿರುವುದನ್ನು ಗುರುತಿಸಿ ಇವರಿಗೆ ಗೌರವ ಪ್ರಶಸ್ತಿ ನೀಡಿ ೭.೫೦೦ರೂಪಾಯಿಗಳನ್ನು ನೀಡಿದೆ.

೭. ೧೯೯೨ರಲ್ಲಿ ನಾಗಪುರದಲ್ಲಿ ದಕ್ಷಿಣ ಮಧ್ಯ ವಲಯ ಸಾಂಸ್ಕೃತಿಕ ಕೇಂದ್ರದವರು ೬ನೆಯ ಅಖಿಲ ಭಾರತ ಮಟ್ಟದ ಕಲಾಸ್ಪರ್ಧೆಯಲ್ಲಿ ೩,೦೦೦ರೂಪಾಯಿಗಳ ಪ್ರಶಸ್ತಿ ಪಡೆದಿದ್ದಾರೆ.

೮. ೧೯೯೩ರಲ್ಲಿ ಕರ್ನಾಟಕ ಲಲಿತಕಲಾ ಅಕಾಡೆಮಿ ವ್ಯವಸ್ಥೆಗೊಳಿಸಿದ ೨೩ನೆಯ ವಾರ್ಷಿಕ ಕಲಾ ಪ್ರದರ್ಶನದಲ್ಲಿ ಅತ್ಯುತ್ತಮ ಕಲಾಕೃತಿ ಎಂದು ಪರಿಗಣಿಸಿ ೫,೦೦೦ ರೂಪಾಯಿ ಬಹುಮಾನ ಪಡೆದಿದ್ದಾರೆ.

೯. ೧೯೯೫ರಲ್ಲಿ ನಾಗಪುರದ ದಕ್ಷಿಣ ಮಧ್ಯವಲಯ ಸಾಂಸ್ಕೃತಿಕ ಕೇಂದ್ರದವರು ವ್ಯವಸ್ಥೆ ಮಾಡಿದ ೯ನೆಯ ಅಖಿಲ ಭಾರತ ಮಟ್ಟದ ಕಲಾ ಸ್ಪರ್ಧೆಯಲ್ಲಿ ಇವರ ತೈಲವರ್ಣ ಚಿತ್ರಕ್ಕೆ ಅತ್ಯುತ್ತಮ ಕಲಾಕೃತಿಯೆಂದು ಪ್ರಶಸ್ತಿ ಪತ್ರ ನೀಡಲಾಗಿದೆ.

೧೦. ೨೦೦೦ರಲ್ಲಿ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯಕ್ಕಾಗಿ ನಡೆದ ಅಖಿಲ ಭಾರತ ಮಟ್ಟದ ಲಾಂಛನ ವಿನ್ಯಾಸ ಸ್ಪರ್ಧೆಯಲ್ಲಿ ವಿಜೇತರಾಗಿ ೧೦.೦೦೦ರುಪಾಯಿ ನಗದು ಬಹುಮಾನ ಪಡೆದಿದ್ದಾರೆ.

೧೧. ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಎಜ್ಯುಕೇಶನ್ ಮತ್ತು ಮ್ಯಾನೇಜ್‌ಮೆಂಟ್, ನವದೆಹಲಿ ಇವರು ಕಲೆ ಮತ್ತು ಕಲಾಶಿಕ್ಷಣದಲ್ಲಿ, ಉನ್ನತ ಸೇವೆ ಸಲ್ಲಿಸಿರುವುದನ್ನು ಗುರುತಿಸಿ, ಜುವೆಲ್ ಆಫ್ ಇಂಡಿಯಾ ಪ್ರಶಸ್ತಿ ನೀಡಿ ಗೌರವಿಸಿದೆ.



ಪ್ರಶಸ್ತಿಗಳೊಂದಿಗೆ ವಿ.ಬಿ.ಹಿರೇಗೌಡರ



ನಾಯಕನಹಟ್ಟಿಯ ಎಸ್.ಟಿ.ಎಸ್.ಆರ್. ಪ್ರೌಢಶಾಲೆಯ
ಸಮಾರಂಭದಲ್ಲಿ ಸನ್ಮಾನ ಸ್ವೀಕರಿಸುತ್ತಿರುವ ಹಿರೇಗೌಡರ (೩೧ ಡಿಸೆಂಬರ್ ೧೯೭೬)



ಸಿದ್ಧಗಂಗಾ ಮಠದ ಶ್ರೀ ಶಿವಕುಮಾರ ಸ್ವಾಮಿಜಿ
ಅವರಿಂದ ಆಶೀರ್ವಾದ ಪಡೆಯುತ್ತಿರುವ ಹಿರೇಗೌಡರ (೨೫ ಫೆಬ್ರುವರಿ ೧೯೭೭)



ಇಲಕಲ್ಲಿನ ಶ್ರೀ ಮಹಾಂತ ಸ್ವಾಮಿಜಿ ಅವರಿಂದ
ಆಶೀರ್ವಾದ ಪಡೆಯುತ್ತಿರುವ ಹಿರೇಗೌಡರು (೨ ಅಕ್ಟೋಬರ್ ೧೯೮೬)



೧೯೯೧ನೆಯ ಸಾಲಿನ ಕರ್ನಾಟಕ ಲಲಿತಕಲಾ ಅಕಾಡೆಮಿಯ ಗೌರವ ಪ್ರಶಸ್ತಿಯನ್ನು
ಧರ್ಮಸ್ಥಳದ ಡಾ.ವೀರೇಂದ್ರ ಹೆಗ್ಗಡೆಯವರಿಂದ ಪಡೆಯುತ್ತಿರುವ ಹಿರೇಗೌಡರ.



೧೯೯೧ರ ಚಿತ್ರದುರ್ಗ ಉತ್ಸವದಲ್ಲಿ ರೈಲ್ವೆ ಸಚಿವರಾದ ಜಾಫರ್ ಷರೀಫ್
ಇವರಿಂದ ಸನ್ಮಾನ ಸ್ವೀಕರಿಸುತ್ತಿರುವ ಹಿರೇಗೌಡರು (೨೮ ನವೆಂಬರ್ ೧೯೯೧)



೬೧ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ
ಸನ್ಮಾನಗೊಳ್ಳುತ್ತಿರುವ ಹಿರೇಗೌಡರ (೧೨ ಜನೇವರಿ ೧೯೯೨)



ಅಕ್ಷರದಾನ ಸಮಿತಿಗೆ ಲಾಂಛನ ರಚಿಸಿಕೊಟ್ಟ ಹಿನ್ನೆಲೆಯಲ್ಲಿ
ಜಿಲ್ಲಾಧಿಕಾರಿ ಕೆ. ಶಿವರಾಮ ಇವರಿಂದ 'ಸನ್ಮಾನಗೊಳ್ಳುತ್ತಿರುವ ಹಿರೇಗೌಡರು. (೨೩ ಏಪ್ರಿಲ್ ೨೦೦೧)




ದಾವಣಗೆರೆಯ ವಿಶ್ವವಿದ್ಯಾಲಯ ಲಲಿತಕಲಾ ಮಹಾವಿದ್ಯಾಲಯದ ಪ್ರಾಚಾರ್ಯರಾಗಿ
ಸೇವೆ ಸಲ್ಲಿಸಿ ನಿವೃತ್ತರಾಗುವ ಸಂದರ್ಭದಲ್ಲಿ ಸನ್ಮಾನಿಸಲ್ಪಡುತ್ತಿರುವ ಹಿರೇಗೌಡರು.







ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು

ಗೌರವ ಪ್ರಶಸ್ತಿ ೧೯೯೧

ಶ್ರೀ ಶ್ರೀಮತಿ ಪಿ.ಜಿ.ಹಿರೇಗೌಡರ್
ಅವರು ಕರ್ನಾಟಕ ಲಲಿತ ಕಲೆಯ
ಕ್ಷೇತ್ರದಲ್ಲಿ ಸಲ್ಲಿಸಿರುವ ಅಮೂಲ್ಯ
ಸೇವೆಗಾಗಿ ಕರ್ನಾಟಕ ಲಲಿತಕಲಾ
ಅಕಾಡೆಮಿಯ ೧೯೯೧ ರ ಗೌರವ
ಪ್ರಶಸ್ತಿಯನ್ನು ನೀಡಿ ಸನ್ಮಾನಿಸಿದೆ.

ಮುಖ್ಯ ಅತಿಥಿಗಳು | ಅಧ್ಯಕ್ಷರು

ರಿಜಿಸ್ಟ್ರಾರ್

ದಿನಾಂಕ 20-1-93








ಕಲಾವಿದ ಪಿ.ಜಿ. ಹಿರೇಗೌಡರ ಅವರು ಪಡೆದಿರುವ ಪ್ರಶಸ್ತಿಗಳು

## ಏಕ ವ್ಯಕ್ತಿ ಪ್ರದರ್ಶನಗಳು

| | | |
|---|---|---|
| ೦೧. | ೧೯೭೪,೧೯೭೬,೧೯೭೯ | ದಾವಣಗೆರೆ |
| ೦೨. | ೧೯೭೩, ೧೯೭೪, ೧೯೭೭, ೧೯೮೫ | ಬೆಂಗಳೂರು |
| ೦೩. | ೧೯೭೪, ೧೯೮೧ | ಚಿತ್ರದುರ್ಗ |
| ೦೪. | ೧೯೭೨, ೧೯೭೬, ೧೯೮೧ | ಗುಡಿಗೇರಿ |
| ೦೫. | ೧೯೭೭ | ಕೆ.ಜಿ.ಎಫ್. ಬಂಗಾರಪೇಟೆ, ದೊಡ್ಡಬಳ್ಳಾಪುರ |
| ೦೬. | ೧೯೭೬ | ಮಾನ್ವಿ ಮತ್ತು ರಾಯಚೂರು |
| ೦೭. | ೧೯೭೯ | ಶಿವಮೊಗ್ಗ |
| ೦೮. | ೧೯೮೦ | ಕಾರವಾರ ಮತ್ತು ವಿಜಾಪುರ |
| ೦೯. | ೧೯೮೨ | ಹಾಲಭಾವಿ ಆರ್ಟ್ ಗ್ಯಾಲರಿ ಧಾರವಾಡ |
| ೧೦. | ೧೯೮೬ | ಇಳಕಲ್ |
| ೧೧. | ೧೯೯೦ | ಜಿಲ್ಲಾ ಸಾಹಿತ್ಯ ಸಮ್ಮೇಳನ, ಸಿರಿಗೆರೆ |
| ೧೨. | ೧೯೯೩ | ಕಲಾಗುರು ಆರ್ಟ್ ಗ್ಯಾಲರಿ, ದಾವಣಗೆರೆ |
| ೧೩. | ೧೯೯೫ | ಹಾಲಭಾವಿ ಸ್ಕೂಲ್ ಆಫ್ ಆರ್ಟ್, ಧಾರವಾಡ |
| ೧೪. | ೧೯೯೯ | ಸರಕಾರಿ ಕಲಾ ಗ್ಯಾಲರಿ, ಧಾರವಾಡ |
| ೧೫. | ೨೦೦೨ | 'ನಾದವರ್ಣ', ಕರ್ನಾಟಕ ಚಿತ್ರಕಲಾ ಪರಿಷತ್, ಬೆಂಗಳೂರು |







ಕರ್ನಾಟಕ ವಿಶ್ವವಿದ್ಯಾಲಯದ ಪೋಸ್ಟ್ ಗ್ರ್ಯಾಜುಯೇಟ್ ಜಿಮಖಾನದವರು ಏರ್ಪಡಿಸಿದ ಕಲಾಪ್ರದರ್ಶನದ ಕ್ಯಾಟ್‌ಲಾಗ್‌ನ ರಕ್ಷಾ ಪುಟದಲ್ಲಿ ಹಿರೇಗೌಡರ್ ಅವರ ಕಲಾಕೃತಿ ಪ್ರಕೃತಿ ಚಿತ್ರಣಕ್ಕೆ ೨ನೆಯ ಬಹುಮಾನ ಪಡೆದ ಕಲಾಕೃತಿ (೧೯೭೦)

MAX MUELLER BHAVAN

BANGALORE

INDO GERMAN CULTURAL CENTRE



ಕಲಾಶಾಲೆಯ ತಮ್ಮ ಸಹೋದ್ಯೋಗಿಗಳೊಂದಿಗೆ ಹಿರೇಗೌಡರು ಬೆಂಗಳೂರಿನ ಮ್ಯಾಕ್ಸ್ ಮುಲ್ಲರ್ ಭವನದಲ್ಲಿ ಏರ್ಪಡಿಸಿದ ಕಲಾ ಪ್ರದರ್ಶನದ ಆಹ್ವಾನ ಪತ್ರಿಕೆ (೧೯೭೩)



ಬೆಂಗಳೂರಿನ ಕೃತ್ತಿಕಾ ಆರ್ಟ್ ಗ್ಯಾಲರಿಯಲ್ಲಿ ನಡೆದ ಹಿರೇಗೌಡರ ಅವರ ಪ್ರಥಮ ಏಕವ್ಯಕ್ತಿ ಕಲಾ ಪ್ರದರ್ಶನವನ್ನು ಬೆಂಗಳೂರು ಮಹಾನಗರ ಪಾಲಿಕೆಯ ಮೇಯರ್ ಮುನಿಕೃಷ್ಣ ಅವರು ಉದ್ಘಾಟಿಸುತ್ತಿರುವುದು.



ಗುಡಗೇರಿಯಲ್ಲಿ ನಡೆದ ಹಿರೇಗೌಡರ ಅವರ ಏಕವ್ಯಕ್ತಿ ಕಲಾಪ್ರದರ್ಶನವನ್ನು
ಶಾಸಕರಾದ ಡಿ.ಕೆ.ನಾಯ್ಕರ್ ಉದ್ಘಾಟಿಸುತ್ತಿರುವುದು.(ಫೆಬ್ರುವರಿ ೧೯೭೫)



ದಾವಣಗೆರೆಯ ಸರಕಾರಿ ಕಲೆ ಮತ್ತು
ಕರಕುಶಲ ಶಾಲೆಯ ಅಧ್ಯಾಪಕರ
ಕಲಾಪ್ರದರ್ಶನವನ್ನು ಎಸ್.ಎಮ್.ಕೃಷ್ಣ
ಉದ್ಘಾಟಿಸುತ್ತಿರುವುದು.
(ಬೆಂಗಳೂರು ನವೆಂಬರ್ ೧೯೭೩)



ಕೆ.ಜಿ.ಎಫ್.ನಲ್ಲಿ ನಡೆದ ಹಿರೇಗೌಡರ ಅವರ ಏಕವ್ಯಕ್ತಿ
ಕಲಾಪ್ರದರ್ಶನದಲ್ಲಿ ಮಾತನಾಡುತ್ತಿರುವ ಹಿರೇಗೌಡರ. (೧೬ ಜೂನ್ ೧೯೭೮)



ಇಲಕಲ್ಲಿನ ಶ್ರೀ ವಿಜಯ ಮಹಾಂತೇಶ ಮಠದಲ್ಲಿ ಹಿರೇಗೌಡರ ಅವರ
ಏಕವ್ಯಕ್ತಿ ಕಲಾಪ್ರದರ್ಶನವನ್ನು ಉದ್ಘಾಟಿಸುತ್ತಿರುವ ಶ್ರೀಗಳು. (೨ ಅಕ್ಟೋಬರ್ ೧೯೮೬)



ಕರ್ನಾಟಕ ಚಿತ್ರಕಲಾ ಪರಿಷತ್ತಿನಲ್ಲಿ ನಡೆದ ಹಿರೇಗೌಡರ ಅವರ ರೆಟ್ರೊಸ್ಪೆಕ್ಟಿವ್ ಕಲಾಪ್ರದರ್ಶನವನ್ನು
ಉದ್ಘಾಟಿಸಿ, ವೀಕ್ಷಿಸುತ್ತಿರುವ ಪೋಲೀಸ್ ಮಹಾ ನಿರ್ದೇಶಕ ಸಾಂಗ್ಲಿಯಾನ. (೨೨ ಮೇ ೨೦೦೨)

೧. **ವಿಷಯ : ಕರ್ನಾಟಕದಲ್ಲಿ ಕಲೆ ಹಾಗೂ ಕಲಾಶಿಕ್ಷಣ**
ಸಂಘಟಕರು : ಐಡಿಯಲ್ ಫೈನ್ ಆರ್ಟ್ ಇನ್ಸ್‌ಟಿಟ್ಯೂಟ್, ಗುಲಬರ್ಗಾ, ೧೯೯೨

೨. **ವಿಷಯ : ಚಿತ್ರಕಲೆ- ಶಿಕ್ಷಣದ ತಾಯಿ ಬೇರು**
ಸಂಘಟಕರು : ದ.ಕ.ಜಿಲ್ಲಾ ಕಲಾಶಿಕ್ಷಕ ಸಂಘದ ಶೈಕ್ಷಣಿಕ ಮಹಾ ಸಮ್ಮೇಳನ, ಕಾರ್ಕಳ ೧೯೯೭

೩. **ವಿಷಯ : ಕಲೆ ಮತ್ತ ಭಾವೈಕ್ಯತೆ**
ಸಂಘಟಕರು : ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ತುಮಕೂರು, ೧೯೯೧

೪. **ವಿಷಯ : ಕರ್ನಾಟಕ ಕಲಾಶಿಕ್ಷಣದ ಪ್ರಗತಿ**
ಸಂಘಟಕರು : ಕರ್ನಾಟಕ ಚಿತ್ರಕಲಾ ಪರಿಷತ್, ಬೆಂಗಳೂರು ಮತ್ತು ರಾಷ್ಟ್ರೀಯ ಲಲಿತಕಲಾ ಅಕಾಡೆಮಿ, ನವದೆಹಲಿ, ೧೯೮೫ (ಬೆಂಗಳೂರು)

೫. **ವಿಷಯ : ಹಿರಿಯ ಕಲಾವಿದರು ಮತ್ತು ಸಮಕಾಲೀನ ಕಲೆ**
ಸಂಘಟಕರು : ಕರ್ನಾಟಕ ಚಿತ್ರಕಲಾ ಪರಿಷತ್, ಬೆಂಗಳೂರು ಮತ್ತು ರಾಷ್ಟ್ರೀಯ ಲಲಿತಕಲಾ ಅಕಾಡೆಮಿ, ನವದೆಹಲಿ ೧೯೮೮ (ಬೆಂಗಳೂರು)

೬. **ವಿಷಯ : ಕಲಾಶಿಕ್ಷಣ ಅಂದು-ಇಂದು (ಸಂವಾದ)**
ಸಂಘಟಕರು : ಸರ್ಕಾರಿ ವಸ್ತು ಸಂಗ್ರಹಾಲಯ, ಇಂಟ್ಯಾಕ್, ವೆಂಕಟಪ್ಪ ಚಿತ್ರಶಾಲೆ, ಬೆಂಗಳೂರು ೨೦೦೩

**ಕಲಾಬರೆಹಗಳು**

೧. **ಕಲೆ ಮತ್ತು ಸಮಕಾಲೀನತೆ :** ನಿಜದ ನೆಲೆ, ಡಾ.ಬಿ.ಕೆ.ಹಿರೇಮಠರ ಅಭಿನಂದನ ಗ್ರಂಥ

೨. **ಕಲೆ ಮತ್ತು ಬದುಕು : ಚಿತ್ರಾಕ್ಷಿ :** ಡಿ.ವಿ.ಹಾಲಭಾವಿ ಸ್ಕೂಲ್ ಆಫ್ ಆರ್ಟ್‌ನ ರಜತಮಹೋತ್ಸವ ಸ್ಮರಣ ಸಂಚಿಕೆ




ಕಾರ್ಕಳದಲ್ಲಿ ನಡೆದ ಶೈಕ್ಷಣಿಕ ಮಹಾಸಮ್ಮೇಳನದಲ್ಲಿ
ಮಾತನಾಡುತ್ತಿರುವ ಹಿರೇಗೌಡರ. (೨೧ ಫೆಬ್ರುವರಿ ೧೯೯೭)




ಕುವೆಂಪು ವಿಶ್ವವಿದ್ಯಾಲಯದಲ್ಲಿ ನಡೆದ ಕಲಾ ಇತಿಹಾಸ ವಿಚಾರ ಸಂಕಿರಣದಲ್ಲಿ
ಮಾತನಾಡುತ್ತಿರುವ ಹಿರೇಗೌಡರ. (೧೧ ಜೂನ್ ೧೯೯೯)



ದಿವಂಗತ ಟಿ.ಪಿ.ಅಕ್ಕಿ ದತ್ತಿನಿಧಿ ಕಾರ್ಯಕ್ರಮದಲ್ಲಿ
ಕಾರ್ಯಕ್ರಮದಲ್ಲಿ ಮಾತನಾಡುತ್ತಿರುವ ಹಿರೇಗೌಡರ. (೨೮ ನವೆಂಬರ್ ೨೦೦೦)

# ಗ್ರಂಥಋಣ


ಆಲೇಖ್ಯ — ಡಾ.ಅ.ಲ.ನರಸಿಂಹನ್
ಸಂಯೋಜಿತ, ಬೆಂಗಳೂರು – ೧೯೯೯

ಕಲಾವಿದ ಹೆಬ್ಬಾರರ ರೇಖಾಲಾವಣ್ಯ — ವ್ಯಾಸರಾಯ ಬಲ್ಲಾಳ
ನವಕರ್ನಾಟಕ ಪ್ರಕಾಶನ, ಬೆಂಗಳೂರು–೧೯೯೯

ಕಲೆ ಎಂದರೇನು ? — ಸಿ.ಪಿ.ಕೆ.
ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು–೨೦೦೦

ಕಲಾವಿದ ಎಂ.ಎ.ಚೆಟ್ಟಿಯವರ ಜೀವನ, ಕಲಾಕೃತಿಗಳು — ಲಕ್ಷ್ಮೀದೇವಿ ಗವಾಯಿ
ಒಂದು ಅಧ್ಯಯನ
ಅಪ್ರಕಟಿತ ಪಿಹೆಚ್.ಡಿ. ಮಹಾಪ್ರಬಂಧ
ಕನ್ನಡ ವಿಶ್ವವಿದ್ಯಾಲಯ, ಹಂಪಿ – ೨೦೦೨

ಕಲಾ ಪ್ರಪಂಚ — ಡಾ.ಶಿವರಾಮ ಕಾರಂತ
ಕರ್ನಾಟಕ ವಿಶ್ವವಿದ್ಯಾಲಯ,ಧಾರವಾಡ – ೧೯೭೮

ಕನ್ನಡ ವಿಶ್ವಕೋಶ ಸಂಪುಟ : ೪ — ಸಂ: ಹಾ.ಮಾ.ನಾಯಕ
ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾಲಯ, ಮೈಸೂರು. ೧೯೭೨

ಕಲಾನುಭವ — ವೀ.ಸೀತಾರಾಮಯ್ಯ
ಬೆಂಗಳೂರು ವಿಶ್ವವಿದ್ಯಾಲಯ,ಬೆಂಗಳೂರು. ೧೯೭೬

ಕಲಾ ಸಂವೇದನೆಯ ಒಳನೋಟಗಳು — ಕೆ.ವಿ.ಸುಬ್ರಮಣ್ಯಂ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು. ೧೯೯೭

ಕಲಾ ಕೋಶ — ಸಂ: ಎನ್.ಮರಿಶಾಮಾಚಾರ್
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು. ೧೯೯೪

ಕರ್ನಾಟಕದ ಆಧುನಿಕ ಶಿಲ್ಪಕಲೆ — ಕೆ.ವಿ.ಸುಬ್ರಮಣ್ಯಂ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು. ೧೯೯೬

ಕರ್ನಾಟಕದ ಜನಪದ ಚಿತ್ರಕಲೆ — ಡಾ.ಎಸ್.ಸಿ.ಪಾಟೀಲ
ವೀರಶೈವ ಅಧ್ಯಯನ ಸಂಸ್ಥೆ
ಶ್ರೀ ಜ.ತೋಂಟದಾರ್ಯ ಸಂಸ್ಥಾನಮಠ,ಗದಗ. ೧೯೯೩

ಕರ್ನಾಟಕ ಸಂಸ್ಕೃತಿ ಸಮೀಕ್ಷೆ — ಡಾ. ಎಚ್.ತಿಪ್ಪೇರುದ್ರಸ್ವಾಮಿ
ಮೈಸೂರು– ೧೯೯೨

ಕಲೆಗಳಲ್ಲಿ ಸಂಸ್ಕೃತಿ ಹಾಗೂ ಪರಂಪರೆ
ಸ್ಪಂದನ ಚಿತ್ರಕಲಾವಿದರ ಯುವ ಬಳಗ
ಬೆಂಗಳೂರು. ೧೯೮೯
ಕೆ.ವಿ.ಸುಬ್ರಮಣ್ಯಂ

ಚಿತ್ರ ಚಿತ್ತ
ಇಳಾ ಪ್ರಕಾಶನ, ಬೆಂಗಳೂರು – ೨೦೦೦
ಜಿ.ಸು.ಕೃಷ್ಣಸೆಟ್ಟಿ

ಚಿತ್ರಕಲಾ
ಪ್ರೊ.ಎಂ.ಎಸ್.ನಂಜುಂಡರಾವ್ ಅಭಿನಂದನಾ ಗ್ರಂಥ
ಕರ್ನಾಟಕ ಚಿತ್ರಕಲಾ ಪರಿಷತ್ತು
ಬೆಂಗಳೂರು
ಪ್ರೊ.ಎಸ್.ಕೆ.ರಾಮಚಂದ್ರರಾವ್ (ಸಂ)

ಚಿತ್ರಕಲೆ ಮತ್ತು ಮನೋವಿಕಾಸ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು. ೧೯೯೪
ಡಾ.ಸಿ. ಆರ್.ಚಂದ್ರಶೇಖರ

ನಮ್ಮನಾಡು ಕರ್ನಾಟಕ
ನವಕರ್ನಾಟಕ ಪ್ರಕಾಶನ, ಬೆಂಗಳೂರು – ೧೯೯೭
ಡಾ.ಎಚ್.ಎಸ್.ಗೋಪಾಲರಾವ್

ನಿಜದ ನೆಲೆ
ಡಾ.ಬಿ.ಕೆ ಹಿರೇಮಠ ಅಭಿನಂದನ ಗ್ರಂಥ
ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ
ಬಾಗಲಕೋಟೆ. ೨೦೦೩
ಪ್ರಸಂ:ಡಾ.ಬಿ.ಆರ್.ಹಿರೇಮಠ

ಪಿ. ಆರ್.ತಿಪ್ಪೇಸ್ವಾಮಿ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು. ೧೯೯೪
ಡಾ.ಜೀ.ಶಂ.ಪರಮಶಿವಯ್ಯ

ಪಿ.ಸುಬ್ಬರಾವ್
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು. ೧೯೯೪
ಎಂ. ಎಸ್.ನಂಜುಂಡರಾವ್

ಪೋಸ್ಟ್ ಮಾಡರ್ನಿಸಂ
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು
೧೯೯೫
ನೇಮಿರಾಜ ಶೆಟ್ಟಿ

ಫೋಟೋರಿಯಲಿಸಂ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು. ೧೯೯೫
ಕೆ.ವಿ.ಸುಬ್ರಮಣ್ಯಂ

ಭಾರತೀಯ ಚಿತ್ರಕಲೆ
ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು.
ಡಾ.ಶಿವರಾಮ ಕಾರಂತ

ರೇಖಾಚಿತ್ರ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು. ೧೯೯೧
ಸಂ: ಬಿ.ವಿ.ಕೆ.ಶಾಸ್ತ್ರೀ

ವರ್ಣಾವರಣ
ಚಿತ್ತಾರ ಪ್ರಕಾಶನ
ಬೆಂಗಳೂರು. ೨೦೦೧
ಚಿ.ಸು.ಕೃಷ್ಣಸೆಟ್ಟಿ

ವರ್ಣ ಸಂಚಯ
ವಿಜಯ ಚಿತ್ರಕಲಾ ಮಹಾವಿದ್ಯಾಲಯ
ಇಲಕಲ್ಲ. ೨೦೦೧
ಡಾ.ಎಸ್.ಸಿ.ಪಾಟೀಲ

ಶಿಲ್ಪಕಲೆ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು. ೧೯೯೬
ವಿಜಯಾರಾವ್

ಶ್ರೀ ತಿಪ್ಪಾಜಪ್ಪನವರ ರೇಖಾಚಿತ್ರಗಳು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಬೆಂಗಳೂರು. ೨೦೦೩
ಕೆ.ಜ್ಞಾನೇಶ್ವರ, ಡಾ.ಅಲ.ನರಸಿಂಹನ್

ಸಮಕಾಲೀನ ಕಲೆ
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು. ೧೯೭೮
ಸಂ: ಬಿ.ವಿ.ಕೆ.ಶಾಸ್ತ್ರೀ

ಸಂಯೋಜನೆ
ಸಂಯೋಜಿತ ಪ್ರಕಾಶನ
ಬೆಂಗಳೂರು. ೧೯೭೮
ಅ.ಲ.ನರಸಿಂಹನ್

ಸಮಕಾಲೀನ ಕಲೆ –೧ ವಿಕೃತರೂಪ
ಕರ್ನಾಟಕ ಲಲಿತಕಲಾ ಅಕಾಡೆಮಿ .
ಬೆಂಗಳೂರು. ೧೯೮೮
ಸಂ: ಎಸ್. ಎನ್.ಚಂದ್ರಶೇಖರ

ಸೃಷ್ಟಿ
ಡಾ.ಬಿ.ಕೆ ಹಿರೇಮಠರ ಲೇಖನಗಳ ಗ್ರಂಥ
ವೈರಾಗ್ಯದ ಮಲ್ಲಣಾರ್ಯ ಪ್ರಕಾಶನ
ಬಾಗಲಕೋಟೆ. ೨೦೦೩
ಡಾ.ಬಿ.ಕೆ.ಹಿರೇಮಠ

ಸಾಹಿತ್ಯ–ಕಲೆಗಳಲ್ಲಿ ಪರಿವರ್ತನೆ ಮತ್ತು ಪ್ರಗತಿ
ಸಂಯುಕ್ತ ವೇದಿಕೆ
ಬೆಂಗಳೂರು. ೧೯೯೧
ಸಂ: ಎಂ. ಎಚ್.ಕೃಷ್ಣಯ್ಯ

ಸೌಂದರ್ಯ ಮತ್ತು ರಸಾಸ್ವಾದನೆ
ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು. ೧೯೮೯
ಸಂ: ಎಂ. ಎಚ್.ಕೃಷ್ಣಯ್ಯ

**ಪತ್ರಿಕಾ ಲೇಖನಗಳು**

ಬಿ.ವಿ.ಕೆ.ಶಾಸ್ತ್ರಿ: ಪ್ರಜಾವಾಣಿ : ಕುರ್ಚಿಯ ಹಲವು ಮುಖ : ೧೯೮೫

ಜಿ.ಎನ್.ಮೋಹನ :ಪ್ರಜಾವಾಣಿ : ಹಿರೇಗೌಡರ್: ರೇಖೆಗಳ ಕನಸುಗಾರ:೧೯೯೧

ದತ್ತಾತ್ರೇಯ ಭಟ್ಟ : ಜನತಾವಾಣಿ : ರಮ್ಯನೋಟಗಳ ಚಿತ್ರಕಲಾವಿದ ವಿ.ಬಿ.ಹಿರೇಗೌಡರ್ :೨೪.೧೧.೧೯೯೯

ದತ್ತಾತ್ರೇಯ ಭಟ್ಟ : ಉದಯವಾಣಿ : ರೋಮ್ಯಾಂಟಿಕ್ ನೆಲೆಯ ಚಿತ್ರಗಳು :೩೧.೧೧.೧೯೯೯

ಎಚ್.ಎ.ಅನಿಲ್‌ಕುಮಾರ : ಚಿತ್ರಕಲಾ ಕ್ಯಾಂಪ್ ನ್ಯೂಸ್ ಲೆಟರ : ವರದಿ : ೨೦೦೧

ವರದಿ, ದಿ ನ್ಯೂ ಇಂಡಿಯನ್ ಎಕ್ಸಪ್ರೆಸ್ : Jewel of India to exhibit soon : ೨೪.೦೪.೨೦೦೨

ವರದಿ, ರೇವ್ ಪತ್ರಿಕೆ : "30,000 Paintings & 35 years in pursuit of excellence: ೦೩.೦೫.೨೦೦೨

ಜಿ.ಎನ್.ಪ್ರಶಾಂತ್ : ದಿ ಹಿಂದೂ : "Art from the heart" : ೧೦.೦೫.೨೦೦೨

ರಂಗರಾಜ : ಟೈಮ್ಸ ಆಫ್ ಇಂಡಿಯಾ : "Canvases in retrospect"೨೨.೦೫.೨೦೦೨

ಶುಭ ಶ್ರೀಕಾಂತ : ಡೆಕ್ಕನ್ ಹೆರಾಲ್ಡ : "Harmony his vision":೨೬.೦೫.೨೦೦೨

ಚಿ.ಸು.ಕೃಷ್ಣಸೆಟ್ಟಿ : ಪ್ರಜಾವಾಣಿ : ಬದುಕಿನ ಸಂಭ್ರಮಕ್ಕೆ ಸಂಭ್ರಮಾತ್ಮಕ ಪ್ರತಿಕ್ರಿಯೆ : ೦೧.೦೬.೨೦೦೨

ಎಲ್. ಶಿವಲಿಂಗಪ್ಪ : ಉದಯವಾಣಿ : ಅನ್ವರ್ಥನಾಮವಾಗಿರಿಸಿಕೊಂಡ ಹಿರೇಗೌಡರ್ : ೧೧.೦೨.೨೦೦೩

ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ : ಪ್ರಜಾವಾಣಿ : ಬದುಕಿನ ಸಂಭ್ರಮಕ್ಕೆ ಬಣ್ಣಗಳ ಚಿತ್ತಾರ : ೩೦.೦೩.೨೦೦೩

ವರದಿ : ಪ್ರಜಾವಾಣಿ : ಕರ್ನಾಟಕ ಕುಂಚ : ಬನ್ನಿ, ನೋಡಿ ನೀವೂ ಕೊಂಚ! ೧೪.೧೦.೨೦೦೪

ಆರ್ಯ : ಪ್ರಜಾವಾಣಿ : ಸಮಕಾಲೀನ ಕಲೆಯ ಒಲವು ಸವಾಲುಗಳು :೨೭.೦೨.೨೦೦೫

ಟಿ.ಜಯತಿಪ್ಪೇಶ : ಡೆಕ್ಕನ್ ಹೆರಾಲ್ಡ : A Career full of colour : ೧೨.೦೪.೨೦೦೫

********

